# ತ್ರೈತ ಸಿದ್ಧಾಂತ











ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು


*www.thraithashakam.org*







# ತ್ರೈತ ಸಿದ್ಧಾಂತ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (74) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)
(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016
ಪ್ರತಿಗಳು : 1000 **ಬೆಲೆ. 110/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮಿಣಾರಾಯಣಾಚಾರಿ–09440556968.
ವೆಂಕಟೇಶ್–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)
Cell : 9632418716

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಶಿವರಾಜ**
(ಸಾ)(ಕಿ) ಕುಕನೂರು (ಪೊ) ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನಂ. –38, ಬೆಂಗಳೂರು–560085
Cell : 9036982829

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನಂ. –38, ಬೆಂಗಳೂರು–560068
Cell : 08970772028, 07411459912, 07406039453

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ಮೊದಲು ಸಿದ್ಧಾಂತ ಎನ್ನುವ ಪದವೊಂದರ ವಿವರವನ್ನು ಕುರಿತು ತಿಳಿದುಕೊಳ್ಳೋಣ. ಸಿದ್ಧಾಂತ ಎನ್ನುವ ಪದದಲ್ಲಿ ಎರಡು ಶಬ್ದಗಳು ಒಳಗೊಂಡಿವೆ. ಅವುಗಳನ್ನು ಬಿಡಿಸಿ ನೋಡಿದರೆ ಸಿದ್ಧ+ಅಂತ ಎಂದು ಎರಡು ಭಾಗಗಳ ಶಬ್ಧಗಳು ತಿಳಿಯುತ್ತಿವೆ. ಅಂತ ಎಂದರೆ ಕೊನೆ ಎಂದು ಅರ್ಥವಿದೆ. ಸಿದ್ಧ ಎಂದರೆ ಲಭಿಸುವುದೆಂದು ಅರ್ಥ. ಸಿದ್ಧಾಂತ ಎಂದರೆ ಕೊನೆಯಲ್ಲಿ ಲಭಿಸುವುದೆಂದು ಅರ್ಥ. ಒಂದು ಕೆಲಸವನ್ನು ಮಾಡಿದರೆ ಕೊನೆಯಲ್ಲಿ ಅದರ ಫಲ ಲಭಿಸುತ್ತದೆ. ಒಂದು ಲೆಕ್ಕವನ್ನು (ಗಣಿತದಲ್ಲಿ) ಮಾಡಿದರೆ ಅದಕ್ಕೆ ಕೊನೆಯಲ್ಲಿ ಉತ್ತರ ಸಿಗುತ್ತದೆ. ಈ ವಿಧವಾಗಿ ಒಂದು ಕೆಲಸದಲ್ಲಿನ ಕೊನೆಯ ಫಲವನ್ನಾಗಲಿ, ಒಂದು ಗಣಿತ ಲೆಕ್ಕದಲ್ಲಿನ ಉತ್ತರವನ್ನಾಗಲಿ, ಪದ್ಧತಿ ಪ್ರಕಾರ ಸಿದ್ಧಾಂತ ಎಂದು ಅನ್ನಬಹುದು. ತಪ್ಪದೆ ಕೊನೆಯಲ್ಲಿ ಫಲಿತವನ್ನು ತೋರಿಸುವುದು ಸಿದ್ಧಾಂತ ಆದಾಗ, ಸಿದ್ಧಾಂತ ಯಾವ ಕಾರ್ಯದಲ್ಲಾದರೂ ಇರಬಹುದು. ಶಾಸ್ತ್ರ ಒಂದು ಕೆಲಸವೊಂದರ ಪೂರ್ತಿ ವಿವರವನ್ನು ತಿಳಿಸುತ್ತದೆ. ಶಾಸ್ತ್ರ ತಿಳಿಸಿದ ವಿವರದ ಪ್ರಕಾರ ಅದನ್ನು ಮಾಡಿದಾಗ, ಶಾಸ್ತ್ರ ಹೇಳಿದ ಫಲಿತ ಕಾಣಿಸಿದಾಗ, ಅದನ್ನು ಶಾಸ್ತ್ರೀಯತೆ ಎನ್ನುತ್ತೇವೆ. ಭೂಮಿಮೇಲೆ ಇರುವ ಆರು ಶಾಸ್ತ್ರಗಳಲ್ಲಿ ಎಷ್ಟೋ ಸಿದ್ಧಾಂತಗಳು ಇವೆ. ಶಾಸ್ತ್ರವಿದ್ದಾಗ ಅದಕ್ಕೆ ಶಾಸ್ತ್ರೀಯತೆ ಇದ್ದಹಾಗೆ, ಸಿದ್ಧಾಂತವಿದ್ದಾಗ ಸಿದ್ಧಿ (ಫಲಿತ) ತಪ್ಪದೆ ಇರುತ್ತದೆ. ಒಂದು ಶಾಸ್ತ್ರದಲ್ಲಿ ಎಷ್ಟು ಸಿದ್ಧಾಂತಗಳಾದರೂ ಇರಬಹುದು. ಗಣಿತಶಾಸ್ತ್ರ, ಖಗೋಳಶಾಸ್ತ್ರ, ರಸಾಯನ ಶಾಸ್ತ್ರ, ಭೌತಿಕಶಾಸ್ತ್ರ ಎನ್ನುವ ನಾಲ್ಕು ಶಾಸ್ತ್ರಗಳಲ್ಲಿ ನಮ್ಮ ಶಾಸ್ತ್ರಜ್ಞರು ಎಷ್ಟೋ ಸಿದ್ಧಾಂತಗಳನ್ನು ಕಂಡುಹಿಡಿದಿದ್ದಾರೆ. ಖಗೋಳಶಾಸ್ತ್ರದಲ್ಲಿ ಸೂರ್ಯನ ಸುತ್ತಾ ಭೂಮಿ ತಿರುಗುತ್ತಿದೆಯೆಂದು, ಸೂರ್ಯನು ಒಂದು ಗೋಳವೆಂದು, ಭೂಮಿ ಸಹ ಒಂದು ಗೋಳವೆಂದು 'ಗೆಲೀಲಿಯೊ' ತನ್ನ ಸಿದ್ಧಾಂತವನ್ನು ತಿಳಿಸಿದಾಗ ಅದು ಶಾಸ್ತ್ರೀಯವಾಗಿಹೋಗಿದೆ. ಹಾಗೆ 'ನ್ಯೂಟನ್' ಎನ್ನುವವನು ಭೂಮಿಗೆ ಆಕರ್ಷಣಶಕ್ತಿ ಇದೆಯೆಂದು ತನ್ನ ಸಿದ್ಧಾಂತವನ್ನು ತಿಳಿಸಿದ್ದಾನೆ. ಹೀಗೆ ಪ್ರಪಂಚ ಸಂಬಂಧವಾದ ಗಣಿತ, ಖಗೋಳ, ರಸಾಯನ, ಭೌತಿಕ ಎನ್ನುವ ನಾಲ್ಕು ಶಾಸ್ತ್ರಗಳಲ್ಲಿ ಮನುಷ್ಯರು ಎಷ್ಟೋ ಸಿದ್ಧಾಂತಗಳನ್ನು ಕಂಡುಹಿಡಿದಿದ್ದಾರೆ. ಆದ್ದರಿಂದ

ಆ ನಾಲ್ಕು ಶಾಸ್ತ್ರಗಳಲ್ಲಿ ಎಷ್ಟೋ ಪುರೋಗತಿ ಹೊಂದಿದ ಮಾನವಜಾತಿ, ಆಯಾ ಶಾಸ್ತ್ರಗಳ ಶಾಸ್ತ್ರೀಯತೆಯಿಂದ ಎಷ್ಟೋ ಸುಖಗಳನ್ನು ಅನುಭವಿಸುತ್ತಿದೆ.

ಷಟ್‌ಶಾಸ್ತ್ರಗಳು ಹೊರತು ಇತರ ಶಾಸ್ತ್ರಗಳು ಭೂಮಿಮೇಲೆ ಇಲ್ಲವೆಂದು ಎಲ್ಲರೂ ನೆನಪಲ್ಲಿಟ್ಟುಕೊಳ್ಳಬೇಕು. ಅವುಗಳಲ್ಲಿ ನಾಲ್ಕು ಶಾಸ್ತ್ರಗಳು ಬಹಳ ಅಭಿವೃದ್ಧಿ ಹೊಂದಿವೆ. ಅವುಗಳ ಫಲಗಳನ್ನು (ಶಾಸ್ತ್ರೀಯತೆಯನ್ನು) ನಾವು ಅನುಭವಿಸುತ್ತಿದ್ದೇವೆ. ಗಣಿತಶಾಸ್ತ್ರದಲ್ಲಿ ಎಷ್ಟೋ ಸೂತ್ರಗಳು ಇವೆ. ಆ ಸೂತ್ರಗಳನ್ನೇ ಆ ಶಾಸ್ತ್ರಗಳಲ್ಲಿನ ಸಿದ್ಧಾಂತಗಳೆನ್ನಬಹುದು. ಒಂದು ಶಾಸ್ತ್ರದಲ್ಲಿನ ಸಿದ್ಧಾಂತಗಳೆಲ್ಲವು ಬೇರೆಬೇರೆ ಮನುಷ್ಯರಿಂದ, ಬೇರೆಬೇರೆ ದೇಶಗಳಲ್ಲಿ ತಿಳಿದುಕೊಳ್ಳಲಾಗಿದೆ ಎಂದು ಹೇಳಬಹುದು. ಇಲ್ಲಿಯವರೆಗು ನಾವು ಹೇಳಿಕೊಂಡ ನಾಲ್ಕು ಶಾಸ್ತ್ರಗಳು, ಎಷ್ಟೋ ಜನ ಶಾಸ್ತ್ರಜ್ಞರಿಂದ ಕಂಡುಕೊಳ್ಳಲಾಗಿರುವ ಸಿದ್ಧಾಂತ (ಸೂತ್ರ) ಗಳಿಂದ ಅಭಿವೃದ್ಧಿ ಆಗಿವೆ. ಆರು ಶಾಸ್ತ್ರಗಳಲ್ಲಿ ಐದನೇ ಶಾಸ್ತ್ರ ಜ್ಯೋತಿಷ್ಯಶಾಸ್ತ್ರವಾದಾಗ, ಆರನೇ ಶಾಸ್ತ್ರ ಬ್ರಹ್ಮವಿದ್ಯಾಶಾಸ್ತ್ರ. ಐದನೆಯದಾದ ಜ್ಯೋತಿಷ್ಯಶಾಸ್ತ್ರದೊಂದಿಗೆ ಸಹ ಉಳಿದ ನಾಲ್ಕು ಶಾಸ್ತ್ರಗಳಲ್ಲಿನ ಸೂತ್ರಗಳನ್ನು ಮನುಷ್ಯ ಹೇಳಬಹುದು ಆದರೆ, ಒಂದೇ ಒಂದು ಬ್ರಹ್ಮವಿದ್ಯಾ ಶಾಸ್ತ್ರದಲ್ಲಿನ ಸೂತ್ರಗಳನ್ನು, ಸಿದ್ಧಾಂತಗಳನ್ನು ಯಾವ ಮನುಷ್ಯ ಹೇಳಲಾರನು. ಅದನ್ನು ಕುರಿತು ದೇವರು ಹೇಳಬೇಕಾಗಿದ್ದೆ. ಮನುಷ್ಯರು ಹೇಳಬಹುದಾದ ಜ್ಯೋತಿಷ್ಯಶಾಸ್ತ್ರದಲ್ಲಿನ ಸಿದ್ಧಾಂತಗಳನ್ನು, ಯಾರೂ ಕೃಷಿ ಮಾಡಿ ಹೇಳಲಾರದೆ ಇರುವುದರಿಂದ, ಭೂಮಿಮೇಲೆ ಜ್ಯೋತಿಷ್ಯಶಾಸ್ತ್ರ ನಾಮ ಮಾತ್ರ ಉಳಿದಿದೆ. ಜ್ಯೋತಿಷ್ಯ ಶಾಸ್ತ್ರವೇ ಆದರೂ, ಕೆಲವರು ಅದನ್ನು ಶಾಸ್ತ್ರವೇ ಅಲ್ಲ ಎನ್ನುವ ಸ್ಥಿತಿಗೆ ಬಂದಿದ್ದಾರೆ. ಪರಿಶೋಧನೆ ಇಲ್ಲದಿರುವುದರಿಂದ, ಸಿದ್ಧಾಂತಗಳನ್ನು ಯಾರೂ ಕಂಡುಕೊಳ್ಳದೆ ಇರುವುದರಿಂದ, ಜ್ಯೋತಿಷ್ಯ ಶಾಸ್ತ್ರ ಅಭಿವೃದ್ಧಿ ಆಗಲಿಲ್ಲ. ಅಷ್ಟು ಮಾತ್ರಕ್ಕೆ ಒಂದು ಶಾಸ್ತ್ರವನ್ನೇ ಇಲ್ಲ ಎನ್ನುವುದು ಪೂರ್ತಿ ತಪ್ಪಾಗುತ್ತದೆ. ಜ್ಯೋತಿಷ್ಯ ಶಾಸ್ತ್ರವೇ ಆದರೂ ಅದರಲ್ಲಿ ಕೊನೆಯದಾಗಿ ಫಲವನ್ನು ಕೊಡುವ ಸಿದ್ಧಾಂತ ಇಲ್ಲದೆ ಇರುವುದರಿಂದ ಅದು ಶಾಸ್ತ್ರವಾ! ಅಲ್ಲಾ! ಎನ್ನುವ ಚರ್ಚೆಗೆ ಸಹ ಬಂದಿದೆ. ಜ್ಯೋತಿಷ್ಯದಲ್ಲಿ ಸಹ ಕೆಲವು

ಸೂತ್ರಗಳನ್ನು ಕೆಲವರು ಕಂಡುಹಿಡಿದು ಹೇಳಿದರೂ, ಅವು ಯಾರಿಗು ತಿಳಿಯದೆ ಹೋಗಿವೆ. ಕೆಲವರು ತಮಗೆ ಜ್ಯೋತಿಷ್ಯದಲ್ಲಿನ ಸೂತ್ರಗಳು ಯಾವ ಮಾತ್ರ ತಿಳಿಯದಿದ್ದರೂ, ಅವರಿಗೆ ಇಷ್ಟ ಬಂದಹಾಗೆ ನಂಬಿಸಿ ಹೇಳುವುದರಿಂದ, ಕೊನೆಗೆ ಅದು ಫಲಿತವನ್ನು ಕೊಡದೆ ಹೋಗುವುದರಿಂದ, ಜ್ಯೋತಿಷ್ಯ ಅಸತ್ಯವೆಂದು ಎಲ್ಲರಿಗು ತಿಳಿಯುವುದರಿಂದ, ಜ್ಯೋತಿಷ್ಯ ಮೂಢನಂಬಿಕೆ ಎಂದು ಕೆಲವು ಪ್ರಸಾರ ವಾಹಿನಿಗಳು ತಮ್ಮ ಟೀವಿಗಳಲ್ಲಿ ತೋರಿಸುವುದರಿಂದ, ಜ್ಯೋತಿಷ್ಯಶಾಸ್ತ್ರ ಒಂದು ಇದೆ ಎಂದಾಗಲಿ, ಅದರ ಸಿದ್ಧಾಂತಗಳನ್ನಾಗಲಿ ಯಾರು ತಿಳಿಯದೆ ಹೋಗಿದ್ದಾರೆ.

ಭೂಮಿಮೇಲೆ ಎಲ್ಲಾ ಶಾಸ್ತ್ರಗಳಿಗಿಂತಲೂ ಮೊದಲು ಹುಟ್ಟಿದ ಶಾಸ್ತ್ರ ಆರನೆಯದಾದ ಬ್ರಹ್ಮವಿದ್ಯಾಶಾಸ್ತ್ರ. ಆದರೆ ಬ್ರಹ್ಮವಿದ್ಯಾಶಾಸ್ತ್ರ ಮೊದಲೆ ಸಂಪೂರ್ಣವಾಗಿ ತಿಳಿಸಲಾಗಿದೆ ಎಂದು ತಿಳಿಯದ ಮನುಷ್ಯರು ಕೆಲವರು, ತಾವು ಸ್ವಲ್ಪ ಪ್ರಯತ್ನಮಾಡಿ, ತಮಗೆ ತಿಳಿದ ಸೂತ್ರಗಳನ್ನು ಹೇಳಿದ್ದಾರೆ. ಆದರೆ ಅವರು ಹೇಳಿದ ಸೂತ್ರಗಳೆಲ್ಲವುಗಳಲ್ಲಿ ಶಾಸ್ತ್ರೀಯತೆ ಇಲ್ಲದೆ ಇರುವುದರಿಂದ ಅವು ಎಲ್ಲವು ದೇವರು ಹೇಳಿದ ಜ್ಞಾನದ ಹತ್ತಿರ ಪ್ರಾಣವಿಲ್ಲದವುಗಳಾಗಿ, ಬಲ ಇಲ್ಲದೇ ಹೋಗಿವೆ. ದೇವರು ಹೇಳಿದ ಜ್ಞಾನವನ್ನು ನೋಡಿದ ನಂತರ ಮನುಷ್ಯರು ಹೇಳಿದ ಜ್ಞಾನ ಯಾರಿಗೂ ರುಚಿಸುವುದಿಲ್ಲ. ದೇವರ ಜ್ಞಾನ ತಿಳಿಯದವರೆಗು ಮನುಷ್ಯರು ಹೇಳಿದ ಜ್ಞಾನ ಚೆನ್ನಾಗಿ ಕಾಣಿಸಿದರೂ, ನಂತರ ದೇವರು ಹೇಳಿದ ಜ್ಞಾನವನ್ನು ತಿಳಿದಾಗ ಅದರ ಮುಂದೆ ಯಾರ ಜ್ಞಾನವಾದರೂ ಅಶಾಸ್ತ್ರೀಯವಾಗಿ ಕಾಣಿಸುತ್ತದೆ. ಆದ್ದರಿಂದ ಆರನೇ ಶಾಸ್ತ್ರದಲ್ಲಿ ದೇವರು ಹೇಳಿರುವವೇ ಸಿದ್ಧಾಂತಗಳಾಗಲಿ, ಮನುಷ್ಯರು ಹೇಳಿರುವವು ಸಿದ್ಧಾಂತಗಳಲ್ಲ. ಬೇರೆಬೇರೆ ಶಾಸ್ತ್ರಗಳಿಗೆ, ಬೇರೆಬೇರೆ ಸಿದ್ಧಾಂತಗಳನ್ನು, ಬೇರೆಬೇರೆ ಮನುಷ್ಯರು ಹೇಳಿರುವರು. ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಮಾತ್ರ ದೇವರು ಹೇಳಿದ ಸಿದ್ಧಾಂತಗಳೇ ಇರುತ್ತವೆ. ಆದ್ದರಿಂದ ಬ್ರಹ್ಮವಿದ್ಯಾಶಾಸ್ತ್ರವನ್ನು ದೇವರ ಶಾಸ್ತ್ರವೆಂದು ಅನ್ನುತ್ತೇವೆ. ಉಳಿದ ಐದು ಶಾಸ್ತ್ರಗಳು ಪ್ರಪಂಚಕ್ಕೆ ಸಂಬಂಧಿಸಿರುವ ಶಾಸ್ತ್ರಗಳೆಂದು ಹೇಳುತ್ತಿದ್ದೇವೆ.

ಹೇಳಿರುವ ಫಲಿತ ಕೊನೆಯಲ್ಲಿ ಪ್ರತ್ಯಕ್ಷವಾಗಿ ಕಾಣಿಸುವಹಾಗೆ ಮಾಡುವುದು ಸಿದ್ಧಾಂತ ಎಂದು ತಿಳಿದುಕೊಂಡಿದ್ದೇವೆ ಅಲ್ಲವೆ! ಪ್ರಪಂಚ ಸಂಬಂಧ ನಾಲ್ಕು ಶಾಸ್ತ್ರಗಳಲ್ಲಿನ ಸಿದ್ಧಾಂತಗಳ ಫಲಿತಗಳನ್ನು ಮನುಷ್ಯ ಆಚರಿಸಿ ಅನುಭವಿಸುತ್ತಿದ್ದಾನೆ.

ಮನುಷ್ಯ ಅನೇಕ ರಂಗಗಳಲ್ಲಿ ಅನೇಕ ಪರಿಶೋಧನೆಗಳನ್ನು ಮಾಡಿ, ಅನೇಕ ಸಿದ್ಧಾಂತಗಳನ್ನು ಕಂಡು ಹಿಡಿದು ಅವುಗಳ ಫಲಿತಾಂಶವನ್ನು ಎಲ್ಲರಿಗು ತಿಳಿಯುವಂತೆ ಮಾಡಿದ್ದಾರೆ. ಕ್ರಿ.ಶ 1865ರಲ್ಲಿ ಜೇಮ್ಸ್‌ಕ್ಲಾರ್ಕ್ ಮೇಕ್ಸ್‌ವೆಲ್ (James Clark Macswel) ಎಂಬ ಶಾಸ್ತ್ರಜ್ಞನು ತನ್ನ ಪರಿಶೋಧನೆಯಲ್ಲಿ ವಿದ್ಯುತ್ ಅಯಸ್ಕಾಂತ ಶಕ್ತಿಯನ್ನು ತಯಾರಿಸಿ, ಆಕಾಶದೊಳಗೆ ಪ್ರವೇಶವಿಟ್ಟರೆ ನೀರಿನ ಅಲೆಗಳ ಹಾಗೆ ಸುತ್ತಲೂ ಪ್ರಯಾಣಿಸುತ್ತದೆಂದು ಕಂಡುಕೊಂಡಿದ್ದಾನೆ. ನಂತರ ಇಟಲೀ ದೇಶಸ್ಥನಾದ 'ಮಾರ್ಕೋನಿ', ವಿದ್ಯುತ್ ಅಯಸ್ಕಾಂತ ತರಂಗಗಳೊಂದಿಗೆ ಶಬ್ಧ ತರಂಗಗಳನ್ನು ಸೇರಿಸಿದರೆ ಅವು ಅಯಸ್ಕಾಂತ ತರಂಗಗಳಿಂದ ಆಕಾಶದಲ್ಲಿ ಪ್ರಯಾಣಿಸಬಲ್ಲವೆಂದು ಕಂಡುಹಿಡಿದು, ತನ್ನ ಸಿದ್ಧಾಂತವನ್ನು ಕಾರ್ಯರೂಪ ಮಾಡಿ ರೇಡಿಯೋವನ್ನು ಕಂಡುಹಿಡಿದ ಮೊದಲನೆಯ ವ್ಯಕ್ತಿ ಆಗಿದ್ದಾನೆ. ವಿದ್ಯುತ್ ಅಯಸ್ಕಾಂತ ತರಂಗಗಳು ಒಂದು ಸೆಕೆಂಡಿಗೆ 1,86,000 ಮೈಲು ದೂರ ಪ್ರಯಾಣಿಸಬಲ್ಲವು. ಅದೇ ಕಿಲೋಮೀಟರು ಗಳಲ್ಲಾದರೆ 2,97,600 ಕಿಲೋಮೀಟರುಗಳ ದೂರ ಪ್ರಯಾಣಿಸಬಲ್ಲವು. ವಿದ್ಯುತ್ ಅಯಸ್ಕಾಂತ ತರಂಗಗಳು, ಕಾಂತಿ ಕಿರಣ ವೇಗದೊಂದಿಗೆ ಸಮಾನವಾಗಿ ಪ್ರಯಾಣಿಸುವುದರಿಂದ, ರೇಡಿಯೋ ಕೇಂದ್ರದಿಂದ ಹೊರಡುವ ರೇಡಿಯೋ ವಾರ್ತೆಗಳನ್ನು ತಡವಿಲ್ಲದೆ ಕೇಳುತ್ತಿದ್ದೇವೆ. ನಂತರ 1923 ನೇ ವರ್ಷ "ಜಾನ್ ಲೋಗಿ ಬಯರ್ಡ್" ಎನ್ನುವ ಶಾಸ್ತ್ರಜ್ಞನು ಈ ದಿನ ನಾವು ನೋಡುತ್ತಿರುವ ಟೆಲಿವಿಜನ್‌ನನ್ನು ಕಂಡುಹಿಡಿದಿದ್ದಾನೆ. ಜಾನ್ ಲೋಗಿ ಬಯರ್ಡ್, ದೃಶ್ಯವನ್ನು ವಿಭಜಿಸಿ ವಿದ್ಯುತ್ ಅಯಸ್ಕಾಂತ ತರಂಗ ಗಳೊಳಗೆ ತನ್ನ ಯೋಚನೆಯಿಂದ ಬದಲಾಯಿಸಿ ಕೊನೆಗೆ ದೂರದರ್ಶನ ವನ್ನು ಸಾಧ್ಯಮಾಡಿದ್ದಾನೆ.

ಇದೆಲ್ಲಾ ಏಕೆ ಹೇಳುತ್ತಿದ್ದೇನೆಂದರೆ, ಯಾವ ಶಾಸ್ತ್ರಗಳಲ್ಲಾದರೂ ಸಿದ್ಧಾಂತವೆನ್ನುವುದು ಒಬ್ಬ ಮನುಷ್ಯನಿಗೆ ಹೇಗೆ ತಿಳಿಯುತ್ತಿದೆಯೋ, ನಮಗೆ ತಿಳಿಯಬೇಕೆಂದರೆ ಮೊದಲು ಇದೆಲ್ಲಾ ತಿಳಿದುಕೊಳ್ಳಬೇಕು. ಸಿದ್ಧಾಂತ ಎಂದರೆ ಕೊನೆಯಲ್ಲಿ ಫಲವನ್ನು ಕೊಡುವುದೆಂದು ತಿಳಿದುಕೊಂಡಿದ್ದೇವೆ. ಒಂದು ಸೂತ್ರವನ್ನು (ಸಿದ್ಧಾಂತವನ್ನು) ಅನುಸರಿಸಿ ಕಾರ್ಯವನ್ನು ಮಾಡಿದಾಗ ಅದರಲ್ಲಿ ಅದರ ಫಲಿತ ಲಭಿಸುತ್ತಿದೆ. ಮೊದಲು ಕ್ರೀಶ. 1865ನೇ ವರ್ಷ ಮೇಕ್ಸ್‌ವೆಲ್ ಎನ್ನುವಾತನು ಪರಿಶೋಧನೆ ಮಾಡಿ ವಿದ್ಯುತ್ ಅಯಸ್ಕಾಂತ ಶಕ್ತಿಯನ್ನು ಆಕಾಶದೊಳಗೆ ಸೇರಿಸಬಹುದೆಂದು ಕಂಡುಹಿಡಿದಿದ್ದಾನೆ. ಈಗ ಇಲ್ಲಿ ಪೂರ್ತಿ ವಿಶ್ಲೇಷಣೆ ಮಾಡಿ ನೋಡೋಣ. ಮೇಕ್ಸ್‌ವೆಲ್ ಎನ್ನುವ ಆತನು ಒಬ್ಬ ಮನುಷ್ಯ. ಆತನು ಎಲ್ಲರಂತೆ ಸುಮ್ಮನಿರದೆ ಪರಿಶೋಧನೆ ಮಾಡಿದ್ದಾನೆ. ಪರಿಶೋಧನೆಯನ್ನು ವಿಶ್ಲೇಷಿಸಿ ನೋಡಿದರೆ, ಶೋಧನೆ ಎಂದರೆ ಹುಡುಕುವುದು ಎಂದು ಅರ್ಥ. ಪರಿಶೋಧನೆ ಎಂದರೆ ಚೆನ್ನಾಗಿ ಹುಡುಕುವುದು, ಹೊಸ ವಿಧಾನದಿಂದ ಹುಡುಕುವುದು ಎಂದು ಅರ್ಥ. ಯಾರು ಹುಡುಕಿದರೂ, ಎಷ್ಟು ಹುಡುಕಿದರೂ, ಕಾಣಿಸಬೇಕಾಗಿರುವುದು ಯಾವಾಗ ಕಾಣಿಸಿದರೂ ಇರುವುದೇ ಕಾಣಿಸುತ್ತದೆ ಅಲ್ಲವೆ! ಇಲ್ಲದಿರುವುದು ಎಲ್ಲಿಯೂ ಕಾಣಿಸುವುದಿಲ್ಲ. ನಮ್ಮ ಮನೆಯಲ್ಲಿ ನಮ್ಮ ಹಿರಿಯರು ಬಚ್ಚಿಟ್ಟಿರುವ ವಸ್ತುಗಳು ಹುಡುಕುತ್ತಾ, ಹುಡುಕುತ್ತಾ ಮನೆಯಲ್ಲಿರುವ ವರಿಗೆ ಯಾರಿಗೋ ಒಬ್ಬರಿಗೆ ಕಾಣಿಸಿದ ಹಾಗೆ, ಸೃಷ್ಠಿ ಆದಿಯಲ್ಲಿ ದೇವರು ತಯಾರು ಮಾಡಿದ ವಿಧಾನಗಳನ್ನೇ ಮನುಷ್ಯ ಕಂಡುಹಿಯುತ್ತಿದ್ದಾನೆ. ಹುಡುಕಿದರೆ ಕಾಣಿಸಿತು ಎಂದರೆ, ಅದು ಮೊದಲೆ ಅಲ್ಲಿ ತಪ್ಪದೆ ಇರುತ್ತದೆ. ಇರುವುದನ್ನೇ ಮನುಷ್ಯ ಶೋಧಿಸಿ ಕಂಡುಕೊಳ್ಳುತ್ತಿದ್ದಾನೆ.

ಐದು ಶಾಸ್ತ್ರಗಳಿಗೆ ಸಂಬಂಧಿಸಿದ ಯಾವ ಸಿದ್ಧಾಂತವಾದರೂ ಮನುಷ್ಯ ನಿಂದ ಕಂಡುಹಿಡಿಯಲ್ಪಡುತ್ತಿದೆ. ಮನುಷ್ಯ ಒಂದು ಸಿದ್ಧಾಂತವನ್ನು ಕಂಡುಕೊಂಡಿದ್ದಾನೆ ಅಂದರೆ ಮನುಷ್ಯ ಕಣ್ಣಿನಿಂದ ನೋಡಿ ಕಂಡುಕೊಂಡಿದ್ದಾನಾ? ಕೈಯಿಂದ ಮುಟ್ಟಿ ಕಂಡುಕೊಂಡಿದ್ದಾನಾ? ಯಾವ ವಿಧವಾಗಿ ಕಂಡುಕೊಂಡಿದ್ದಾ

ನೆಂದು ಪ್ರಶ್ನಿಸಿಕೊಂಡು ನೋಡಿದರೆ, ಯಾವ ಸಿದ್ಧಾಂತವನ್ನೂ ಮನುಷ್ಯವೊಂದರ ಜ್ಞಾನೇಂದ್ರಿಯಗಳಿಂದಾಗಲಿ, ಮನಸ್ಸೊಂದರ ಜ್ಞಾಪಕದಿಂದಾಗಲಿ ಕಂಡುಕೊಳ್ಳಲಿಲ್ಲ. ಬುದ್ಧಿ ಯೊಂದರ ಆಲೋಚನೆಗಳಿಂದಾಗಲಿ ಕಂಡುಕೊಳ್ಳಲಿಲ್ಲ. ಜ್ಞಾನೇಂದ್ರಿಯ ಗಳಿಂದಾಗಲಿ, ಮನಸ್ಸಿನಿಂದಾಗಲಿ, ಬುದ್ಧಿ ಯೊಂದರ ಆಲೋಚನೆ ಗಳಿಂದಾಗಲಿ ತಿಳಿಯದೆ ಇರುವಾಗ, ಇನ್ನು ತಿಳಿಸುವ ಸಾಮರ್ಥ್ಯವಿರುವುದು ಶರೀರದಲ್ಲಿ ಯಾವ ಭಾಗ ಇಲ್ಲದೇ ಇರುವಾಗ, ಮನುಷ್ಯನಿಗೆ ತಿಳಿಯುವ ಸಿದ್ಧಾಂತ ಅಥವಾ ಮನುಷ್ಯ ಕಂಡುಕೊಂಡ ಸಿದ್ಧಾಂತ, ಯಾವುದರಿಂದ ಕಂಡು ಹಿಡಿಯಲಾಗಿದೆಯೆಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ಉತ್ತರವನ್ನು ಜಾಗ್ರತೆಯಿಂದ ಹುಡಿಕಿದರೆ ಈ ವಿಧವಾಗಿ ಹೇಳಬಹುದು. ಮನುಷ್ಯನಿಗಿರುವ ಐದು ಜ್ಞಾನೇಂದ್ರಿಯಗಳಿಂದ, ಶರೀರಕ್ಕಿಂತ ಬೇರೆಯಾಗಿರುವ ಹೊರಗಿನ ವಿಷಯಗಳನ್ನು ಕಂಡುಹಿಡಿಯಬಹುದು. ಶರೀರಕ್ಕೆ ಹೊರಗಿಲ್ಲದ ಯಾವುದನ್ನು ಮನುಷ್ಯ ಐದು ಜ್ಞಾನೇಂದ್ರಿಯಗಳಿಂದ ತಿಳಿಯಲಾರನು. ಹೊರಗೆ ಎಲ್ಲೂ ಇಲ್ಲದ ವಿಷಯವನ್ನು ಮನುಷ್ಯ ತನ್ನ ಶರೀರದೊಳಗೇ ಹುಡುಕಬೇಕು. ಮನುಷ್ಯ ಶರೀರದೊಳಗೆ ಹುಡುಕುವುದು ಎರಡು ವಿಧಗಳು ಇವೆಯೆಂದು ಹೇಳಬಹುದು. ಒಂದು ಮೊದಲೆ ತಿಳಿದಿರುವುದನ್ನು ಹುಡುಕುವುದು. ಎರಡನೆಯದು ಮೊದಲು ಯಾರಿಗು ತಿಳಿಯದಿರುವುದನ್ನು ಹುಡುಕುವುದು. ಮೊದಲೆ ತಿಳಿದಿರುವುದನ್ನು ಬುದ್ಧಿಯಿಂದ **ಆಲೋಚಿಸಿ** ಹುಡುಕುವುದು. ಮೊದಲು ತಿಳಿಯದೆ ಇರುವುದನ್ನು ಬುದ್ಧಿಯಿಂದ **ಯೋಚಿಸಿ** ನೋಡುವುದು. ಆಲೋಚಿಸಿದರೆ ಇರುವುದು ತಿಳಿಯುತ್ತದೆ. ಯೋಚಿಸಿದರೆ ಇಲ್ಲದಿರುವುದು ತಿಳಿಯುತ್ತದೆ. ಇಲ್ಲಿ ಗಮನಿಸಿದರೆ ಬುದ್ಧಿ ಸ್ವಲ್ಪ ವ್ಯತ್ಯಾಸದಿಂದ ಎರಡು ಕೆಲಸಗಳನ್ನು ಮಾಡುತ್ತಿದೆ. ಒಂದು ಆಲೋಚನೆ, ಎರಡು ಯೋಚನೆ. ಎರಡೂ ಒಂದೇ ಅಲ್ಲವೆ! ಎಂದು ಯಾರಾದರೂ ಕೇಳಿದರೆ ಎರಡೂ ಒಂದೇ ಅಲ್ಲ, ಆಲೋಚನೆ ಬೇರೆ, ಯೋಚನೆ ಬೇರೆಯೆಂದು ಹೇಳಬಹುದು.

ಲೋಚನೆ ಎಂದರೆ ಚಿಕ್ಕದನ್ನು ದೊಡ್ಡದಾಗಿ ತೋರಿಸುವ ಕನ್ನಡಿ (ಭೂತ ಕನ್ನಡಿ) ಎಂದು ಹೇಳಬಹುದು. ಆಲೋಚನೆ ಎಂದರೆ ಒಂದು ವಿಷಯವನ್ನು ಪೂರ್ತಿಯಾಗಿ ಕನ್ನಡಿಯಲ್ಲಿ ಎಲ್ಲ ವಿಧಗಳಲ್ಲಿ ನೋಡುವುದೆಂದು ಅರ್ಥ. ಯೋಚನೆ ಎಂದರೆ ಪೂರ್ತಿಯಾಗಿ ತಿಳಿಯದ ವಿಷಯವನ್ನು ಕುರಿತು ತಿಳಿದುಕೊಳ್ಳಬೇಕೆನ್ನುವ ಉದ್ದೇಶದಿಂದ ಛಲದಿಂದ ಕಾದು ನೋಡುವುದು. ಆಲೋಚನೆ ಎನ್ನುವ ಭೂತಕನ್ನಡಿಯ ವಿಷಯವನ್ನು ವಿವರವಾಗಿ ತೋರಿಸುತ್ತದೆ. ಯೋಚನೆಯಲ್ಲಿ ಆತ್ಮಯೇ ಸ್ವತಃವಾಗಿ ಉತ್ತರವನ್ನು ಅಥವಾ ವಿವರವನ್ನು ತಿಳಿಸುವುದು. ತಿಳಿಯದ ವಿಷಯವನ್ನು ಕುರಿತು ಯೋಚಿಸುವವನಿಗೆ ಆತ್ಮ ವಿಷಯವನ್ನು ಕುರಿತಾದ ಉತ್ತರಗಳನ್ನು ತಿಳಿಸಿದರೂ, ಆತ್ಮ ಜೀವನಿಗಾಗಲಿ, ಬುದ್ಧಿಗಾಗಲಿ ಕಾಣಿಸದೆ, ಯಾವ ಮಾತ್ರ ತಿಳಿಯದೆ ಇದ್ದು, ಬುದ್ಧಿಗೆ ಬೇಕಾದ ಉತ್ತರಗಳನ್ನು ಕೊಡುವುದರಿಂದ, ಜೀವಾತ್ಮನಿಗೂ ಬುದ್ಧಿಗೂ ಆತ್ಮ ಪಾತ್ರ ಅರ್ಥವಾಗದೆ ಹೋಗಿ, ತಾವೇ ಸ್ವತಃವಾಗಿ ಆ ವಿಷಯವನ್ನು ತಿಳಿದು ಕೊಂಡಿರುವ ಹಾಗೆ ಅಹಂ ಜೀವಾತ್ಮನಿಗೆ ಹೇಳುವುದರಿಂದ, ಜೀವಾತ್ಮ ನಾನೇ ಆ ವಿಷಯವನ್ನು ಕಂಡುಕೊಂಡಿದ್ದೇನೆಂದು, ಯಾರಿಗೂ ತಿಳಿಯದ ಸಿದ್ಧಾಂತ ತನಗೆ ತಿಳಿದಿದೆಯೆಂದು ಭ್ರಮಿಸುತ್ತಿದ್ದಾನೆ. ಆತ್ಮ ಬುದ್ಧಿ ಯೋಚಿಸುವ ವಿಷಯಕ್ಕೆ, ಹೀಗೆ ಮಾಡಿದರೆ ಈ ಫಲಬರುತ್ತದೆ. ನಂತರ ಈ ವಿಧವಾಗಿ ಮಾಡಿದರೆ ಇಂತಹ ಬದಲಾವಣೆ ಬರುತ್ತದೆ. ನಂತರ ಆ ಬದಲಾವಣೆಯನ್ನು ಈ ವಿಧವಾಗಿ ಮಾಡಿದರೆ ಕೊನೆಗೆ ಈ ಕಾರ್ಯ ಹೀಗೆ ನೆರವೇರುತ್ತದೆನ್ನುವ ಉತ್ತರಗಳನ್ನು ಅಥವಾ ವಿವರಗಳನ್ನು ನೇರವಾಗಿ ಬುದ್ಧಿಗೆ ಸೇರಿಸುವುದರಿಂದ, ತನ್ನ ಮೆದುಳಿನಲ್ಲಿಯೇ ಯಾರಿಗೂ ತಿಳಿಯದ ಯೋಚನೆಗಳು ಬಂದಿವೆಯೆಂದು ಮನುಷ್ಯ ಅಂದುಕೊಳ್ಳುವುದು ನಡೆಯುತ್ತಿದೆ. ತನಗೆ ಬಂದಿರುವ ವಿವರ ಅದಕ್ಕಿಂತ ಮೊದಲು ಎಲ್ಲೂ ಇಲ್ಲದೆ ಇರುವುದರಿಂದ, ಅದನ್ನು ಅನುಭವ ಪೂರ್ವಕವಾಗಿ ಮನುಷ್ಯ ಮಾಡಿ ನೋಡುವನು. ಹಾಗೆ ಮಾಡಿದಾಗ ತನ್ನ ಯೋಚನೆಗೆ ತಿಳಿದ ವಿಧವಾಗಿ ಫಲಿತ ಬರುತ್ತದೆ. ಒಬ್ಬ ಮನುಷ್ಯನಿಗೆ ಹೊಸದಾಗಿ ಯೋಚನೆಗೆ ಬಂದಿರುವುದನ್ನು ಪ್ರಯೋಗ ಮಾಡಿ ನೋಡಿದಾಗ ತನ್ನ ಬುದ್ಧಿಗೆ ಸೇರಿದ

ಫಲ ಬರುತ್ತದೆ. ಅದನ್ನೇ ಸಿದ್ಧಾಂತ ಎನ್ನುತ್ತೇವೆ. ಆ ಸಿದ್ಧಾಂತದ ಪ್ರಕಾರ ಯಾರಿಗಾದರೂ ಅದೇ ಫಲಿತ ಬರುತ್ತದೆ. ಆದರೆ ಮೊದಲು ಯೊಚಿಸಿದವನ ಬುದ್ಧಿಗೆ, ಆತ್ಮ ತಿಳಿಸಿದ ವಿವರವನ್ನು ಕುರಿತು "ಯಾರಿಗೂ ತಿಳಿಯದಿರುವುದು ನನಗೆ ಹೇಗೆ ತಿಳಿದಿದೆ? ನನ್ನ ಬುದ್ಧಿಗೆ ತಿಳಿಸಿದವನು ಯಾರು? ಎಂದು ಮನುಷ್ಯ ಯಾವ ಮಾತ್ರ ಅಂದುಕೊಳ್ಳುವುದಿಲ್ಲ. ತಾನೇ ಸ್ವತಃವಾಗಿ ಆ ವಿಷಯವನ್ನು ಕಂಡುಕೊಂಡಹಾಗೆ, ಆ ವಿಷಯ ಎಲ್ಲರಿಗೂ ತಿಳಿಯುವಹಾಗೆ, ತನಗೆ ತಿಳಿದ ಸಿದ್ಧಾಂತದ ಮುಂದೆ ತನ್ನ ಹೆಸರನ್ನು ಇಟ್ಟುಕೊಂಡು, ಮುಂಬರುವ ಕಾಲದಲ್ಲಿ ಇಂತಹ ವ್ಯಕ್ತಿ ಈ ಸಿದ್ಧಾಂತವನ್ನು ಕಂಡುಕೊಂಡಿದ್ದಾನೆಂದು ತಿಳಿಯುವ ಹಾಗೆ ಮಾಡಿಕೊಳ್ಳುತ್ತಿದ್ದಾರೆ. ಡಾರ್ವಿನ್ ಮೊದಲು ತನಗೆ ತಿಳಿದ ಸಿದ್ಧಾಂತದ ಮುಂದೆ ಡಾರ್ವಿನ್ ಸಿದ್ಧಾಂತವೆಂದು ಹೆಸರು ಇಟ್ಟುಕೊಳ್ಳುವುದು ನಡೆದಿದೆ. ಹಾಗೇ ನ್ಯೂಟನ್ ಸಹ ಮೊದಲು ತನಗೆ ತಿಳಿದ ಸಿದ್ಧಾಂತದ ಮುಂದೆ ನ್ಯೂಟನ್ ಸಿದ್ಧಾಂತವೆಂದು ತನ್ನ ಹೆಸರನ್ನು ಇಟ್ಟುಕೊಂಡಿದ್ದಾನೆ.

ಈ ವಿಧವಾಗಿ ಬುದ್ಧಿಗೆ ಆತ್ಮ ತಿಳಿಸಿದ ಸಿದ್ಧಾಂತವನ್ನು, ಯಾವ ಮಾತ್ರ ಆತ್ಮಜ್ಞಾನವಿಲ್ಲದ ಮನುಷ್ಯ, ತಾನೇ ಆ ಸಿದ್ಧಾಂತವನ್ನು ಕಂಡುಕೊಂಡಿದ್ದೇನೆಂದು ಹೇಳಿಕೊಳ್ಳುತ್ತಿದ್ದಾನೆ. ವಿವರ ತಿಳಿಯದ ಪ್ರಜೆಗಳು ಅದನ್ನೇ ನಂಬುತ್ತಿದ್ದಾರೆ. ರೇಡಿಯೊದಿಂದ ಪ್ರಾರಂಭಗೊಂಡು ಇಂದಿನ ಕಂಪ್ಯೂಟರ್‌ಗಳವರೆಗು, ಟೆಲಿಫೋನ್ ಪ್ರಾರಂಭಗೊಂಡು ಇಂದಿನ ಇಂಟರ್‌ನೆಟ್ ವರೆಗು, ಸೈಕಲ್‌ನಿಂದ ಪ್ರಾರಂಭಗೊಂಡು ಇಂದಿನ ರಾಕೆಟ್‌ಗಳವರೆಗು, ಪಟಾಕಿಗಳಿಂದ ಪ್ರಾರಂಭ ಗೊಂಡು ಇಂದಿನ ಅಣುಬಾಂಬುಗಳವರೆಗು, ಮನುಷ್ಯನಿಗೆ ಬೇಕಾದ ಎಲ್ಲಾ ಪರಿಕರಗಳನ್ನು ಆತ್ಮ ಮನುಷ್ಯನ ಯೋಚನೆಗೆ ಸೇರುವಂತೆಮಾಡಿ ತಿಳಿಸಿ, ತಾನು ತಿಳಿಸಿದವುಗಳನ್ನು ಸಿದ್ಧಾಂತಗಳಾಗಿ ಎಲ್ಲರಿಗೂ ಫಲ ಸಿಗುವಹಾಗೆ ಮಾಡಿದರೆ, ಇಲ್ಲಿಯವರೆಗು ತನಗಾಗಲಿ, ಯಾರಿಗಾಗಲಿ ತಿಳಿಯದ ವಿಷಯ ತನಗೆ ಹೇಗೆ ತಿಳಿದಿದೆ ಎಂದು, ಯಾರು ತಿಳಿಸಿದ್ದಾರೆಂದು ಯಾವ ಮಾತ್ರ ಮನುಷ್ಯ ಪ್ರಶ್ನಿಸಿಕೊಳ್ಳದೆ, ತಾನೇ ಆ ವಿಷಯವನ್ನು ಕಂಡುಕೊಂಡಿದ್ದೇನೆಂದು

ಅಸತ್ಯವನ್ನು ಹೇಳುತ್ತಿದ್ದಾನೆ. ಪ್ರಪಂಚದಲ್ಲಿನ ಶಾಸ್ತ್ರಜ್ಞರೆಲ್ಲರೂ ತಾವು ಪ್ರಕಟಿಸಿದ ಸಿದ್ಧಾಂತಗಳು ತಮ್ಮವಲ್ಲವೆಂದು, ತಮಗೆ ತಿಳಿಯದೆ ಇರುವವನ್ನು ತಾವು ಇನ್ನೊಬ್ಬರ ಸಹಾಯದಿಂದ ಹೇಳಿದ್ದೇವೆಂದು, ಯಾವ ಮಾತ್ರವೂ ಅಂದುಕೊಳ್ಳುತ್ತಿಲ್ಲ. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗವೆನ್ನುವ ಅಧ್ಯಾಯದಲ್ಲಿ 15ನೇ ಶ್ಲೋಕದಲ್ಲಿ "ನಾನು ಸಕಲ ಜೀವರಾಶಿಗಳ ಮೆದುಳಿನಲ್ಲಿ ನಿವಾಸವಿದ್ದೇನೆ. ನನ್ನಿಂದಲೇ ಸ್ಮೃತಿ, ಊಹೆ, ಜ್ಞಾನ, ನಿಮಗೆ ಬರುತ್ತಿವೆ". ಎಂದು ದೇವರು ಹೇಳಿದ್ದರೂ, ಮನುಷ್ಯ ಮಾತ್ರ ದೇವರು ಹೇಳಿದ ಮಾತನ್ನು ಮರೆತು ಸ್ಮೃತಿ, ಊಹೆ, ಜ್ಞಾನ ಎಲ್ಲವೂ ನನ್ನವೇ ಅನ್ನುತ್ತಿದ್ದಾನೆ.

ಯಾವ ಸಿದ್ಧಾಂತವಾದರೂ ಅದು ಆರು ಶಾಸ್ತ್ರಗಳೊಳಗಿನದೆ ಆಗಿರುತ್ತದೆ. ಗಣಿತ, ಖಗೋಳ, ರಸಾಯನ, ಭೌತಿಕ, ಜ್ಯೋತಿಷ್ಯ ಎನ್ನುವ ಐದು ಶಾಸ್ತ್ರಗಳ ಸಿದ್ಧಾಂತಗಳನ್ನು ಆತ್ಮ ಮನುಷ್ಯನ ಬುದ್ಧಿಗೆ ಒದಗಿಸಿದಾಗ, ಮನುಷ್ಯನಿಂದ ಐದು ಶಾಸ್ತ್ರಗಳ ಸಿದ್ಧಾಂತಗಳು ಉಳಿದವರಿಗೆ ತಿಳಿಯುತ್ತಿವೆ. ಹಾಗೆ ಆತ್ಮ ತೋರಿಸಿದಾಗ ಕಾಣಿಸಿದ ಸಿದ್ಧಾಂತಗಳನ್ನು ವಿದ್ಯಾರ್ಥಿಗಳಿಗೆ ಬೋಧನೆ ಶಾಲೆಗಳಲ್ಲಿ ಪಾಠಗಳಾಗಿ ಬೋಧಿಸುತ್ತಿದ್ದಾರೆ. ಈ ವಿಧವಾಗಿ ಒಬ್ಬ ಮನುಷ್ಯನಲ್ಲಿ ತಿಳಿದ ಒಂದು ಶಾಸ್ತ್ರವೊಂದರ ಸಿದ್ಧಾಂತ ಎಲ್ಲರಿಗೂ ತಿಳಿದುಹೋಗುತ್ತಿದೆ. ಇನ್ನು ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರವೊಂದರ ಸಿದ್ಧಾಂತಗಳು ಮಾತ್ರ ಹೊಸದಾಗಿ ಯಾರೂ ಕಂಡುಕೊಂಡಿರುವವಲ್ಲ. ಸೃಷ್ಟ್ಯಾದಿಯಲ್ಲೇ ದೇವರು ತನ್ನ ಸಿದ್ಧಾಂತಗಳನ್ನು ಬಹಿರ್ಗತಮಾಡಿ ಇಟ್ಟಿದ್ದಾನೆ. ಆದ್ದರಿಂದಲೇ ಅವುಗಳನ್ನು ಹೊಸದಾಗಿ ಯಾರೂ ಕಂಡುಹಿಡಿಯಬೇಕಾದ ಅವಶ್ಯಕತೆ ಇಲ್ಲ. ಸೃಷ್ಠಿ ಆದಿಯಲ್ಲೇ ದೇವರು ಹೇಳಿದ ಬ್ರಹ್ಮವಿದ್ಯಾ ಶಾಸ್ತ್ರವೊಂದರ ಸಿದ್ಧಾಂತಗಳನ್ನು ವಿವರಿಸಿ ಯಾರಾದರೂ ಹೇಳಬಹುದು ಆದರೆ, ಹೊಸದಾಗಿ ಕಂಡುಹಿಡಿದು ಹೇಳುವ ಸಿದ್ಧಾಂತಗಳು ಇರುವುದಿಲ್ಲ. ಈಗ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೇ! "ಈ ಕಾಲದಲ್ಲಿ ಸಹ ಬ್ರಹ್ಮವಿದ್ಯೆ ಆದ ದೇವರ ಜ್ಞಾನದಲ್ಲಿ ಸಿದ್ಧಾಂತಗಳನ್ನು ಹೇಳಿದವರಿದ್ದಾರೆ ಅಲ್ಲವೆ! ಅಂತಹವರಲ್ಲಿ ಅದ್ವೈತ

ಸಿದ್ಧಾಂತವನ್ನು ಪ್ರಕಟಿಸಿದ ಆದಿಶಂಕರಾಚಾರ್ಯರು ಇದ್ದಾರೆ. ವಿಶಿಷ್ಠಾದ್ವೈತವನ್ನು ಪ್ರಕಟಿಸಿದ ರಾಮಾನುಜಾಚಾರ್ಯರು ಇದ್ದಾರೆ. ಹಾಗೇ ದ್ವೈತ ಸಿದ್ಧಾಂತವನ್ನು ಕಂಡುಹಿಡಿದ ಮಧ್ವಾಚಾರ್ಯರು ಇದ್ದಾರೆ. ಅವರ ವಿಷಯವನ್ನು ಬಿಟ್ಟು ಪ್ರಸ್ತುತ ಈ ಗ್ರಂಥ ಬರೆಯುತ್ತಿರುವ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರಾದ ನೀವು ತ್ರೈತ ಸಿದ್ಧಾಂತವೆಂದು ಹೆಸರಿಟ್ಟು ನೀವು ಸಹ ಸಿದ್ಧಾಂತಕರ್ತರಾಗಿದ್ದೀರಲ್ಲವೆ! ದೇವರು ಬ್ರಹ್ಮವಿದ್ಯೆಯಲ್ಲಿನ ಎಲ್ಲಾ ಸಿದ್ಧಾಂತಗಳನ್ನು ಮೊದಲೆ ತಿಳಿಸಿದ್ದರೆ, ಈಗ ನೀವು ಹೇಗೆ ನಿಮ್ಮ ಸಿದ್ಧಾಂತಗಳನ್ನು ತಿಳಿಸಿದ್ದೀರ? ಸಿದ್ಧಾಂತಕರ್ತರು ಹೇಗೆ ಆಗಿದ್ದೀರ? ಐದು ಶಾಸ್ತ್ರಗಳೊಂದರ ಶಾಸ್ತ್ರಜ್ಞರು ಆತ್ಮ ತಿಳಿಸಿದ ಸಿದ್ಧಾಂತಗಳನ್ನು ತಮ್ಮ ಸಿದ್ಧಾಂತಗಳಾಗಿ ಹೇಳಿಕೊಂಡು ಅಸತ್ಯವನ್ನು ಹೇಳಿದ್ದಾರೆಂದ ನೀವು, ದೇವರು ಮೊದಲೇ ಹೇಳಿದ ಸಿದ್ಧಾಂತಗಳನ್ನು ಪುನಃ ಈಗ ತಿಳಿಸುತ್ತಾ, ಇವು ನಮ್ಮ ಸಿದ್ಧಾಂತಗಳೆಂದು ಹೇಳಿಕೊಳ್ಳುವುದನ್ನು ನೋಡಿದರೆ ಏನನ್ನ ಬೇಕು? ನೀವು ಸಹ ಉಳಿದ ಶಾಸ್ತ್ರಜ್ಞರ ಹಾಗೆ ಅಸತ್ಯವನ್ನು ಹೇಳಿದವರು ಅಲ್ಲವೆ!" ಎಂದು ಕೇಳಬಹುದು. ಈ ಪ್ರಶ್ನೆಗೆ ಉತ್ತರ ಹೇಳಬೇಕಾದ ಜವಾಬ್ದಾರಿ ನಮಗಿದೆ, ಆದ್ದರಿಂದ ನಾವು ಈ ವಿಧವಾಗಿ ಉತ್ತರವನ್ನು ಹೇಳುತ್ತಿದ್ದೇವೆ ನೋಡಿ.

ಅದ್ವೈತ ಸಿದ್ಧಾಂತವನ್ನು ಆಚರಿಸುತ್ತಾ, ನಮ್ಮದು ಅದ್ವೈತ ಪೀಠ ಎಂದು ಹೇಳುತ್ತಿರುವ ಒಬ್ಬ ಸ್ವಾಮೀಜಿ ಹತ್ತಿರಕ್ಕೆ ಹೋಗಿ, ಶಂಕರಾಚಾರ್ಯರು ಅದ್ವೈತ ಸಿದ್ಧಾಂತವನ್ನು ಯಾವ ವರ್ಷ ಹೇಳಿದ್ದಾನೆಂದು ಕೇಳಿದ್ದೇವೆ. ಅದಕ್ಕೆ ಆ ಸ್ವಾಮೀಜಿ ಕೆಳಗೆ, ಮೇಲೆ ನೋಡಿ "ಏನಯ್ಯಾ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿ ಲೋಕಕ್ಕೆ ಸಾರಿದ ಜಗದ್ಗುರುವನ್ನು ಸಾದಾಸೀದಾ ಮನುಷ್ಯನನ್ನು ಕೇಳಿದಹಾಗೆ ಕೇಳುತ್ತಿದ್ದೀಯ. ಸ್ವಲ್ಪವಾದರೂ ಗೌರವ, ಮರ್ಯಾದೆ ತಿಳಿಯದೆ ಮಾತನಾಡಿದರೆ ಹೇಗೆ? ಈ ಕಾಲದಲ್ಲಿ ಸಹ ಶಂಕರಾಚಾರ್ಯ ಎನ್ನುವ ಹೆಸರು ಇರುವವರು ಬಹಳ ಜನರಿದ್ದಾರೆ. ನೀವು ಶಂಕರಾಚಾರ್ಯ ಎಂದು ಕೇಳಿದರೆ ಸಾಧಾರಣ ಮನುಷ್ಯನನ್ನು ಕೇಳಿದಹಾಗೆ ಇರುತ್ತದೆ. ಆದ್ದರಿಂದ

ಜಗದ್ಗುರು ಆದಿಶಂಕರಾಚಾರ್ಯರು ಎಂದಾಗಲಿ, ಅದ್ವೈತ ಸಿದ್ಧಾಂತಕರ್ತ ಆದಿಶಂಕರಾಚರ್ಯ ಎಂದಾಗಲಿ ಸಂಬೋಧಿಸಿ ಕೇಳಬೇಕು" ಎಂದರು. ನಂತರ ಆತನ ಬಾಯಿಂದಲೆ ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜಾ ಚಾರ್ಯರವರು ಇದ್ದಾರೆಂದು, ಅವರ ಸಿದ್ಧಾಂತಕ್ಕೆ ಇವರ ಸಿದ್ಧಾಂತಕ್ಕೆ ಬಹಳ ವ್ಯತ್ಯಾಸವಿದೆಯೆಂದು, ಅದ್ವೈತರಿಗೆ ಶಿವನು ಆರಾಧ್ಯ ದೇವರೆಂದು, ವಿಶಿಷ್ಟಾದ್ವೈತರಿಗೆ ವಿಷ್ಣುವು ಆರಾಧ್ಯದೈವವೆಂದು ಕೇಳಿದ್ದೇನೆ. ಈಗ ಅಸಲು ವಿಷಯಕ್ಕೆ ಬರೋಣ. ಬ್ರಹ್ಮವಿದ್ಯಾ ಶಾಸ್ತ್ರದಲ್ಲಿರುವ ಸಿದ್ಧಾಂತಗಳೆಲ್ಲವನ್ನು, ದೇವರು ಮೊದಲೇ ತಿಳಿಸಿದ್ದಾನೆಂದು ಹೇಳುವುದರಿಂದ, ಪ್ರಸ್ತುತ ಕಾಲದಲ್ಲಿ ಯಾರು ನಾವು ಸಿದ್ಧಾಂತಕರ್ತರೆಂದು ಹೇಳಿದರೂ ಅದು ಅಸತ್ಯವೇ ಎಂದು ಹೇಳಬಹುದು. ಆ ಲೆಕ್ಕ ಪ್ರಕಾರ ಜಗದ್ಗುರು ಶಂಕರಾಚರ್ಯರು ಹೇಳಿದ ಅದ್ವೈತವನ್ನಾಗಲಿ, ರಾಮಾನುಜಾಚಾರ್ಯರು ಹೇಳಿದ ವಿಶಿಷ್ಟಾದ್ವೈತವನ್ನಾಗಲಿ ಇವರು ಹೇಳುವುದಕ್ಕೆ ಮೊದಲೆ ದೇವರೇ ಹೇಳಿದ್ದಾನೆ. ಆದ್ದರಿಂದ ಇವರು ಆ ಸಿದ್ಧಾಂತಕರ್ತರು ಅಲ್ಲವೆಂದು, ಇವರು ಆ ಸಿದ್ಧಾಂತಗಳನ್ನು ಬೋಧಿಸಿದವರು ಮಾತ್ರವೇ ಎಂದು ಹೇಳಬಹುದು.

ದೇವರು ಭಗವಂತನಾಗಿ ಭೂಮಿ ಮೇಲೆಗೆ ಬಂದು ಭಗವದ್ಗೀತೆಯನ್ನು ಬ್ರಹ್ಮವಿದ್ಯಾ ಶಾಸ್ತ್ರವಾಗಿ ಬೋಧಿಸಿದ್ದಾನೆ. ಭಗವದ್ಗೀತೆಯಲ್ಲಿ ಅದ್ವೈತವಿರುವ ಶ್ಲೋಕಗಳಿವೆ. ಹಾಗೆ ವಿಶಿಷ್ಟಾದ್ವೈತವಿರುವ ಶ್ಲೋಕಗಳಿವೆ. ಐದು ಸಾವಿರ ವರ್ಷಗಳ ಕೆಳಗೆ ಭಗವಂತನು ಭಗವದ್ಗೀತೆಯನ್ನು ಹೇಳಿದರೆ, ಎರಡು ಸಾವಿರ ವರ್ಷಗಳ ಕೆಳಗೆ ಜಗದ್ಗುರು ಆದಿ ಶಂಕರಾಚಾರ್ಯರು ಅದ್ವೈತ ಸಿದ್ಧಾಂತವನ್ನು ಹೇಳಿದಾಗ, ಈ ಸಿದ್ಧಾಂತ ಭಗವದ್ಗೀತೆಯಲ್ಲಿ ಇಂತಹ ಶ್ಲೋಕದಲ್ಲಿ ಇದೆಯೆಂದು ಹೇಳಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು, ಸತ್ಯವನ್ನು ಹೇಳಿದಹಾಗೆ ಇರುತ್ತಿತ್ತು. ಹಾಗಲ್ಲದೆ ಅದ್ವೈತವನ್ನು ದೇವರು ಮೊದಲೇ ಹೇಳಿದ್ದಾನೆಂದು ಹೇಳದೆ, ಈಗ ತಾನು ಕಂಡುಕೊಂಡಹಾಗೆ ಹೇಳುವುದರಿಂದ ಆದಿಶಂಕರಾಚಾರ್ಯನು ಸಹ ಅಸತ್ಯ ಹೇಳಿದಂತಾಗಿದೆ. ಅದೇ ವಿಧವಾಗಿ ವಿಶಿಷ್ಟಾದ್ವೈತ ಭಗವದ್ಗೀತೆಯಲ್ಲಿ ಇರುವಾಗ

ಅಲ್ಲಿ ನೋಡಿ ಇಲ್ಲಿ ಹೇಳಿದಹಾಗೆ ಅಲ್ಲದೇ ತಾವೇ ಸ್ವತಃವಾಗಿ ಹೇಳಿದಹಾಗೆ ಹೇಳುವುದರಿಂದ, ಪ್ರಜೆಗಳೆಲ್ಲರು ವಿಶಿಷ್ಟಾದ್ವೈತಕರ್ತ ರಾಮಾನುಜಾಚಾರ್ಯರು ಅಂದುಕೊಳ್ಳುವುದರಿಂದ, ಆತನು ಸಹ ಸಿದ್ಧಾಂತ ವಿಷಯದಲ್ಲಿ ಅಸತ್ಯ ಹೇಳಿದಹಾಗೆ ಆಗಿದೆ. ಈ ನನ್ನ ಮಾತುಗಳು ಕೆಲವರಿಗೆ ನೋವನ್ನುಂಟು ಮಾಡಿದ್ದರೂ, ದೇವರ ಮುಂದೆ ತಪ್ಪನ್ನು ತಪ್ಪಾಗೆ ಒಪ್ಪಿಕೊಳ್ಳುವುದು ನಿಮಗೂ, ನನಗೂ ಇತರರಿಗೂ ಒಳ್ಳೆಯದೇ ಅಲ್ಲವೆ! ನಮ್ಮನ್ನು ನಾವು ಮೋಸಮಾಡಿ ಕೊಂಡರು ಫರವಾಗಿಲ್ಲ. ದೇವರನ್ನು ಮೋಸಮಾಡಬೇಕೆಂದು ನೋಡಬಾರದು. ಈಗ ಕೆಲವರ ನೋಟ ನಮ್ಮ ಕಡೆ ತಿರುಗಬಹುದು. "ನೀನು ಸಸ್ವರಿನಾ, ನೀತಿಮಂತನಾ, ನೀನು ತ್ರೈತಸಿದ್ಧಾಂತವನ್ನು ಪ್ರತಿಪಾದಿಸಿದ್ದೇನೆಂದು ಹೇಳಿಕೊಳ್ಳ ಲಿಲ್ಲವೇ? ನೀನು ಅಸತ್ಯವನ್ನಾಡಲಿಲ್ಲವೇ? ನೀನು ದೇವರನ್ನು ಮೋಸ ಮಾಡಲಿಲ್ಲವೇ?" ಎಂದು ನಿಲ್ಲಿಸಿ ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವೇ ನೆಂದರೆ! ತಪ್ಪನ್ನು ಯಾರು ಮಾಡಿದರೂ ತಪ್ಪೇ ಆಗುತ್ತದೆ. ನಾನು, ನೀನು ಎನ್ನುವ ಬೇಧವಿಲ್ಲದೇ ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ನೀವೆಂದುಕೊಂಡಹಾಗೆ ನಾನು ಮಾತ್ರ ಯಾವ ಅಸತ್ಯ ಹೇಳಲಿಲ್ಲವೆಂದು, ನಾನು ದೇವರನ್ನು ಮೋಸಮಾಡುವ ಪ್ರಯತ್ನವನ್ನು ಮಾಡಲಿಲ್ಲವೆಂದು ಧೈರ್ಯವಾಗಿ ಹೇಳುತ್ತಿದ್ದೇನೆ. ಹಾಗೆ ಏಕೆ ಹೇಳುತ್ತಿದ್ದೇನೆಂದರೆ! ನಾನು ತ್ರೈತ ಸಿದ್ಧಾಂತವನ್ನು ಕುರಿತು ಹೇಳಿದಾಗ ಅದನ್ನು ನಾನು ಈಗ ಹೇಳಿದಹಾಗೆ ಅಲ್ಲದೆ, ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಈ ವಿಷಯವಿದೆ ಯೆಂದು ಹೇಳಿದ್ದೇವೆ. ತ್ರೈತ ಸಿದ್ಧಾಂತ ಎಲ್ಲಿ ಹುಟ್ಟಿರುವುದು, ಯಾರು ಹೇಳಿರುವುದು ಮೊದಲೆ ಹೇಳಿರುವುದರಿಂದ ನಾನು ಅಸತ್ಯ ಹೇಳಿದಹಾಗೆ ಅಲ್ಲ. ಅಷ್ಟೇ ಅಲ್ಲದೆ ನನ್ನ ಹೆಸರಿನ ಮುಂದೆ ತ್ರೈತಸಿದ್ಧಾಂತ ಕರ್ತ ಎಂದು ಎಲ್ಲಿಯೂ ಇರುವುದಿಲ್ಲ. ನೀವು ಚೆನ್ನಾಗಿ ಗಮನಿಸಿದರೆ ತ್ರೈತಸಿದ್ಧಾಂತ ಆದಿಕರ್ತ ಎಂದು ಇರುತ್ತದೆ. ಹಾಗೆ ಇರುವುದರಿಂದ ತ್ರೈತ ಸಿದ್ಧಾಂತ ಆದಿಯಲ್ಲೇ ಆದಿಕರ್ತನಾದ ಪ್ರಬೋಧಾನಂದ ಯೋಗೀಶ್ವರರಿಂದ ಹೇಳಲಾಗಿರುವುದೆಂದು ಎಲ್ಲರಿಗೂ ಅರ್ಥವಾಗಬಲ್ಲದು. ಪ್ರಬೋಧಿಸಿದವನು, ಯೋಗೀಶ್ವರನಾದವನು,

ಆದಿಕರ್ತನಾದವನು ಒಬ್ಬನೇ. ಆದ್ದರಿಂದ ಮೂರು ವಿಶಿಷ್ಟವಾದ ಶಬ್ದಗಳಿರುವ ಹೆಸರನ್ನು ದೇವರ ಗುರುತಾಗಿ ನಾನು ಇಟ್ಟುಕೊಂಡಿದ್ದೇನೆ. ತ್ರೈತ ಸಿದ್ಧಾಂತವನ್ನು ಜ್ಞಾಪಕ ಮಾಡಿ ಹೇಳುವವನೇ ಆಗಲಿ ಅದಕ್ಕೆ ಕರ್ತನು ಅಲ್ಲವಲ್ಲ! ಯಾವ ಕಡೆ ನೋಡಿದರೂ ಸಿದ್ಧಾಂತ ವಿಷಯದಲ್ಲಿ ನನ್ನನ್ನು ಮೋಸಗಾರ ಎನ್ನುವುದಕ್ಕಾಗಲಿ, ಅಸತ್ಯವಾದಿ ಎನ್ನುವುದಕ್ಕಾಗಲಿ ಯಾರಿಗು ಅವಕಾಶವಿಲ್ಲ.

ಪ್ರಪಂಚಕ್ಕೆ ಸಂಬಂಧಿಸಿದ ಸಿದ್ಧಾಂತಗಳೆಲ್ಲವೂ ಐದು ಶಾಸ್ತ್ರಗಳಿಗೆ ಸಂಬಂದಿಸಿರುವವು ಆದಾಗ, ಪರಮಾತ್ಮನಿಗೆ ಸಂಬಂಧಿಸಿದ ಸಿದ್ಧಾಂತ ಒಂದೇ ಒಂದು ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿದೆ. ಬ್ರಹ್ಮವಿದ್ಯೆ ಎಂದರೆ ದೊಡ್ಡ ವಿದ್ಯೆ ಎಂದು ಅರ್ಥ. ದೊಡ್ಡ ವಿದ್ಯೆಯನ್ನು ದೊಡ್ಡವನಾದ ದೇವರೇ ತಿಳಿಸಬೇಕು. ಆದ್ದರಿಂದ ಆತನು ಬ್ರಹ್ಮವಿದ್ಯಾಶಾಸ್ತ್ರವನ್ನು ಸೃಷ್ಟ್ಯಾದಿಯಲ್ಲೇ ಸೂರ್ಯನಿಗೆ ತಿಳಿಸಿದಹಾಗೆ ಹೇಳಿದ್ದಾನೆ. ಮೊದಲು ಬ್ರಹ್ಮವಿದ್ಯಾಶಾಸ್ತ್ರ ತಿಳಿದ ನಂತರ ಉಳಿದ ಪ್ರಪಂಚ ಶಾಸ್ತ್ರಗಳಾದ ಗಣಿತ, ಖಗೋಳ, ರಸಾಯನ, ಭೌತಿಕ, ಜ್ಯೋತಿಷ್ಯಗಳು ಮನುಷ್ಯರಿಗೆ ಆತ್ಮ ತಿಳಿಸಿದೆ. ಪ್ರಪಂಚ ಸಂಬಂಧ ಐದು ಶಾಸ್ತ್ರಗಳನ್ನು ಮನುಷ್ಯರಿಗೆ ಅವರ ಶರೀರದಲ್ಲಿನ ಆತ್ಮ ತಿಳಿಸಿದಾಗ, ದೈವ ಸಂಬಂಧ ಬ್ರಹ್ಮವಿದ್ಯಾ ಶಾಸ್ತ್ರವನ್ನು ಪರಮಾತ್ಮನೇ ಪ್ರಕೃತಿಯಿಂದ ತಿಳಿಸಿದ್ದಾನೆ. ಐದು ಶಾಸ್ತ್ರಗಳ ಸಿದ್ಧಾಂತಗಳನ್ನು ಎಷ್ಟನ್ನೋ ಆತ್ಮ ತಿಳಿಸಿದಾಗ, ಆರನೆಯ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರವೊಂದರ ಮೂರು ಸಿದ್ಧಾಂತಗಳನ್ನು ದೇವರು ಪ್ರಕೃತಿಯಿಂದ ತಿಳಿಸಿದ್ದಾನೆ. ಪ್ರಪಂಚ ಸಂಬಂಧ ಐದು ಶಾಸ್ತ್ರಗಳಿಗೆ ಒಂದೊಂದಕ್ಕೆ ಎಷ್ಟು ಸಿದ್ಧಾಂತಗಳಿವೆಯೆಂದು ಕೇಳಿದರೆ, ಅದಕ್ಕೆ ಉತ್ತರವಾಗಿ ಇಷ್ಟು ಎಂದು ಪರಿಮಿತಿ ಇಲ್ಲ ಎಂದು ಹೇಳಬಹುದು. ಬ್ರಹ್ಮವಿದ್ಯಾ ಶಾಸ್ತ್ರ ಪೂರ್ತಿಯಾಗಿ ಮೊದಲೇ ತಿಳಿಸಲಾಗಿದೆ. ಇನ್ನು ಉಳಿದಿರುವುದಾಗಲಿ, ಹೇಳಬೇಕಾಗಿರುವುದಾಗಲಿ ಯಾವುದೂ ಇಲ್ಲ. ಆದ್ದರಿಂದ ಅದರಲ್ಲಿ ಹೇಳಿರುವವು ಮೂರೇ ಸಿದ್ಧಾಂತಗಳು ಎಂದು ನಿರ್ಧಾರಿಸಿ ಹೇಳುತ್ತಿದ್ದೇವೆ. ಆದರೇ ಪ್ರಪಂಚ ಸಂಬಂಧ ಐದು ಶಾಸ್ತ್ರಗಳು ಇಲ್ಲಿಯವರೆಗೂ ಪೂರ್ತಿಯಾಗಿ ಹೇಳಲಿಲ್ಲ. ಇಲ್ಲಿಗೇ ಕೆಲವು ಶಾಸ್ತ್ರಗಳಲ್ಲಿ ಬಹಳ ಸಿದ್ಧಾಂತಗಳು,

ಕೆಲವು ಶಾಸ್ತ್ರಗಳಲ್ಲಿ ಕಡಿಮೆ ಸಿದ್ಧಾಂತಗಳು ತಿಳಿದಿವೆ. ಗಣಿತ, ರಸಾಯನ ಶಾಸ್ತ್ರಗಳಲ್ಲಿ ಹೆಚ್ಚಿನ ಸಿದ್ಧಾಂತಗಳು ತಿಳಿಸಿರುವಾಗ, ಖಗೋಳ, ಭೌತಿಕ ಶಾಸ್ತ್ರಗಳಲ್ಲಿ ಕಡಿಮೆ ಸಿದ್ಧಾಂತಗಳು ತಿಳಿಸಲ್ಪಟ್ಟಿವೆ. ಜ್ಯೋತಿಷ್ಯ ಶಾಸ್ತ್ರದಲ್ಲಿ ಬಹಳ ಕಡಿಮೆಯಾಗಿ ತಿಳಿಯಲ್ಪಟ್ಟಿವೆ. ಈ ಐದು ಶಾಸ್ತ್ರಗಳಲ್ಲಿ ಹೊಸ ಸಿದ್ದಾಂತಗಳನ್ನು ಇನ್ನೂ ತಿಳಿಯಬೇಕಾಗಿದೆ. ಒಂದು ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಮಾತ್ರ ಇರುವ ಮೂರು ಸಿದ್ಧಾಂತಗಳನ್ನು ದೇವರು ಮೊದಲೇ ತಿಳಿಸಿದ್ದಾನೆ.

ದೇವರು ತನ್ನ ಪ್ರಕೃತಿಯಿಂದ ತಿಳಿಸಿದ ಬ್ರಹ್ಮವಿದ್ಯಾಶಾಸ್ತ್ರದಲ್ಲಿನ ಮೂರು ಸಿದ್ಧಾಂತಗಳಲ್ಲಿ ಒಂದು ಅದ್ವೈತ ಸಿದ್ಧಾಂತ, ಎರಡು ದ್ವೈತ ಸಿದ್ಧಾಂತ, ಮೂರು ತ್ರೈತ ಸಿದ್ಧಾಂತ. ಮುಖ್ಯವಾಗಿ ಮೂರು ಸಿದ್ಧಾಂತಗಳನ್ನೇ ದೇವರು ಹೇಳಿದ್ದಾನೆ. ಆದರೆ ಅದ್ವೈತ ಸಿದ್ಧಾಂತದಿಂದ ಸ್ವಲ್ಪ ವಿಶಿಷ್ಟವಾಗಿ ಹೇಳಲಾಗಿರುವುದು ವಿಶಿಷ್ಟಾದ್ವೈತ. ವಿಶಿಷ್ಟಾದ್ವೈತವನ್ನು ಮಧ್ಯದಲ್ಲಿ ನಾವು ಹೇಳಿಕೊಂಡರೂ ಅದು ದೇವರು ಹೇಳಿದ ಅದ್ವೈತ ಸಿದ್ಧಾಂತದೊಳಗೇ ಸೇರಿಸಲಾಗಿದೆ. ನಂತರದು ದ್ವೈತ ಸಿದ್ಧಾಂತ, ಆ ನಂತರದು ತ್ರೈತ ಸಿದ್ಧಾಂತ. ಅದ್ವೈತ, ದ್ವೈತ, ತ್ರೈತ ಎನ್ನುವ ಮೂರು ಸಿದ್ಧಾಂತಗಳು ಬಿಟ್ಟರೆ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಮತ್ಯಾವ ಸಿದ್ಧಾಂತಗಳು ಇಲ್ಲ. ಈ ಮೂರು ಸಿದ್ಧಾಂತಗಳನ್ನು ಅನುಸರಿಸಿ, ಮನುಷ್ಯ ನೊಂದರ ಆಧ್ಯಾತ್ಮಿಕವೆಲ್ಲವೂ ನಿರ್ಮಿಸಲ್ಪಟ್ಟಿದೆ. ಭೂಮಿ ಮೇಲೆ ಮನುಷ್ಯ ಯಾವ ಮತವನ್ನು ಅನುಸರಿಸಿದರೂ ತ್ರಿ ಸಿದ್ಧಾಂತ ಆಧ್ಯಾತ್ಮಿಕವನ್ನು ಆಧಾರ ಮಾಡಿಕೊಳ್ಳಬೇಕಾಗಿದ್ದೆ. ದೇವರು ಹೇಳಿರುವುದು ಮೂರು ಸಿದ್ಧಾಂತಗಳೇ ಆದ್ದರಿಂದ ಯಾರಾದರೂ, ಯಾವ ಮತಸ್ಥರಾದರೂ ದೇವರನ್ನು ಕುರಿತು ತಿಳಿಯಬೇಕೆಂದರೆ ಮೂರು ಸಿದ್ಧಾಂತಗಳ ಜ್ಞಾನ ಹೊರತು ಇತರ ಜ್ಞಾನ ಎಲ್ಲಿಯೂ ಇಲ್ಲ. ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. "ನೀವು ಹೇಳುವುದು ಇಂದೂಗಳಿಗೆ (ಹಿಂದೂಗಳಿಗೆ) ಸರಿಹೋಗುವ ಜ್ಞಾನ ಅಲ್ಲವೆ! ಒಬ್ಬ ಮುಸ್ಲಿಮ್ ದೇವರನ್ನು ಕುರಿತು ಜ್ಞಾನ ತಿಳಿಯುವುದಕ್ಕೆ ಇಸ್ಲಾಮ್ ಧರ್ಮದ ಪ್ರಕಾರ ನಡೆದುಕೊಳ್ಳಬೇಕಾಗುತ್ತದೆ. ಇಸ್ಲಾಮ್ ಧರ್ಮವನ್ನು ತಿಳಿಸುವ ಗ್ರಂಥವನ್ನು

ದೇವರು ಖುರಾನ್ ರೂಪದಲ್ಲಿ ಕೊಟ್ಟಿದ್ದಾನೆ ಅಲ್ಲವೆ! ಅಂತಹದರಲ್ಲಿ ಪವಿತ್ರ ಖುರಾನ್ ಗ್ರಂಥದಲ್ಲಿ ಹೇಳಿದಹಾಗೆ ಅವರ ಇಸ್ಲಾಮ್ ಧರ್ಮದ ಪ್ರಕಾರ ಅನುಸರಿಸುತ್ತಾರಾಗಲಿ, ನೀವು ಯಾವ ಮತಸ್ಥನಾಗಲಿ, ಯಾರೇಯಾಗಲಿ ತ್ರೈತಸಿದ್ಧಾಂತ ಜ್ಞಾನವನ್ನೇ ಅನುಸರಿಸಬೇಕೆಂದು ಹೇಳುವುದು ಎಷ್ಟರಮಟ್ಟಿಗೆ ಸಮಂಜಸ" ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ!

ಸರ್ವಮಾನವರನ್ನು ಸೃಷ್ಟಿಸಿದವನು ಒಬ್ಬ ದೇವರೇ ಆಗಿರುವಾಗ, ಆತನು ಹೇಳಿದ ಧರ್ಮಗಳೆಲ್ಲವು ಮಾನವರಿಗೇ ಆಗಿರುವಾಗ, ದೇವರು ಹೇಳಿದ ಜ್ಞಾನ ಎಂದಿಗೂ ಒಂದೇ ಇರುತ್ತದೆ. ಆತನು ಆದಿಯಲ್ಲಿ ಒಂದೇ ಮಾನವರಿಗೆ ಬೇಕಾದ ಜ್ಞಾನವನ್ನು ಸಿದ್ಧಾಂತಗಳ ರೂಪದಲ್ಲಿ ಶಾಸ್ತ್ರಬದ್ಧವಾಗಿ ಹೇಳಿದ್ದಾನೆ. ಅದನ್ನೇ ಬ್ರಹ್ಮವಿದ್ಯಾ ಶಾಸ್ತ್ರ ಎಂದು ಹೇಳಿದ್ದೇವೆ. ದೇವರು ಒಂದು ಬಾರಿ ಆದಿಯಲ್ಲಿ ಹೇಳಿದ ಜ್ಞಾನವನ್ನು ಬೇರೆಬೇರೆ ಪ್ರವಕ್ತರು, ಬೇರೆಬೇರೆ ದೇಶಗಳಲ್ಲಿ ಹೇಳುವುದರಿಂದ, ಮನುಷ್ಯರು ಅದನ್ನು ಬೇರೆಬೇರೆ ಮತಗಳಾಗಿ ಭಾವಿಸಿ ಆಚರಿಸುತ್ತಿದ್ದಾರೆ. ಅಷ್ಟೇ ಆಗಲಿ ಯಾವ ಪ್ರವಕ್ತ ಹೇಳಿದರೂ, ಯಾವ ಮತ ಗ್ರಂಥದಲ್ಲಾದರೂ ಇರುವುದು ಒಂದೇ ದೇವರ ಜ್ಞಾನವೇ, ಅಂತಹದರಲ್ಲಿ ಯಾವ ಮತದಲ್ಲಾದರೂ ಅರ್ಥ ಮಾಡಿಕೊಂಡರೆ ಒಂದೇ ದೇವರಿಗೆ ಸಂಬಂಧಿಸಿದ ಒಂದೇ ಜ್ಞಾನವಿರುತ್ತದೆ. ಹಾಗೆ ಅಲ್ಲದೆ ಬೇರೆಬೇರೆ ಮತಗಳಿಗೆ ಬೇರೆಬೇರೆ ದೇವರಾಗಲಿ, ಬೇರೆಬೇರೆ ಜ್ಞಾನವಾಗಲಿ ಇರುವುದಿಲ್ಲ. ದೇವರನ್ನು, ದೇವರ ಜ್ಞಾನವನ್ನು ಸಂಕುಚಿತ ಭಾವದಿಂದ ನೋಡುವವರು ಮಾತ್ರವೇ ನಮ್ಮ ದೇವರು ಬೇರೆ, ನಮ್ಮ ಮತ ಬೇರೆ, ನಮ್ಮ ಜ್ಞಾನಬೇರೆ ಎನ್ನುತ್ತಿರುತ್ತಾರೆ. ಸರ್ವ ಪ್ರಪಂಚವನ್ನು, ಸರ್ವ ಮಾನವರನ್ನು ದೇವರು ಸೃಷ್ಠಿಸಿದ್ದಾನೆಂದು ಒಂದು ಕಡೆ ಹೇಳುತ್ತಾ, ನಿಮ್ಮ ದೇವರು ಬೇರೆ ನಮ್ಮ ದೇವರು ಬೇರೆಂದು ಹೇಳುವುದು ಸರಿಯೇನಾ? ಎಲ್ಲರಿಗೂ ದೊಡ್ಡವನು ಒಬ್ಬ ದೇವರೇ ಎಂದು ತಿಳಿದಾಗ, ಇನ್ನೊಂದು ದೇವರಿದ್ದಾನೆನ್ನುವುದು ತಪ್ಪಾಗುತ್ತದಲ್ಲವೆ!

ದೇವರು ತನ್ನ ಜ್ಞಾನವನ್ನು ತ್ರೈತ ಸಿದ್ಧಾಂತ ರೂಪದಿಂದ ಹೇಳಿದ್ದಾನೆ. ಅದೇ ಐದುಸಾವಿರ ವರ್ಷಗಳ ಹಿಂದೆ ಪರಮ ಪವಿತ್ರ ಪರಿಶುದ್ಧ ಭಗವದ್ಗೀತೆ ಗ್ರಂಥವಾಗಿದೆ. ಆ ಜ್ಞಾನವೇ ಎರಡು ಸಾವಿರ ವರ್ಷಗಳ ಹಿಂದೆ ಪರಿಶುದ್ಧ ಬೈಬಲ್ ಗ್ರಂಥವಾಗಿದೆ. ಅದೇ 14 ನೂರು ವರ್ಷಗಳ ಪೂರ್ವದಲ್ಲಿ ಪವಿತ್ರ ಖುರಾನ್ ಗ್ರಂಥವಾಗಿದೆ. ದೇವರು ಹೇಳಿದ ಜ್ಞಾನ ನಮ್ಮ ಗ್ರಂಥದಲ್ಲಿ ಇದೆಯೆಂದು ಹೇಳುವವರು ನಿಮ್ಮ ದೇವರು ಬೇರೆ, ನಿಮ್ಮ ಮತಬೇರೆಂದು ಹೇಳುವುದು ದೇವರ ಜ್ಞಾನವನ್ನು ಕೀಳಾಗಿನೋಡಿದಂತಲ್ಲವೆ! ಒಬ್ಬ ಮುಸ್ಲೀಮ್ ಸೋದರನು ನನ್ನನ್ನು ಒಂದು ಪ್ರಶ್ನೆ ಕೇಳಿದ್ದಾನೆ. ಅದೇನೆಂದರೆ! "ನೀವು ತ್ರೈತ ಸಿದ್ಧಾಂತವನ್ನು ಹೇಳಿದ್ದೀರಾ. ನಿಮ್ಮ ಮಾತಿನ ಪ್ರಕಾರ ತ್ರೈತ ಎಂದರೆ ಮೂರು ಆತ್ಮಗಳೆಂದು ಹೇಳುತ್ತಿದ್ದೀರ. ಒಬ್ಬನು ಜೀವಾತ್ಮ ಎಂದೂ, ಎರಡನೆಯವನು ಆತ್ಮ ಎಂದೂ, ಮೂರನೆಯವನು ಪರಮಾತ್ಮ ಎಂದೂ ಹೇಳುತ್ತಿದ್ದೀರಲ್ಲ! ನಮ್ಮ ಗ್ರಂಥದಲ್ಲಿ ಜೀವಾತ್ಮ (ಮನುಷ್ಯ) ದೇವರು ಬಿಟ್ಟು ಮಧ್ಯದಲ್ಲಿ ಆತ್ಮ ಎನ್ನುವುದು ಎಲ್ಲೂ ಇಲ್ಲವಲ್ಲ! ಹಾಗಿರುವಾಗ ನಮಗೂ ಸಹ ನಿಮ್ಮ ತ್ರೈತ ಸಿದ್ಧಾಂತವನ್ನು ಅಂಟಿಸುವುದು ಒಳ್ಳೆಯದೇನಾ" ಎಂದು ಕೇಳಿದ್ದಾನೆ. ಅದಕ್ಕೆ ನಾನು ಹೀಗೆ ಸಮಾಧಾನವನ್ನು ಹೇಳಿದ್ದೇನೆ. ನಿಮ್ಮ ಮನಸ್ಸಲ್ಲಿ ನಿಮ್ಮ ಮಾತುಗಳಲ್ಲಿ ಮತ ಎನ್ನುವುದು ಅಡ್ಡವಾಗಿರುವಾಗ ನನ್ನ ಮಾತುಗಳು ತಪ್ಪಾಗಿ ಕಾಣಿಸಿರಬಹುದು. ನಾನು ಹೇಳುವುದು ಮತಗಳಿಗೆ ಅತೀತವಾದ ಬೋಧನೆ. ನನ್ನದು ನಿನ್ನದು ಎನ್ನುವುದು ಯಾರದೂ ಇಲ್ಲಿ ಇರುವುದಿಲ್ಲ, ದೇವರ ಬೋಧನೆ ಮಾತ್ರ ಇರುತ್ತದೆ. ದೇವರು ಹೇಳಿದ ಬೋಧನೆ, ಎಲ್ಲಾ ಮತಗಳಿಗೂ ಸಮಾನವಾದದ್ದೆ ಎಂದು ಅರ್ಥವಾಗದಿರುವಾಗ ಒಬ್ಬರಿಗೆ ಒಂದು ವಿಧ, ಮತ್ತೊಬ್ಬರಿಗೆ ಮತ್ತೊಂದು ವಿಧವಾಗಿ ಕಾಣಿಸಿ ಇರಬಹುದು. ದೇವರು ಹೇಳಿದ ಬೋಧನೆ ಸೃಷ್ಟ್ಯಾದಿಯಲ್ಲೇ ಹೇಳಿರುವುದು. ಎಲ್ಲಾ ಮತಗಳು ಅದನ್ನು ಅನುಸರಿಸಬೇಕಾಗಿದ್ದೇ. ದೇವರು ತನ್ನ ಬೋಧನೆಯಲ್ಲಿ ತ್ರೈತ ಸಿದ್ಧಾಂತವನ್ನು ಹೇಳಿದ್ದಾನೆ. ಅದು ಎಲ್ಲ ಮತಗಳ ಮೂಲ ಗ್ರಂಥಗಳಲ್ಲಿ ತಪ್ಪದೆ ಇರುತ್ತದೆ. ದೇವರು ಹೇಳಿದ ಸಿದ್ಧಾಂತವಿಲ್ಲದ್ದು ಯಾವುದೂ ಮೂಲ ಗ್ರಂಥವೆನಿಸಿಕೊಳ್ಳುವುದಿಲ್ಲ. ಭಗವದ್ಗೀತೆಯಲ್ಲಿ

ಪುರುಷೋತ್ತಮಪ್ರಾಪ್ತಿ ಯೋಗ ವೆಂಬ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಮೂವರು ಪುರುಷರನ್ನು ಕುರಿತು ಇರುವಾಗ, ಅದೇ ವಿಷಯ ಖುರಾನ್ ಗ್ರಂಥದಲ್ಲಿ 50ನೇ 'ಖಾಫ್' ಸುರಾದಲ್ಲಿ 21ನೇ ಆಯತ್‌ನಲ್ಲಿ ಹೀಗೆ ಇದೆ. "ಪ್ರತಿ ವ್ಯಕ್ತಿ ತನ್ನಹಿಂದೆ ತನ್ನನ್ನು ತೆಗೆದುಕೊಂಡು ಬರುವವನೊಬ್ಬನು, ಸಾಕ್ಷಿ ಕೊಡುವವನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ" ಈ ವಾಕ್ಯವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವುದಾದರೆ ಇದರಲ್ಲಿ ಮೂವರು ಪುರುಷರು ಕಾಣಿಸುವುದಿಲ್ಲವೇ?

ಈ ಪ್ರಪಂಚವನ್ನು ದೇವರು ಯಾವಾಗ ಪ್ರಾರಂಭಿಸಿದ್ದಾನೋ ಯಾರಿಗೂ ತಿಳಿಯದು. ಯಾರಾದರೂ ಸೃಷ್ಠಿ ಪ್ರಾರಂಭದ ಸಮಯ ಇಂತಹ ಕಾಲದಲ್ಲಿ ನಡೆದಿದೆ ಎಂದರೆ ಅದು ಪೂರ್ತಿ ಅಸತ್ಯವಾಗುತ್ತದೆ. ಸೃಷ್ಠಿ ಪ್ರಾರಂಭವಾದಾಗ ದೈವಜ್ಞಾನ ತಿಳಿಯುವ ಸಾಮರ್ಥ್ಯ ಮನುಷ್ಯರಿಗೆ ಇಲ್ಲ, ಆದ್ದರಿಂದ ದೇವರು ಪ್ರಕೃತಿಯಿಂದ ಮೊಟ್ಟಮೊದಲು ತನ್ನ ಜ್ಞಾನವನ್ನು ಸಂಪೂರ್ಣವಾಗಿ ಸೂರ್ಯನಿಗೆ ತಿಳಿಸಿದ್ದಾನೆ. ಮೊದಲು ಸೂರ್ಯ ತಿಳಿದುಕೊಂಡ ಜ್ಞಾನವನ್ನು ನಂತರ, ಸ್ವಲ್ಪಕಾಲಕ್ಕೆ ಮನುಷ್ಯ ದೈವಜ್ಞಾನವನ್ನು ಗ್ರಹಿಸುವ ಸಾಮರ್ಥ್ಯ ಹೊಂದಿದ ಸಮಯದಲ್ಲಿ, ಸೂರ್ಯನು ಮನುವು ಎಂಬ ವ್ಯಕ್ತಿಗೆ ಬೋಧಿಸಿದ್ದಾನೆ. ಮೊಟ್ಟಮೊದಲು ಭೂಮಿ ಮೇಲೆ ಮನುಷ್ಯನಿಗೆ ಸೂರ್ಯನು ದೈವಜ್ಞಾನವನ್ನು ಬೋಧಿಸಿದ್ದಾನೆ. ಆದ್ದರಿಂದ ಸೂರ್ಯನನ್ನು ಆದಿ ಗುರುವು (ಬೋಧಕನು) ಎನ್ನುತ್ತಿದ್ದೇವೆ. ಭೂಮಿ ಮೇಲೆ ಮೊದಲು ಒಬ್ಬ ವ್ಯಕ್ತಿಗೆ ಜ್ಞಾನ ತಿಳಿದ ನಂತರ ಎರಡನೆಯ ವ್ಯಕ್ತಿಗೆ, ಮೂರನೆಯ ವ್ಯಕ್ತಿಗೆ ಹೀಗೆ ವರಸೆ ಕ್ರಮದಲ್ಲಿ ಎಲ್ಲರಿಗೂ ತಿಳಿದುಹೋಗಿದೆ. ಸ್ವಲ್ಪ ಕಾಲಕ್ಕೆ ದೈವಜ್ಞಾನ ಭೂಮಂಡಲದಲ್ಲಿರುವವರಿಗೆಲ್ಲಾ ತಿಳಿದು ಹೋಗಿದೆ. ತಿಳಿದವನು ಒಬ್ಬನು ನೂರುಮಂದಿಗೆ ತಿಳಿಸುತ್ತಾ ಬೋಧಕನಾಗಿ ಬದಲಾದಾಗ, ಉಳಿದವರು ಕೇಳುತ್ತಾ ಎಲ್ಲರೂ ದೇವರು ಹೇಳಿದ ಜ್ಞಾನವನ್ನು ತಿಳಿದುಕೊಂಡಿದ್ದಾರೆ. ಆದರೆ ಇಲ್ಲಿ ನಾವು ಸ್ವಲ್ಪ ಗಮನಿಸಬೇಕಾಗಿರುವುದು ಇದೆ. ಅದೇನೆಂದರೆ! ಸೂರ್ಯನು

ಖಗೋಳದಲ್ಲಿ ದೇವರ ಪರಿಪಾಲನಾ ವ್ಯವಸ್ಥೆಯಲ್ಲಿರುವವನು. ಭೂಮಿ ಮೇಲೆ ಜೀವಿರಾಶಿಗಳು, ಮನುಷ್ಯರು ಎಲ್ಲರೂ ಪರಿಪಾಲಿಸಲ್ಪಡುವವರೆ. ಮೊದಲು ಪರಿಪಾಲನೆಯಲ್ಲಿರುವವನಾದ ಸೂರ್ಯನು ಪಾಲಿಸಲ್ಪಡುವ ಮನುಷ್ಯರಿಗೆ ಮೊಟ್ಟಮೊದಲು ಜ್ಞಾನವನ್ನು ಹೇಳಿದ್ದಾನೆ. ಮೊದಲು ಸೂರ್ಯನು ಮನುಷ್ಯರಿಗೆ ಹೇಳಿದಾಗ, ದೇವರು ಹೇಳಿರುವುದು ಹೇಳಿದಹಾಗೆ ತಿಳಿಸಿದ್ದಾನೆ. ಇಲ್ಲಿ ಬಹಳ ಜನರಿಗೆ ತಿಳಿಯದ ವಿಷಯವೇನೆಂದರೇ! ಸೂರ್ಯನು ಸಾಧಾರಣ ಮನುಷ್ಯನಿಗೆ ಹೇಗೆ ತಿಳಿಸಿದ್ದಾನೆನ್ನುವ ವಿಷಯ ಪ್ರಶ್ನೆಯಾಗಿ ಬಂದು, ಅದಕ್ಕೆ ಉತ್ತರ ತಿಳಿಯದೆ ಸೂರ್ಯನು ಹೇಳಿದ್ದಾನೆ ಎನ್ನುವುದು ಅಸತ್ಯವೆಂದುಕೊಳ್ಳುತ್ತಿರುವರು. ಸೂರ್ಯನು ಹೇಗೆ ಹೇಳಿದ್ದಾನೆನ್ನುವ ವಿಷಯವನ್ನು ವಿಜ್ಞಾನಿಗಳೆಂದು ಕೊಳ್ಳುವವರು ಕೆಲವರು ನಂಬದೆ ಹೋದರೆ, ಯಾರಿಗೂ ಯಾವ ಮಾತ್ರ ತಿಳಿಯದ ವಿಷಯವೊಂದು ಇದೆ, ಅದೇನೆಂದರೆ!

ಸೂರ್ಯನು ಮೊಟ್ಟಮೊದಲು ದೈವಜ್ಞಾನವನ್ನು ಬಹಿರ್ಗತ ಮಾಡಿ ಹೇಳುವಾಗ, ದೇವರ ಪರಿಪಾಲನಾ ವಿಭಾಗದಲ್ಲಿರುವ ಕೋಟಾನುಕೋಟಿ ಭೂತಗಳು, ಗ್ರಹಗಳು ಮೊದಲಾದವರಲ್ಲಿ ಕೆಲವು ಲಕ್ಷ ಮಂದಿ ಭೂತಗಳು, ಕೆಲವು ಲಕ್ಷ ಮಂದಿ ಗ್ರಹಗಳೂ ದೇವರ ಜ್ಞಾನವನ್ನು ಸೂರ್ಯನಿಂದ ಕೇಳಿದ್ದಾರೆ. ಹಾಗೆ ಕೇಳಿದ ಗ್ರಹಗಳೂ, ಭೂತಗಳೂ ತಮ್ಮೊಂದಿಗೆ ಸಮಾನವಾಗಿರುವ ಭೂತಗಳಿಗೂ, ಗ್ರಹಗಳಿಗೂ ಸಹ ನಂತರ ತಿಳಿಸುವುದು ನಡೆದಿದೆ. ಅಷ್ಟೇ ಅಲ್ಲದೆ ಅಲ್ಲಲ್ಲಿ ಅಪರೂಪವಾಗಿ ಮನುಷ್ಯರಿಗೂ ಸಹ ತಿಳಿಸಿದ ಚರಿತ್ರೆಗಳು ಇವೆ. ಭೂತಗಳು, ಗ್ರಹಗಳು ಸೂರ್ಯನು ಮನುಷ್ಯರಿಗೆ ಹೇಳಿದಾಗಲೇ ದೈವಜ್ಞಾನವನ್ನು ತಿಳಿದುಕೊಂಡಿದ್ದಾರೆನ್ನುವುದು ನನ್ನದು ಸ್ವಲ್ಪ ಅಧಿಕ ಪ್ರಸ್ತಾವನೇ ಆದರೂ, ನಂತರ ಈ ಮಾತು ಸಾಕ್ಷಿಯಾಗಿ ಇರುತ್ತದೆಂದು ಹೇಳುತ್ತಿದ್ದೇವೆ. ಸೂರ್ಯನು ದೇವರು ಹೇಳಿದ ಜ್ಞಾನವನ್ನು ಇರುವುದು ಇದ್ದಹಾಗೆ ನೂರರಷ್ಟು ಮನುಷ್ಯನಿಗೆ ತಿಳಿಸಿದಾಗ, ನಂತರ ಮನುಷ್ಯರು ಒಬ್ಬರಿಗೊಬ್ಬರು ಹೇಳಿಕೊಳ್ಳುವು ದರಲ್ಲಿ ದೇವರು ಹೇಳಿದ ಜ್ಞಾನದಲ್ಲಿನ ಭಾವ ಬಹಳ ಶಾತ ಕಡಿಮೆಯಾಗಿದೆ.

ಕೊನೆಗೆ ದೈವಜ್ಞಾನ ಕೆಲವು ಕಡೆ ಪೂರ್ತಿ ವಿರುದ್ಧ ಭಾವದೊಳಗೆ ಹೋಗಿದೆ. ಬೋಧಕರ ತಲೆಯಲ್ಲಿ ಯಾವ ಭಾವವಿದ್ದರೆ ಅದೇ ಭಾವವನ್ನು ಪ್ರಜೆಗಳಿಗೆ ಹೇಳುವುದರಿಂದ, ಕೇಳಿದ ಪ್ರಜೆಗಳು ಸಹ ಅದನ್ನೇ ದೇವರ ಜ್ಞಾನ ಎಂದುಕೊಂಡು ದೈವಜ್ಞಾನಕ್ಕೆ ವಿರುದ್ಧ ಭಾವದೊಳಗೆ ಹೋಗುತ್ತಿದ್ದಾರೆ. ಆ ವಿಧವಾಗಿ ಕೆಲವು ಕಡೆ ಮಾತ್ರ ನಡೆಯುತ್ತಿದೆ. ಇಂದೂಗಳಿಗೆ ಮೂಲಗ್ರಂಥವಾಗಿರುವ ಭಗವದ್ಗೀತೆಯಲ್ಲಾಗಲಿ, ಇಸ್ಲಾಮ್‌ನಲ್ಲಿ ಖುರಾನ್ ಗ್ರಂಥದಲ್ಲಾಗಲಿ, ಕ್ರೈಸ್ತವದಲ್ಲಿನ ಬೈಬಿಲ್ ಗ್ರಂಥದಲ್ಲಾಗಲಿ ಕೆಲವು ವಾಕ್ಯಗಳನ್ನು ಮನುಷ್ಯರು ತಪ್ಪಾಗಿ ಅರ್ಥ ಮಾಡಿಕೊಳ್ಳುವುದು ನಡೆಯುತ್ತಿದೆ. ಈ ನನ್ನ ಮಾತನ್ನು ಸಾಧಾರಣವಾಗಿ ತೆಗೆದುಕೊಳ್ಳಬೇಡಿ, ನಾನು ಹೇಳುವುದು ನಗ್ನ ಸತ್ಯ. ಈಗ ಕೆಲವರು ನನ್ನನ್ನು ಒಂದು ಪ್ರಶ್ನೆ ಕೇಳಬಹುದು. "ನೀನು ಹಿಂದೂ ಮತದಲ್ಲಿ ಹುಟ್ಟಿರುವವನೆ ಅಲ್ಲವೆ! ಒಂದು ವೇಳೆ ನೀನು ಹೇಳಿದರೆ ಎಲ್ಲರಿಗಿಂತಲೂ ಸ್ವಲ್ಪ ಹೆಚ್ಚಾಗಿ ಭಗವದ್ಗೀತೆಯಲ್ಲಿ ಹೇಳುವುದಕ್ಕೆ ಅವಕಾಶವಿದೆ. ಆದರೆ ಖುರಾನ್ ಗ್ರಂಥದಲ್ಲಿ ಮುಸ್ಲೀಮ್ ಪಂಡಿತರಿಗೆ ತಿಳಿಯದ ಭಾವಗಳಾಗಲಿ, ಹಾಗೇ ಬೈಬಲ್ ಗ್ರಂಥದೊಳಗೆ ಪಂಡಿತರಾದ ಕ್ರೈಸ್ತವ ಬೋಧಕರಿಗೂ ಅರ್ಥವಾಗದ ವಾಕ್ಯ ಗಳಾಗಲಿ ನಿಮಗೆ ಅರ್ಥವಾಗಿವೆಯೆಂದು ಹೇಳಬಲ್ಲಿರಾ" ಎಂದು ಕೇಳಬಹುದು. ಅದಕ್ಕೆ ನನ್ನ ಸಮಾಧಾನ ಏನೆಂದರೆ!

ನಾನು ಯಾವ ಮತದಲ್ಲಿ ಹುಟ್ಟಿದರೂ, ದೇವರು ಹೇಳಿದ ಜ್ಞಾನ ಎಲ್ಲರಿಗೂ ಒಂದೇ. ಆ ಪದ್ಧತಿ ಪ್ರಕಾರ ಜ್ಞಾನ ನನ್ನದೇ ಆಗಿರುವಾಗ, ನನ್ನ ಜ್ಞಾನವೇ ಎಲ್ಲಾ ಮತಗಳಲ್ಲಿ ಇರುವಾಗ, ಯಾವ ಮತದಲ್ಲಿ ತಪ್ಪಿದ್ದರೂ ಅವರನ್ನು ಸರಿಯಾದ ಮಾರ್ಗದೊಳಗೆ ಕಳಿಸುವುದಕ್ಕೆ ಒಬ್ಬ ಮನುಷ್ಯನಾಗಿ ನನಗೆ ಎಷ್ಟೋ ಜವಾಬ್ದಾರಿ ಇದೆ. ಪ್ರಪಂಚ ವಿಷಯಗಳೊಂದಿಗೆ ನನಗೆ ಯಾವ ಮಾತ್ರ ಸಂಬಂಧವಿಲ್ಲ. ದೈವವಿಷಯ ಒಂದರಲ್ಲೇ ನಾನು ಎಲ್ಲಾದರೂ, ಯಾವ ಮತದಲ್ಲಾದರೂ ಹೇಳಬಲ್ಲೆನು. ಜ್ಞಾನವೊಂದರ ಸಂಬಂಧದೊಂದಿಗೆ ಯಾವ ಮತವಾದರೂ ನನ್ನ ಮತವೇ ಆಗುತ್ತದೆ. ಆದ್ದರಿಂದ ಸುಲಭವಾಗಿ

ಹೇಳಬಲ್ಲೆನು. ನಿಮಗೆ ಅರ್ಥವಾಗುವುದಕ್ಕೆ ಇಸ್ಲಾಮ್ ಧರ್ಮವನ್ನು ಬೋಧಿಸುವ ಖುರಾನ್ ಗ್ರಂಥದಲ್ಲಿ (ದಿವ್ಯ ಖುರಾನ್ ಗ್ರಂಥದಲ್ಲಿ) ಮೂವರು ಪುರುಷರ ತ್ರೈತ ಸಿದ್ಧಾಂತವನ್ನು ಕುರಿತು 50ನೇ ಸುರಾ "ಖಾಫ್" ನಲ್ಲಿ, 21ನೇ ವಾಕ್ಯ **"ಪ್ರತಿ ವ್ಯಕ್ತಿ ತನ್ನ ಹಿಂದೆ ಒಬ್ಬ ಓಡಿಸುವವನೂ, ಒಬ್ಬ ಸಾಕ್ಷಿ ಹೇಳುವವನೂ ಇರುವ ಸ್ಥಿತಿಯಲ್ಲಿ ಬರುತ್ತಾನೆ"** 22ನೇ ವಾಕ್ಯದಲ್ಲಿ "ಈ ವಿಷಯವನ್ನು ಕುರಿತು ನೀನು ಅಶ್ರದ್ಧೆಯಲ್ಲಿ ಬಿದ್ದಿದ್ದೀಯ. ನಾವು ನಿನ್ನ ಮುಂದೆ ಬಿದ್ದಿರುವ ತೆರೆಯನ್ನು ತೊಲಗಿಸಿದ್ದೇವೆ. ಈ ದಿನ ನಿನ್ನ ದೃಷ್ಠಿ ಬಹಳ ನಿಶಿತವಾಗಿ ಇದೆ."

ಇದೇ ವಿಷಯವೆ ಅದೇ ಸುರಾ, ಅದೇ ಆಯತ್‌ಗಳಲ್ಲಿ "ಅಂತಿಮ ದೈವಗ್ರಂಥ ಖುರ್‌ಆನ್" ಎಂಬ ಗ್ರಂಥದಲ್ಲಿ ಹೀಗೆ ಇದೆ. ಸುರಾ 50, ಆಯತ್ 21, 22 **"ಪ್ರತಿ ವ್ಯಕ್ತಿ ತನ್ನಹಿಂದೆ ತೆಗೆದುಕೊಂಡು ಬರುವವನೊಬ್ಬನು, ಸಾಕ್ಷಿ ಕೊಡುವವನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ" ನಿಶ್ಚಯವಾಗಿ ನೀನು ಇದರ ಬಗ್ಗೆ ಅಲಕ್ಷ್ಯ ವಹಿಸಿದ್ದೀಯ. ಇನ್ನು ನಿನ್ನಿಂದ ನಿನ್ನ ತೆರೆಯನ್ನು ಸರಿಸಿದ್ದೇವೆ. ಈ ದಿನ ನಿನ್ನ ದೃಷ್ಟಿಯೂ ತೀಕ್ಷಣವಾಗಿದೆ."** ಇಲ್ಲಿ ಎರಡು ಗ್ರಂಥಗಳಲ್ಲಿಯೂ ಒಂದೇ ಭಾವದಿಂದ ಇರುವ ವಾಕ್ಯಗಳು ಇವೆ. 21ನೇ ಆಯತ್ (ವಾಕ್ಯ)ಲ್ಲಿ ತೆಗೆದುಕೊಂಡು ಬರುವವನು ಎಂದು ಒಂದು ಗ್ರಂಥ ದಲ್ಲಿಯೂ, ಪ್ರತಿ ವ್ಯಕ್ತಿ ತನ್ನ ಹಿಂದೆ ಓಡಿಸುವವನೊಬ್ಬನು ಎಂದು ಮತ್ತೊಂದು ಗ್ರಂಥದಲ್ಲಿಯೂ ಬರೆದಿದ್ದರೂ ಕೆಲವು ಪದಗಳು ಬೇರೆಯಾಗಿ ಕಳುಹಿಸುವವನು, ತೆಗೆದುಕೊಂಡು ಬರುವವನು ಎಂದು ಇದ್ದರೂ, ಎರಡರ ಭಾವ ಒಂದೇ ಎಂದು ಗ್ರಹಿಸಬೇಕು. ಪಕ್ಕದಲ್ಲೇ 22ನೇ ಆಯತ್ (ವಾಕ್ಯ)ದಲ್ಲಿ ದಿವ್ಯ ಖುರಾನ್‌ನಲ್ಲಿ ಈ ವಿಷಯವನ್ನು ಕುರಿತು, ನೀನು ಅಶ್ರದ್ಧೆಯಲ್ಲಿ ಬಿದ್ದಿದ್ದೀಯ ಎಂದು ಹೇಳಿದರೆ, ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ನಿಶ್ಚಯವಾಗಿ ನೀನು ಇದರಬಗ್ಗೆ ನಿರಾಸಕ್ತಿ ವಹಿಸಿದ್ದೀಯ ಎಂದು ಬರೆಯಲಾಗಿದೆ. ಎರಡು ಗ್ರಂಥಗಳಲ್ಲಿ ಉಪಯೋಗಿಸಿದ ಅಶ್ರದ್ಧೆ, ಅಲಕ್ಷ್ಯ ಎನ್ನುವ ಪದಗಳು ಬೇರೆಯಾದರೂ ಎರಡೂ ಒಂದೇ ಅರ್ಥವನ್ನು ಕೊಡುವಹಾಗೆ ಇವೆಯೆಂದು ತಿಳಿಯಬೇಕು.

ಮುಖ್ಯವಾಗಿ ಈ ವಾಕ್ಯಗಳಲ್ಲಿ ಗಮನಿಸಬೇಕಾಗಿರುವುದು ಏನೆಂದರೆ! ಪ್ರತಿ ವ್ಯಕ್ತಿ ತನ್ನ ಹಿಂದೆ ಒಬ್ಬ ಓಡಿಸುವವನೂ, ಒಬ್ಬ ಸಾಕ್ಷಿ ಹೇಳುವವನೂ ಎಂದು ಇರುವಾಗ ಪ್ರತಿ ವ್ಯಕ್ತಿ ಎಂದರೆ ಒಬ್ಬ ವ್ಯಕ್ತಿಯನ್ನು ಕುರಿತು ಲೆಕ್ಕಿಸಿ ಕೊಳ್ಳೋಣ. ನಂತರ ತನ್ನ ಹಿಂದೆ ಒಬ್ಬ ಓಡಿಸುವವನು ಯಾರಾದರೆ ಇದ್ದಾರೋ ಅವನನ್ನು ಎರಡನೆಯವನಾಗಿ ಲೆಕ್ಕಿಸಿಕೊಳ್ಳೋಣ. ಆ ನಂತರ ಒಬ್ಬ ಸಾಕ್ಷಿ ಕೊಡುವವನು ಯಾರಾದರೆ ಇದ್ದಾರೋ ಅವನನ್ನು ಮೂರನೆ ಯವನಾಗಿ ಲೆಕ್ಕಿಸಿಕೊಳ್ಳಬಹುದು. ಈ ವಿಧವಾಗಿ ಲೆಕ್ಕಿಸಿದರೆ ಒಬ್ಬ ಮನುಷ್ಯನ ಹಿಂದೆ ಕಾಣಿಸದ ಇಬ್ಬರಿದ್ದಾರೆಂದು ತಿಳಿಯುತ್ತಿದೆ. ಒಬ್ಬ ಮನುಷ್ಯ ಶರೀರದಲ್ಲಿ ಒಬ್ಬ ಜೀವಾತ್ಮನಿರುವಾಗ, ಆತನನ್ನು ಎಲ್ಲ ವಿಧಗಳಲ್ಲಿ ನಡೆಸುವ ಆತ್ಮ ಸಹ ಇದೆ. ಆದರೆ ಶರೀರದಲ್ಲಿ ಜೀವಾತ್ಮ ಏನು ಅನುಭವಿಸುತ್ತಿರುವುದು, ಆತ್ಮ ಹೇಗೆ ನಡೆಸುತ್ತಿರುವುದು ಸಾಕ್ಷಿಯಾಗಿ ಇಬ್ಬರನ್ನು ನೋಡುತ್ತಿರುವ ದೇವರು ಸಹ ಇದ್ದಾನೆ. ಈ ವಿಧವಾಗಿ ಒಂದು ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಮೂವರಿದ್ದಾರೆಂದು ಪವಿತ್ರ ಖುರಾನ್ ಗ್ರಂಥದಲ್ಲಿ ತಿಳಿದು ಬಂದಿದೆ. ಸೃಷ್ಠ್ಯಾದಿಯಲ್ಲಿ ದೇವರು ಹೇಳಿದ ವಿಷಯ ಖುರಾನ್ ಗ್ರಂಥದೊಳಗೆ ಹೇಗೆ ಬಂದಿದೆಯೆಂದು ಯಾರಾದರೂ ಕೇಳಿದರೆ ಅದಕ್ಕೆ ಈ ವಿಧವಾಗಿ ಸಮಾಧಾನ ವಿದೆ. ಸೂರ್ಯನು ಭೂಮಿ ಮೇಲೆ ಮನುವಿಗೆ, ದೇವರ ಜ್ಞಾನವನ್ನು ಹೇಳುವಾಗ ಲಕ್ಷಾಂತರ ಗ್ರಹಗಳು, ಭೂತಗಳು ಶ್ರದ್ಧೆಯಿಂದ ಕೇಳಿದ್ದಾರೆಂದು ಹೇಳಿದ್ದೇವಲ್ಲವೆ! ಅವರಲ್ಲಿ ದೇವರ ಪರಿಪಾಲನಾ ಯಂತ್ರಾಂಗದಲ್ಲಿರುವವನಾದ ಜಿಬ್ರಯೇಲ್ ಎನ್ನುವ ಒಂದು ಗ್ರಹ ಕೇಳಿಸಿಕೊಂಡಿದೆ. ಅದೇ ವಿಷಯವನ್ನೇ ಜಿಬ್ರಯೇಲ್, ಮಹಮ್ಮದ್ (ಸಂ) ಪ್ರವಕ್ತರಿಗೆ ಹೇಳುವುದು ನಡೆದಿದೆ. ಮೂರು ಆತ್ಮಗಳ ವಿಷಯ ಮನುಷ್ಯರಿಗೆ ಯಾರಿಗೂ ತಿಳಿಯದು. ಆದ್ದರಿಂದ ಈ ವಿಷಯವನ್ನು ಕುರಿತು ನೀವು ಅಶ್ರದ್ಧೆಯಾಗಿ ಇದ್ದೀರೆಂದು 50ನೇ ಸುರಾ 22ನೇ ವಾಕ್ಯದಲ್ಲಿ ಜಿಬ್ರಯೇಲ್ ದೂತ ಹೇಳುವುದು ನಡೆದಿದೆ. ಆಗಲೆ ಅದೇ ವಾಕ್ಯದಲ್ಲೇ (ಅದೇ ಆಯತ್‌ನಲ್ಲೇ)' ಈಗ ನಿನ್ನ ಮುಂದಿರುವ ತೆರೆಯನ್ನು ತೊಲಗಿಸಿದ್ದೇವೆ. ಈ ದಿನ ನಿನ್ನ ದೃಷ್ಠಿ ಬಹಳ ತೀಕ್ಷಣವಾಗಿ ಇದೆ' ಎಂದು ಹೇಳಿದ್ದಾನೆ. ಆ ವಿಧವಾಗಿ

ಜಿಬ್ರಯೇಲ್ ದೂತ ಹೇಳುವುದರಿಂದ ಅಲ್ಲಿಯವರೆಗು ಮನುಷ್ಯನಿಗೆ ತಿಳಿಯದ ಮೂರು ಆತ್ಮಗಳ ವಿವರ ತಿಳಿದಿದೆಯೆಂದು, ಅಲ್ಲಿಯವರೆಗು ಅಡ್ಡವಾಗಿರುವ ಅಜ್ಞಾನದ ತೆರೆಯನ್ನು ಜಿಬ್ರಯೇಲ್ ತೊಲಗಿಸಿ ಸತ್ಯವನ್ನು ತೋರಿಸಿದ್ದಾನೆಂದು, ಹಾಗೆ ಸತ್ಯವನ್ನು ತಿಳಿಯುವುದರಿಂದ ಮಾನವನ ಜ್ಞಾನದೃಷ್ಠಿ ಅಶ್ರದ್ಧೆ ಅಲಕ್ಷ್ಯ ಇಲ್ಲದೆ ಚುರುಕುತನದಿಂದ (ತೀಕ್ಷ್ಣವಾಗಿ) ಬದಲಾಗಿದೆಯೆಂದು ನಮಗೆ ಅರ್ಥವಾಗಿದೆ.

ಸೃಷ್ಟ್ಯಾದಿಯಲ್ಲಿ ಸೃಷ್ಠಿಕರ್ತನಾದ ದೇವರು ಹೇಳಿದ ಮೂರು ಆತ್ಮಗಳ ವಿವರವನ್ನು ಐದು ಸಾವಿರ ವರ್ಷಗಳ ಪೂರ್ವದಲ್ಲಿ ಕೃಷ್ಣನು ಅರ್ಜುನನಿಗೆ ಹೇಳಿದರೆ, ಹದಿನಾಲ್ಕು ನೂರು ವರ್ಷಗಳ ಪೂರ್ವದಲ್ಲಿ ಜಿಬ್ರಯೇಲ್, ದೇವರು ಹೇಳಿದ ಮೂರು ಆತ್ಮಗಳ ವಿಷಯವನ್ನೇ 50ನೇ ಸುರಾ ಖಾಫ್‌ನಲ್ಲಿ 17, 21 ವಾಕ್ಯಗಳಲ್ಲಿ ಹೇಳಿದ್ದಾನೆ. ಎರಡನೆಯ ಆತ್ಮನನ್ನು ಕುರಿತು 18, 23,27 ವಾಕ್ಯಗಳಲ್ಲಿ (ಆಯತ್‌ಗಳಲ್ಲಿ) ಹೇಳಿದ್ದಾನೆ. ಜಿಬ್ರಯೇಲ್, ದೈವವಾಕ್‌ನ್ನು ಪ್ರವಕ್ತ ಮಹಮ್ಮದ್ ಅವರಿಗೆ (ಸಂ) ತಿಳಿಸಿ ನಿಮಗೆ ಜ್ಞಾನದೃಷ್ಠಿ ಪೂರ್ತಿಯಾಗಿ ಕೊಡಲಾಗಿದೆಯೆಂದು, ನಿಮ್ಮ ಅಜ್ಞಾನದ ತೆರೆಗಳು ತೊಲಗಿ ಹೋಗಿವೆಯೆಂದು ಹೇಳಿದಾಗ, ಆ ದೃಷ್ಠಿ ಏನೋ? ಆತನು ತೊಲಗಿಸಿದ ತೆರೆಗಳೇನೋ? ಇಂದಿನ ಮುಸ್ಲೀಮರಿಗಾಗಲಿ, ಉಳಿದ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ ತಿಳಿಯದೆ ಹೋಗಿವೆ. ದೇವರು ಆದಿಯಲ್ಲಿ ಹೇಳಿದ ಮೂರು ಆತ್ಮಗಳ ವಿವರ (ತ್ರೈತ ಸಿದ್ಧಾಂತ) ಏನೋ ತಿಳಿಯದ ಮತಗಳೂ, ಅದರಲ್ಲಿನ ಮನುಷ್ಯರೂ ಈ ದಿನ ತಯಾರಾಗಿದ್ದಾರೆ. ಕ್ರೈಸ್ತವರು ಟ್ರಿನಿಟೀ ಎಂದು ಇಂಗ್ಲೀಷ್‌ನಲ್ಲಿ, ತ್ರಿತ್ವವೆಂದು ಕನ್ನಡದಲ್ಲಿ ಹೇಳಿಕೊಳ್ಳುತ್ತಿದ್ದರೂ, ಅದು ತ್ರೈತಕ್ಕೆ ಸಂಬಂಧವಿಲ್ಲ. ಅದರಲ್ಲಿ ಮೂರು ಆತ್ಮಗಳ ವಿವರವಾಗಲಿ, ಮೂರು ಆತ್ಮಗಳ ವಿಷಯವಾಗಲೀ ಯಾವ ಮಾತ್ರ ಇಲ್ಲ. ಕುಮಾರನು, ತಂದೆ, ಪರಿಶುದ್ಧಾತ್ಮ ಎಂದು ಮೂರು ಹೆಸರುಗಳು ಇಟ್ಟು ಅವುಗಳನ್ನು ತ್ರಿತ್ವ ಎಂದು ಕ್ರೈಸ್ತವದಲ್ಲಿ ಎನ್ನುವುದು ನಡೆದಿದೆ. ತಂದೆ, ಪರಿಶುದ್ಧಾತ್ಮ ಇಬ್ಬರೂ ಒಂದೇ ಆಗುತ್ತಾರೆ. ಪರಿಶಿದ್ಧಾತ್ಮ ಎಂದರೂ ದೇವರೇ, ತಂದೆ ಎಂದರೂ

ದೇವರೇ. ಜೀವಾತ್ಮನನ್ನು ಕುಮಾರನು ಎನ್ನುವುದು ನಡೆದಿದೆ. ಅಂತಹದರಲ್ಲಿ ಜೀವಾತ್ಮ, ದೇವರು ಎನ್ನುವ ದಿತ್ವವೇ ಅದರಲ್ಲಿ ಇದೆಯಾಗಲಿ, ತ್ರಿತ್ವವಿಲ್ಲ. ಕುಮಾರನು, ತಂದೆ, ಪರಿಶುದ್ಧಾತ್ಮ ಅನ್ನುವ ಮಾತು ತ್ರಿತ್ವ ಅಲ್ಲ ದಿತ್ವವೇ ಎಂದು ತಿಳಿಯಬೇಕು.

ಬೈಬಲ್‌ನಲ್ಲಿಯೂ ಸಹ ಮೂರು ಆತ್ಮಗಳ ವಿವರವಿದೆ ಆದರೆ, ಅದು ಒಂದು ವಾಕ್ಯದಲ್ಲಿ ಇಲ್ಲ. ಕೆಲವು ವಾಕ್ಯಗಳ ಸಾರಾಂಶದಲ್ಲಿ ಸೇರಿದೆ. ಪ್ರತ್ಯೇಕಿಸಿ ಪ್ರತ್ಯೇಕವಾದ ವಾಕ್ಯಗಳಲ್ಲಿ ಖುರಾನ್‌ನಲ್ಲಿ, ಪ್ರತ್ಯೇಕವಾದ ಶ್ಲೋಕಗಳಲ್ಲಿ ಭಗವದ್ಗೀತೆಯಲ್ಲಿ ಹೇಳಿದರೂ ಮನುಷ್ಯರಿಗೆ ಅರ್ಥವಾಗದಿರುವಾಗ, ಕೆಲವು ವಾಕ್ಯಗಳ ಸಮ್ಮೇಳನದಲ್ಲಿ ಒಳಗೊಂಡಿರುವ ಮೂರು ಆತ್ಮಗಳ ವಿಷಯ ಕ್ರೈಸ್ತವರಿಗೆ ಹೇಗೆ ಅರ್ಥವಾಗಬಲ್ಲದು. ಆದ್ದರಿಂದ ಜೀವಾತ್ಮ, ಆತ್ಮ, ಪರಮಾತ್ಮವಾಗಿರುವ ತ್ರೈತ ಸಿದ್ಧಾಂತ ಅವರಿಗೂ ಸಹ ಅರ್ಥವಾಗಲಿಲ್ಲ. ಕ್ರೈಸ್ತವದಲ್ಲಿ ತ್ರಿತ್ವ ಎನ್ನುವ ಮಾತು ಇದ್ದರೂ ಅದು ತ್ರೈತ ಅಲ್ಲ, ತ್ರೈತ ಸಿದ್ಧಾಂತವೂ ಅಲ್ಲ. ಈ ವಿಧವಾಗಿ ಆದಿಯಲ್ಲಿ ದೇವರು ಹೇಳಿದ ತ್ರೈತ ಸಿದ್ಧಾಂತ ಈ ಕಾಲದಲ್ಲಿ ಎಲ್ಲಾ ಮೂಲ ಗ್ರಂಥಗಳಲ್ಲಿದ್ದರೂ, ಯಾವ ಮತದವರಿಗೂ ಅದನ್ನು ಕುರಿತು ತಿಳಿಯದು. ನಾವು ತ್ರೈತ ಸಿದ್ಧಾಂತವನ್ನು ಕುರಿತು ಹೇಳಿದಾಗ ಹಿಂದೂಗಳು ತ್ರೈತ ಸಿದ್ಧಾಂತ ಎನ್ನುವ ಮಾತನ್ನು ಕೇಳಿ, ಆ ಮಾತನ್ನು ತ್ರಿತ್ವವೆಂದುಕೊಂಡು ನಮ್ಮನ್ನು ಕ್ರೈಸ್ತವರಾಗಿ ವರ್ಣಿಸಿಕೊಂಡಿದ್ದಾರೆ. ಹಿಂದೂಗಳ ಮುಸುಗಿನೊಳಗಿರುವ ಕ್ರೈಸ್ತವರೆಂದು ನಮ್ಮನ್ನು ಕುರಿತು ಹಿಂದೂಗಳು ಅಂದುಕೊಳ್ಳುವುದು, ಮತ ದ್ವೇಷದಿಂದ ನಮ್ಮ ಭಕ್ತರ ಮೇಲೆ ದಾಳಿ ಮಾಡುವುದು ನಡೆದಿದೆ. ದೇವರ ಜ್ಞಾನ ಇಲ್ಲದಿರುವುದರಿಂದ ಹಿಂದೂಗಳೇ ತಮ್ಮ ಮತದವರನ್ನು ಗುರುತಿಸಲಾರದಷ್ಟು ಕುರುಡರಾಗಿದ್ದಾರೆ. ಇನ್ನು ಕ್ರೈಸ್ತವರು ತ್ರೈತಸಿದ್ಧಾಂತ ಎನ್ನುವ ಮಾತನ್ನು ಕೇಳುತ್ತಲೆ, ಹಿಂದೂಗಳು ತಮ್ಮ ಮತದೊಳಗೆ ನಮ್ಮನ್ನು ಎಳೆದುಕೊಳ್ಳುವುದಕ್ಕೆ ಈ ವಿಧವಾಗಿ ತ್ರೈತ ಎಂದು ಹೆಸರು ಇಟ್ಟುಕೊಂಡಿದ್ದಾರೆಂದು, ನಮ್ಮನ್ನು ನೋಡಿದರೆ ದೂರವಾಗಿ ಹೋಗುವರು. ನಮ್ಮ ಬೋಧನೆಗಳು ಕೇಳುವುದಾಗಲಿ,

ನಮ್ಮ ಗ್ರಂಥಗಳನ್ನು ಓದುವುದಾಗಲಿ ಮಾಡುವವರಲ್ಲ. ಹಿಂದೂಗಳು ದಾಳಿ ಮಾಡಿದಹಾಗೆ, ಕ್ರೈಸ್ತವರು ದಾಳಿ ಮಾಡಲಿಲ್ಲ. ಇನ್ನು ಮುಸ್ಲಿಮರ ವಿಷಯದೊಳಗೆ ಹೋದರೆ, ಅವರು ನಾವು ಹೇಳುವ ಬೋಧನೆಗಳನ್ನು ಶ್ರದ್ಧೆಯಿಂದ ಕೇಳುವರು. ಹೆಚ್ಚಾಗಿ ನಮ್ಮನ್ನು, ನಮ್ಮ ಜ್ಞಾನವನ್ನು ಗೌರವಿಸುತ್ತಾರೆ. ವಿಶ್ವವೆಲ್ಲದಕ್ಕೂ ಒಬ್ಬನೇ ದೇವರು ಎಂದು ನಾವು ಹೇಳುವ ಮಾತನ್ನು ಅದಕ್ಕೆ ಸಂಬಂಧಿಸಿದ ನಮ್ಮ ಜ್ಞಾನವನ್ನೂ ಕೇಳಿ ಎಷ್ಟೋ ಸಂತೋಷಿಸುತ್ತಿದ್ದಾರೆ.

ವಿಶ್ವವನ್ನು ಪ್ರಾರಂಭಿಸಿದಾಗ ದೇವರು ಮೂರು ಭಾಗಗಳಾಗಿ ಬೇರ್ಪಟ್ಟು, ತನ್ನ ಮೂರು ಭಾಗಗಳನ್ನು ತಿಳಿದುಕೊಂಡಾಗಲೆ ದೇವರನ್ನು ಸಂಪೂರ್ಣವಾಗಿ ತಿಳಿದಂತಾಗುತ್ತದೆಂದು ತಿಳಿಸಿದ್ದಾನೆ. ದೇವರು ಆ ವಿಧವಾಗಿ ತಿಳಿಸಿರುವುದೇ ತ್ರೈತ ಸಿದ್ಧಾಂತ. ತ್ರೈತ ಸಿದ್ಧಾಂತವನ್ನು ತಿಳಿಯಬೇಕೆಂದರೆ ಮೊದಲು ಅದ್ವೈತ, ದ್ವೈತ ವಿಧಾನಗಳನ್ನು ತಿಳಿಯಬೇಕು. ಅದ್ವೈತ, ದ್ವೈತಗಳೆಂದರೆ ಏನೋ ತಿಳಿದ ನಂತರ ತ್ರೈತವೆಂದರೆ ಏನೋ ಸುಲಭವಾಗಿ ತಿಳಿಯಬಲ್ಲದು. ಆದರೆ ಕೆಲವರಿಗೆ ಅದ್ವೈತವೇ ತಿಳಿಯದು. ಕೆಲವರಿಗೆ ದ್ವೈತ ತಮ್ಮ ಗ್ರಂಥದಲ್ಲಿ ಕಾಣಿಸುತ್ತಿದ್ದರೂ, ಅವರಿಗೆ ತೀಕ್ಷಣವಾದ ನೋಟವಿಲ್ಲದೆ ಅದೇನೊ ಅವರಿಗೆ ಕಾಣಿಸುತ್ತಿಲ್ಲ, ಅರ್ಥವಾಗುತ್ತಿಲ್ಲ. ತ್ರೈತ ಆದಿಯಿಂದ ಇದ್ದರೂ, ಐದು ಸಾವಿರ ವರ್ಷಗಳ ಮೊದಲೇ ದ್ವಾಪರಯುಗದ ಕೊನೆಯಲ್ಲಿ ಕೃಷ್ಣನು ಭಗವಂತನಾಗಿ ಭಗವದ್ಗೀತೆಯಲ್ಲಿ ಮುಖ್ಯವಾದ ಪುರುಷೋತ್ತಮಪ್ರಾಪ್ತಿಯೋಗ ವೆಂಬ ಅಧ್ಯಾಯದಲ್ಲಿ ತ್ರೈತವನ್ನು (ಮೂರು ಆತ್ಮಗಳನ್ನು) ಕುರಿತು ಹೇಳಿದ್ದರೂ, ಹಿಂದೂಗಳಿಗೆ ಅದೇನೆಂದು ಸಹ ತಿಳಿಯದು. ಈ ವಿಧವಾಗಿ ಒಟ್ಟು ಎಲ್ಲಾ ಮತಗಳನ್ನು ಅನುಸರಿಸುವವರಿಗೆ, ಎಲ್ಲಾ ವಿಧಗಳ ಮನುಷ್ಯರಿಗೂ ತ್ರೈತ ಸಿದ್ಧಾಂತ ತಿಳಿಯದೆ ಇರುವುದರಿಂದ, ಅದರ ಫಲಿತವಾದ ದೈವವೂ ಸಹ ತಿಳಿಯುತ್ತಿಲ್ಲ. ದೈವ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದರೂ, ತನ್ನನ್ನು (ದೈವವನ್ನು) ಸಂಪೂರ್ಣವಾಗಿ ತಿಳಿಯುವುದಕ್ಕೆ ಬೇಕಾದ ಜ್ಞಾನವನ್ನು ದೇವರೇ ತಿಳಿಸಿದ್ದಾನೆ. ಹಾಗೆ ತಿಳಿಸಿರುವ ಜ್ಞಾನವೇ ದೇವರು ಮನುಷ್ಯರಿಗೆ ಕೊಟ್ಟಿರುವ ಗ್ರಂಥಗಳ ರೂಪದಲ್ಲಿ ಇದೆ.

ದೇವರು ಮನುಷ್ಯರಿಗೆ ಜ್ಞಾನವನ್ನು ಯಾವ ಗ್ರಂಥರೂಪದಲ್ಲಿ ತಿಳಿಸಿದ್ದಾನೆ ಎಂದು ಪ್ರಶ್ನಿಸಿಕೊಂಡು ನೋಡಿದರೆ, ಇಸ್ಲಾಮ್‌ನಲ್ಲಿ ಖುರಾನ್ ಗ್ರಂಥ ರೂಪವಾಗಿ, ಕ್ರೈಸ್ತವರಲ್ಲಿ ಬೈಬಲ್ ಗ್ರಂಥ ರೂಪದಲ್ಲೂ, ಅವರಿಗೆ ಜ್ಞಾನವನ್ನು ತಿಳಿಸಿದ್ದಾನೆಂದು ಆಯಾ ಮತದವರು ಧೈರ್ಯವಾಗಿ ಹೇಳುತ್ತಿದ್ದಾರೆ. ಒಂದು ಹಿಂದೂ ಮತದಲ್ಲಿಯೇ ತಮ್ಮ ಗ್ರಂಥ ಇದು ಎಂದು ಹೇಳದೆ ಕೆಲವರು ವೇದಗಳೆಂದು, ಕೆಲವರು ಭಗವದ್ಗೀತೆ ಎಂದು ಹೇಳುತ್ತಿದ್ದಾರೆ. ಇಸ್ಲಾಮ್‌ದಲ್ಲೂ, ಕ್ರೈಸ್ತವದಲ್ಲೂ ಬೋಧಕರ ವ್ಯವಸ್ಥೆ ಮಾತ್ರವಿದೆ. ಒಂದು ಹಿಂದೂ ಮತದಲ್ಲಿ ಮಾತ್ರವೇ ಗುರುಗಳ ವ್ಯವಸ್ಥೆ, ಬೋಧಕರ ವ್ಯವಸ್ಥೆ ಎರಡೂ ಇವೆ. ಹಿಂದೂ ಮತದಲ್ಲಿ ಗುರುಗಳು ಎನ್ನುವವರು ಇರುವುದರಿಂದ, ಅವರು ತಮ್ಮ ಆಧಿಪತ್ಯವನ್ನು ತೋರಿಸಿಕೊಳ್ಳುವುದಕ್ಕೆ ದೇವರು ಹೇಳಿದ ಜ್ಞಾನವನ್ನು ಬಿಟ್ಟು, ತಮ್ಮ ತಮ್ಮ ಸ್ವಂತ ಜ್ಞಾನಗಳನ್ನು ಪ್ರಚಾರ ಮಾಡಿಕೊಂಡಿದ್ದಾರೆ. ಆ ನೇತೃತ್ವದಲ್ಲಿ ಬಹಳ ಮಂದಿ ವೇದಗಳನ್ನು ಪ್ರಮಾಣ ಗ್ರಂಥಗಳಾಗಿ ಹೇಳಿಕೊಳ್ಳುವುದು ನಡೆದಿದೆ. ಕೇವಲ ಕೆಲವರು ಮಾತ್ರ ದೇವರು ಹೇಳಿದ್ದನ್ನು ಮಾತ್ರ ಬೋಧಿಸುತ್ತೇವೆಂದು ಬೋಧಕನಾಗಿ ಇರುವವರು ಮಾತ್ರ, ಭಗವದ್ಗೀತೆ ಯೊಂದರ ಹೆಸರನ್ನು ಹೇಳುವುದು ನಡೆದಿದೆ. ತಾವು ಗುರುಗಳಾಗಿ ಚಲಾವಣೆ ಆಗಬೇಕೆಂದು ಕೊಂಡವರೆಲ್ಲರೂ, ವೇದಗಳನ್ನು ಅಡ್ಡ ಇಟ್ಟುಕೊಂಡು ತಮ್ಮ ತಮ್ಮ ಸಾಮ್ರಾಜ್ಯಗಳು ಬೇರೆ ಎನ್ನುವಂತೆ ಒಬ್ಬೊಬ್ಬರು ಒಂದೊಂದು ಪೀಠವೆಂದು, ಮಠವೆಂದು, ಮತವೆಂದು, ಸಾಂಪ್ರದಾಯವೆಂದು ಅನೇಕ ವಿಧಗಳ ವರ್ಗಗಳನ್ನು ಹಿಂದೂ ಮತದಲ್ಲಿ ತಯಾರಿಸಿಕೊಂಡಿದ್ದಾರೆ. ಇಂತಹವರಿಗೆಲ್ಲರಿಗೂ ತಕ್ಕ ವಿಧವಾಗಿ ವೇದಗಳಲ್ಲಿ ಬರೆದಿಟ್ಟಿರುವುದರಿಂದ, ಅವರೆಲ್ಲರೂ ವೇದಗಳೇ ಪ್ರಮಾಣ ಗ್ರಂಥಗಳೆಂದು ಹೇಳುತ್ತಿರುವರು.

ಹಾಗಲ್ಲದೆ ಭಗವದ್ಗೀತೆಯನ್ನು ಕುರಿತು ಹೇಳಿದರೆ, ದೇವರು ಹೇಳಿರುವುದನ್ನೇ ಒಬ್ಬ ಬೋಧಕನಾಗಿ ಹೇಳಬೇಕಾಗುತ್ತದೆ. ಅಸಲಾದ ದೇವರನ್ನೇ ಒಪ್ಪಿಕೊಳ್ಳಬೇಕಾಗುತ್ತದೆ, ಅತನನ್ನು ಕುರಿತೇ ಹೇಳಬೇಕಾಗಿ ಬರುತ್ತದೆ. ತನ್ನದು

ಪ್ರತ್ಯೇಕವಾದ ಪಾಠವೆಂದು, ಹಾಗೇ ಪೀಠವೆಂದೂ ಹೇಳಿಕೊಳ್ಳುವುದಕ್ಕೆ ಆಗುವುದಿಲ್ಲ. ಆದ್ದರಿಂದ ಹಿಂದೂಮತದಲ್ಲಿ ಬಹಳ ಜನ ಸ್ವಾಮೀಜಿಯರು ತಮ್ಮ ತಮ್ಮ ಆಚಾರ ವಿಚಾರ ಬೇರೆಬೇರೆಯಾಗಿ ಇಟ್ಟುಕೊಂಡು, ತಾವು ಹೇಳುವ ಪಾಠ ಇಂತಹ ಪೀಠದ್ದೆಂದು ಹೇಳುತ್ತಿರುವರು. ಆದ್ದರಿಂದ ಒಂದೊಂದು ಪೀಠದವರು ಒಬ್ಬೊಬ್ಬ ದೇವರನ್ನು ಕುರಿತಿರುವ ಪಾಠವನ್ನೇ (ಬೋಧೆಯನ್ನೇ) ಹೇಳುತ್ತಿರುವರು. ಪೀಠಗಳು ಬೇರೆಬೇರೆಯಾಗಿ ಇರುವುದರಿಂದ, ಅವರು ಬೇರೆಬೇರೆ ದೇವತೆಗಳನ್ನು ದೊಡ್ಡದಾಗಿ ಹೇಳಿಕೊಳ್ಳುವುದು, ಆ ದೇವತೆಗಳಿಗೆ ಸಂಬಂಧಿಸಿದ ಜ್ಞಾನವನ್ನು, ಆ ದೇವತೆಗಳಿಗೆ ಸಂಬಂಧಿಸಿದ ಆರಾಧನೆಯನ್ನು ಹೇಳಿಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ಪ್ರಜೆಗಳು ನಿಜವಾದ ಸೃಷ್ಠಿಕರ್ತನನ್ನು, ಎಲ್ಲರಿಗೂ ಅಧಿಪತಿಯಾದ ದೇವರನ್ನು ಮರೆತುಹೋಗಿ, ದೇವರ ಸ್ಥಾನದಲ್ಲಿ ಒಂದೊಂದು ಸಾಂಪ್ರದಾಯದವರು ಒಂದೊಂದು ದೇವರನ್ನು ಇಟ್ಟುಕೊಳ್ಳುವುದು, ಹೇಳಿಕೊಳ್ಳುವುದು ನಡೆಯುತ್ತಿದೆ. ಹೀಗೆ ಇಂದೂಮತದಲ್ಲಿ ಅನೇಕ ಸಾಂಪ್ರದಾಯಗಳು, ಅನೇಕ ದೇವರುಗಳು, ಅನೇಕ ಆರಾಧನೆಗಳು ಬಂದಿವೆ. ಒಟ್ನಲ್ಲಿ ಇವೆಲ್ಲವೂ ದೇವರು ಹೇಳಿದ ಜ್ಞಾನಕ್ಕೆ ವಿರುದ್ಧವಾಗಿ ಇವೆ. ಭಗವದ್ಗೀತೆಗೂ, ದೇವರ ಧರ್ಮಗಳಿಗೂ ವಿರುದ್ಧವಾದ ವಿಧಾನವಿದ್ದರೂ, ನನ್ನದು ಸರಿಯಾದ ಮಾರ್ಗವೆಂದು ಕೆಲವರೂ, ಯಾರದೂ ಅಲ್ಲ ನನ್ನದೇ ಸಕ್ರಮವಾದ ಮಾರ್ಗವೆಂದು ಮತ್ತೆ ಕೆಲವರು ವಾದಿಸುತ್ತಿದ್ದಾರೆ. ಒಬ್ಬೊಬ್ಬ ಗುರುವನ್ನೂ ಅಥವಾ ಪೀಠಾಧಿಪತಿಯನ್ನು ಆಶ್ರಯಿಸುವವರು ಕೆಲವರಿದ್ದರೆ, ಅವರೆಲ್ಲಾ ತಮ್ಮ ಸಾಂಪ್ರದಾಯ, ತಮ್ಮ ಸಾಧನೆ ಬೇರೆಯೆಂದು ಹೇಳಿಕೊಳ್ಳುವುದರಿಂದ, ಅವರೆಲ್ಲರೂ ಆ ಪೀಠವೊಂದರ ಸಾಮ್ರಾಜ್ಯಕ್ಕೆ ಸಂಬಂಧಿಸಿದವರಾಗಿ ಕಾಣಿಸುತ್ತಿರುವರು. ಈ ವಿಧವಾಗಿ ಮನುಷ್ಯರಲ್ಲಿ ಮತಗಳು, ಮತಗಳಲ್ಲಿ ವರ್ಗಗಳು, ವರ್ಗಗಳಲ್ಲಿ ಬೇಧಗಳು ಅನೇಕವಾಗಿ ಏರ್ಪಟ್ಟು, ಕೊನೆಗೆ ಸೃಷ್ಟ್ಯಾದಿಯಲ್ಲಿ ದೇವರು ಹೇಳಿದ ಜ್ಞಾನವೇ ತಿಳಿಯದೆ ಹೋಗಿದೆ. ಅದಕ್ಕೆ ಪ್ರಮಾಣವಾಗಿ ಒಂದು ಸಂಘಟನೆಯನ್ನು ಹೇಳುತ್ತೇನೆ ಕೇಳಿ. ಸುಮಾರು ಐದು ವರ್ಷಗಳ ಕೆಳಗೆ ನಾವು ದೇವರ ಜ್ಞಾನವನ್ನು ಪ್ರಚಾರ ಮಾಡುವುದಕ್ಕೋಸ್ಕರ

గోడేగళ మేలె సృష్టికర్త ఎన్నువ పదవన్ను బరెదరె, అదన్ను నోడిద హిందూరక్షణ సంఘగళెందు హెసరిట్టుకొండిరువ హిందూగళు సృష్టికర్త ఎన్నువ పద క్రైస్తవరదు నమ్మదల్లవెందు తిళిదు నమ్మన్ను నిందిసువుదు నడెదిదె. యావ మతవూ ఇల్లద ద్వాపరయుగదల్లి భగవంతను తన్న సృష్టియన్ను కురితు హేళి, తానే సృష్టికర్తనెందు హేళిరువాగ, సృష్టికర్త ఎన్నువ పద నమ్మదల్ల, క్రైస్తరదు ఎన్నువుదక్కె కేవల ఎరడు సావిర వర్షగళ కెళగె హుట్టిద క్రైస్తవరిగె సృష్టికర్తనన్ను హిందూగళు లీజిగె కొట్టిద్దారా ఎందు నావు కేళుత్తిద్దేవె. యావ మాత్ర జ్ఞానవిల్లద హిందుగళూ, అవరన్ను ప్రోత్సహిసువ గురుగళూ హిందూమతదల్లి ఇరువుదరింద, నావు ఇందూ ధర్మగళన్ను బోధిసుత్తా అదరల్లిన భాగవాగి భగవద్గీతెయల్లి పురుషోత్తమప్రాప్తి యోగదల్లిన త్రైత సిద్ధాంతవన్ను తిళిసిదరె, త్రైత నమ్మదల్ల క్రైస్తవరదెందు నమ్మ భక్తరమేలె హిందూ రక్షకరెన్నువవరు ఎష్టో సారి దాళి మాడిద్దారె. మూరు తింగళ కెళగె హిందూ ధర్మరక్షకరెన్నువవరు నమ్మ ప్రెస్ మేలె దాళిమాడి అల్లిరువవరన్ను హొడెయువుదు నడెదిదె. అదక్కె కారణ నావు త్రైత సిద్ధాంతవన్ను కురితు హేళువుదే. ఈ విధవాగి పూర్వ దైవజ్ఞానదల్లి మొదలనె స్థానదల్లిరువ హిందూగళు (ఇందూగళు) ఈదిన కొనెయ స్థానదొళగె బందిద్దారె. దైవ హేళిద భగవద్గీతెయన్ను నావు హిందూ గళిగె బోధిసువుదు కెలవరు ప్రత్యేక పీఠవిరువ స్వామీజిగళిగె సరిహోగుత్తిల్ల. ఆద్దరింద అవరు రాజకీయవన్ను మాడుత్తా అసలాద జ్ఞానవన్ను మేలె బరబారదెందు ప్రయత్న మాడుత్తిరువరు. ఆదరూ దేవర జ్ఞానద ముందె యార యుక్తి కుయుక్తిగళు నిల్లువుదిల్ల.

హిందూమతదల్లి ఎందిగూ ఇల్లద విభిన్న మఠగళు, పీఠగళు ఎంబ హెసరింద, కలియుగ ప్రారంభవాద నంతర ఎష్టో బందివె.

ದ್ವಾಪರ ಯುಗದ ಕೊನೆಯಲ್ಲಿ ದೇವರು ತನ್ನ ಜ್ಞಾನವನ್ನು ಭಗವದ್ಗೀತೆ ರೂಪದಲ್ಲಿ ಹೇಳುವುದು ನಡೆದಿದೆ. ಆದರೂ ಕಲಿಯುಗ ಬಂದ ನಂತರ ಹಿಂದೂ ಮತದಲ್ಲಿ ಪೂರ್ತಿ ಅಜ್ಞಾನ ಸೇರಿಕೊಳ್ಳುವುದರಿಂದ, ಅದೇ ರೀತಿಯಲ್ಲಿ ಇತರ ಮತಗಳು ತಯಾರಾಗಿವೆ. ಒಂದು ಕಾಲದಲ್ಲಿ ಏಕೈಕ ಮತವಾಗಿರುವ ಇಂದೂ (ಹಿಂದೂ) ಮತ ಈದಿನ ಕೆಲವು ಮತಗಳ ಪಕ್ಕದಲ್ಲಿ ತಾನೊಂದು ಮತವಾಗಿ ನಿಂತಿದೆ. ಹೀಗೆ ಇದ್ದರೆ ಹಿಂದೂ ಮತವನ್ನು ರಕ್ಷಿಸುತ್ತೇವೆನ್ನುವವರೆ ಅದನ್ನು ಪೂರ್ತಿಯಾಗಿ ಭಕ್ಷಿಸಬಲ್ಲರು. ತಮಗೆ ತಿಳಿಯದೇನೆ ತಮ್ಮ ಮತಕ್ಕೆ ಕೀಡನ್ನು ಮಾಡುತ್ತಿದ್ದೇವೆಂದು, ತಾನು ಮತ ರಕ್ಷಣೆಗೋಸ್ಕರ ಅನುಸರಿಸುವ ಪದ್ಧತಿಯೇ, ಮತವನ್ನು ಪೂರ್ತಿಯಾಗಿ ಇಲ್ಲದೆ ಮಾಡಬಲ್ಲದೆಂದು, ಮೊದಲನೆಯದಾಗಿ ಹಿಂದೂಗಳು ಗ್ರಹಿಸಬೇಕು. ಇತರರನ್ನು ಹೆದರಿಸಿ, ದಾಳಿ ಮಾಡಿ ಮತವನ್ನು ಯಾರೂ ರಕ್ಷಿಸಿಕೊಳ್ಳಲಾರರು. ದೈವಜ್ಞಾನವನ್ನು ಕುರಿತು ಹೇಳಿ ಯಾರನ್ನಾದರೂ ದೇವರಕಡೆಗೆ ಬದಲಾಯಿಸಬಹುದು. ಆದಿಯಲ್ಲಿ ಹುಟ್ಟಿರುವುದು ಇಂದೂಮತ ಅಲ್ಲ, ಇಂದೂ ಧರ್ಮ. ಇಂದೂ ಧರ್ಮ ಈ ದಿನ ಹಿಂದೂ ಮತವಾಗಿ ಬದಲಾಗಿದೆ. ಇಂದೂ ಧರ್ಮ ಎಷ್ಟು ದೊಡ್ಡದೋ, ಅದರಲ್ಲಿನ ಔನ್ನತ್ಯ ಎಂತಹುದೋ ಮನುಷ್ಯರು ತಿಳಿದುಕೊಂಡರೆ ಎಲ್ಲರೂ ತಾವು ಇಂದೂಗಳೆಂದು ಹೇಳಿಕೊಳ್ಳಬಲ್ಲರು.

ದೇವರ ಜ್ಞಾನವನ್ನು ತಿಳಿಯುವವನು ಯಾರಾದರೂ, ಅವನನ್ನು ಜ್ಞಾನಿ ಎಂದು ಅನ್ನುತ್ತೇವೆ. ಜ್ಞಾನಿಯನ್ನು ಮತ್ತೊಂದು ಹೆಸರಿಂದ ಕರೆಯಬಹುದು, ಅದೇ ಇಂದೂ. ಇಂದೂ ಎಂದರೆ ದೈವಜ್ಞಾನವನ್ನು ತಿಳಿಯುವವನು ಅಥವಾ ತಿಳಿದವನೆಂದು ಅರ್ಥ. ಜ್ಞಾನ ಲೋಕದಲ್ಲಿ ಎರಡು ವಿಧಗಳು ಇವೆ. ಅದರಲ್ಲಿ ಒಂದು ಪ್ರಪಂಚ ಜ್ಞಾನ, ಎರಡನೆಯದು ಪರಮಾತ್ಮ ಜ್ಞಾನ. ಪ್ರಪಂಚ ಜ್ಞಾನಕ್ಕಿಂತಲೂ ಪರಮಾತ್ಮ ಜ್ಞಾನ ಎಲ್ಲಾ ವಿಧಗಳಲ್ಲಿ ದೊಡ್ಡದೇ. ದೊಡ್ಡದಾದ ಪರಮಾತ್ಮ ಜ್ಞಾನವನ್ನು ಪ್ರಪಂಚ ಜ್ಞಾನವಾಗಿ ಯಾರೂ ಲೆಕ್ಕಿಸದಿರುವುದಕ್ಕೆ, ಪರಮಾತ್ಮ ಜ್ಞಾನಕ್ಕೆ ಪ್ರತ್ಯೇಕವಾದ ಪದವನ್ನು ಬಳಸಿದ್ದಾರೆ. ಅದರ ಗುರುತಾದ ಪದವನ್ನೇ 'ಇಂದೂ' ಎನ್ನುತ್ತಿದ್ದೇವೆ. ಪರಮಾತ್ಮ ಜ್ಞಾನವನ್ನು (ದೈವಜ್ಞಾನವನ್ನು)

ತಿಳಿದವನನ್ನು ಇಂದೂ ಎನ್ನುತ್ತಿದ್ದೇವೆ. ಜ್ಞಾನಿ ಎಂದರೆ ಯಾವ ಜ್ಞಾನಿ ಎಂದು ಗಡಿಬಿಡಿ ಆಗದಂತಿರುವುದಕ್ಕೆ ದೈವಜ್ಞಾನವನ್ನು ಇಂದೂ ಜ್ಞಾನ ಎಂದೂ, ಪ್ರಪಂಚ ಜ್ಞಾನವನ್ನು ಇಂಗಿತ ಜ್ಞಾನವೆಂದು ಗುರುತಿಸುವ ಹೆಸರುಗಳನ್ನು ಪೂರ್ವದಲ್ಲಿ ಹಿರಿಯರು ಇಡುವುದು ನಡೆದಿದೆ. ಇಂಗಿತ ಜ್ಞಾನ ಇಲ್ಲದವನು ಅಂದರೆ ಪ್ರಪಂಚ ಜ್ಞಾನ ಇಲ್ಲದವನೆಂದು ಅರ್ಥ. ಇಂದೂ ಜ್ಞಾನ ಇಲ್ಲದವನೆಂದರೆ ದೈವಜ್ಞಾನ ಇಲ್ಲದವನೆಂದು ಅರ್ಥ. ಈ ದಿನ ಇಂಗಿತ ಜ್ಞಾನ ಎಲ್ಲರಿಗೂ ಇದೆ. ಆದರೆ ಇಂದೂ ಜ್ಞಾನ ಯಾರಿಗೂ ಇಲ್ಲದೆ ಹೋಗಿದೆ. ಪ್ರಪಂಚ ಜ್ಞಾನ, ಪರಮಾತ್ಮ ಜ್ಞಾನ ಎಲ್ಲ ಮತದವರಿಗು ಇರಬೇಕಾಗಿರುವುದೇ ಅಲ್ಲವೆ! ಆದ್ದರಿಂದ ಪ್ರತಿ ಒಂದು ಮತದಲ್ಲಿಯೂ ಇಂಗಿತ ಜ್ಞಾನವಿರುವವರು ಇದ್ದಾರೆ. ಹಾಗೇ ಇಂದೂ ಜ್ಞಾನವಿರುವವರು ಇದ್ದಾರೆ. ಇಂದೂ ಎನ್ನುವ ಪದ, ಇಂಗಿತ ಎನ್ನುವ ಪದ ಒಂದು ಮತಕ್ಕೆ ಸಂಬಂಧಿಸಿರುವವೇ ಅಲ್ಲದೇ, ಎಲ್ಲಾ ಮತಗಳಿಗೂ ಸಂಬಂಧಿಸಿರುವವೆಂದು ತಿಳಿಯಬೇಕು. ಇಂದೂ ಜ್ಞಾನ (ದೈವಜ್ಞಾನ) ಇರುವವನನ್ನು ಇಂದೂ ಎನ್ನುತ್ತೇವೆ. ಹಾಗೇ ಇಂಗಿತ ಜ್ಞಾನ ಇರುವವನನ್ನು "ಇಂಗಿತನು" ಎಂದು ಅನ್ನುತ್ತೇವೆ. ಪ್ರಪಂಚದಲ್ಲಿ ಎಲ್ಲಾ ಮತಗಳಲ್ಲಿಯೂ ಇಂಗಿತ ಜ್ಞಾನ ಇಲ್ಲದವರು ಕೆಲವು ಜನರು ಮಾತ್ರವೇ ಇದ್ದರೂ, ಇಂದೂ ಜ್ಞಾನ ಇಲ್ಲದವರು ಹೆಚ್ಚಾಗಿ ಇದ್ದಾರೆ. ಈದಿನ ಎಲ್ಲಾ ಮತಗಳಲ್ಲಿಯೂ ಇಂದೂಗಳು ಇಲ್ಲದೇ ಹೋಗಿದ್ದಾರೆ. ನಾನು ದೈವಜ್ಞಾನ ಇರುವವನೆಂದು ಯಾರಾದರೂ ಹೇಳಿಕೊಂಡರೂ, ಅವರಲ್ಲಿ ಪೂರ್ತಿಯಾಗಿ ದೈವಜ್ಞಾನ ಇಲ್ಲದೇ ಹೋಗಿ, ಮಾಯೆಯಿಂದ ನಾನು ಜ್ಞಾನಿಯೆಂದು ಭ್ರಮೆಪಡುತ್ತಿದ್ದಾನೆ. ಈ ಕಾಲದಲ್ಲಿ ಎಷ್ಟು ದೊಡ್ಡ ಜ್ಞಾನಿ ಆದರೂ, ಆತನಲ್ಲಿ ಪೂರ್ತಿ ಇಂದೂತ್ವ (ದೈವಶಕ್ತಿ) ಇಲ್ಲದೆ ಹೋಗಿ, ಸ್ವಲ್ಪ ಅಜ್ಞಾನ (ತಿಳಿಯದ ತನ) ಆವರಿಸಿಕೊಂಡಿದೆಯೆಂದು ಹೇಳಬಹುದು. ಸಾಧಾರಣ ಮನುಷ್ಯರಲ್ಲಿ ಅಲ್ಲದೆ ದೊಡ್ಡ ಜ್ಞಾನಿಗಳೆಂದುಕೊಳ್ಳುವವರಲ್ಲಿ ಅಜ್ಞಾನ ಹೇಗೆ ಅಡಗಿಕೊಂಡಿ ದೆಯೋ, ಅವರು ಅದನ್ನು ಹೇಗೆ ಗುರುತಿಸದೆ ಹೋಗುತ್ತಿದ್ದಾರೋ, ಒಂದು ಯಥಾರ್ಥ(ನೈಜ) ಸಂಘಟನೆಯನ್ನು ವಿವರಿಸಿಕೊಳ್ಳೋಣ.

ಇಲ್ಲಿ ಹೇಳುವ ವಿಷಯ ಇತರರನ್ನು ಕಡಿಮೆಮಾಡಿ ಹೇಳುವುದಕ್ಕಾಗಲಿ, ಹೀಯಾಳಿಸುವುದಕ್ಕಾಗಲಿ ಹೇಳುವಂತದ್ದಲ್ಲ. ಎಲ್ಲರೂ ಸತ್ಯವನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಮಾತ್ರವೇ ಈ ಯಥಾರ್ಥ ಸಂಘಟನೆಯನ್ನು ಇಲ್ಲಿ ಪ್ರಸ್ತಾಪಿಸುವುದು ನಡೆದಿದೆ. ಇಸ್ಲಾಮ್ ಮತದಲ್ಲಿ ನನಗೆ ಪರಿಚಯವಿರುವ ವ್ಯಕ್ತಿಗಳು ಇಬ್ಬರು ಇದ್ದಾರೆ. ವಾಸ್ತವವಾಗಿ ಹೇಳಿದರೆ ಅವರು ಕಾಣಿಸುವುದಕ್ಕೆ ಸಾಧಾರಣ ಮನುಷ್ಯರೇ, ಆದರೂ ದೊಡ್ಡ ಮೇಧಾವಿಗಳೆಂದು ಹೇಳಬಹುದು. ಅವರು ಒಂದು ಖುರಾನ್ ಗ್ರಂಥವನ್ನೇ ಅಲ್ಲದೆ, ಬೈಬಲ್, ಭಗವದ್ಗೀತೆ, ಉಪನಿಷತ್, ವೇದಗಳನ್ನು ಪೂರ್ತಿಯಾಗಿ ತಲೆಗೇರಿಸಿಕೊಂಡು ಯಾವ ಗ್ರಂಥದಲ್ಲಿನ ವಿಷಯವನ್ನಾದರೂ, ವಾಕ್ಯವನ್ನಾದರೂ ಏಕಧಾಟಿಯಾಗಿ ಹೇಳುವ ಜ್ಞಾಪಕಶಕ್ತಿ ಇರುವವರು. ಇಲ್ಲಿ ನಾನು ಯಾರನ್ನು ಹೊಗಳುತ್ತಿಲ್ಲ, ಇರುವ ಸತ್ಯವನ್ನು ಹೇಳುತ್ತಿದ್ದೇನೆ. ಅವರು ಇಸ್ಲಾಮಿಕ್ ಪರಿಶೋಧನಾ ಕೇಂದ್ರವನ್ನು ಹೈದರಾಬಾದ್‌ನಲ್ಲಿ ಸ್ಥಾಪಿಸಿ ತಮ್ಮ ಪರಿಶೋಧನೆಗಳಿಂದ ತಿಳಿದ ಎಲ್ಲಾ ವಿಧಗಳ ಜ್ಞಾನವನ್ನೂ, ಎಷ್ಟೋ ಉಪನ್ಯಾಸರೂಪಗಳಿಂದ ಹೊರಗೆ ಹೇಳುತ್ತಿದ್ದಾರೆ. ನಮಗೆ ತಿಳಿದಮಟ್ಟಿಗೆ ಅವರು ದೈವ ಸೇವಕರು. ಯೂನಿವರ್ಸಲ್ ಇಸ್ಲಾಮಿಕ್ ರೀಸರ್ಚ್ ಸೆಂಟರ್ (U.I.R.C) ಎನ್ನುವ ಹೆಸರಿಂದ ಖುರಾನ್, ಬೈಬಲ್, ಭಗವದ್ಗೀತೆ, ವೇದಗಳ ಮೇಲೆ ಎಷ್ಟೋ ಪರಿಶೋಧನೆ ಮಾಡಿ, ಅವರಿಗೆ ತಿಳಿದ ಫಲಿತಗಳನ್ನು ಇತರರಿಗೆ ತಿಳಿಸುವುದು ನಡೆಯುತ್ತಿದೆ. ಆ ಸಂಸ್ಥೆಗೆ ಪ್ರೆಸಿಡೆಂಟ್ ಆದ ಷಫೀ ಅವರು, ವೈಸ್ ಪ್ರೆಸಿಡೆಂಟ್ ಆದ ಸಿರಾಜ್ ರಹಿಮಾನ್ ಅವರು, ಸೆಕ್ರೆಟರೀ ಆದ ಸಯ್ಯದ್ ಅಹಮ್ಮದ್ ಅವರು ನನಗೆ ಸುಪರಿಚಿತರೇ. ಇಲ್ಲಿಯವರೆಗು ಅವರು ಹೇಳುತ್ತಿರುವ ವಿಷಯಗಳನ್ನು ನಾನು ಕೇಳುತ್ತಾ ಬಂದಿದ್ದೇನಾಗಲಿ, ನಾನು ಯಾವುದು ಅವರಿಗೆ ಹೇಳಲಿಲ್ಲ.

U.I.R.C ಅಧ್ಯಕ್ಷರು ಆದ ಷಫೀ ಅವರಿಗೆ ನನ್ನೊಂದಿಗೆ ಪರಿಚಯವಿದೆ. ನಾನು ಪ್ರಬೋಧ ಸೇವಾಸಮಿತಿ ಮತ್ತು ಇಂದೂ ಜ್ಞಾನವೇದಿಕೆ ಎನ್ನುವ ಸಂಸ್ಥೆಗಳನ್ನು ಸ್ಥಾಪಿಸಿದ ವ್ಯಕ್ತಿಯಾಗಿ ಷಫೀ ಅವರಿಗೆ ಗೊತ್ತು. ಆದರೆ

ವಿಶಾಖಪಟ್ಟಣದಲ್ಲಿ ಗುರುದ್ವಾರಾ ಜಂಕ್ಷನ್‌ಗೆ ಹತ್ತಿರವಾಗಿ, ಅಕ್ಕಯಪಾಳ್ಯದಲ್ಲಿ ಬೈಬಲ್ ಓಪೆನ್ ಯೂನಿವರ್ಸಿಟೀ ಆಫ್ ಇಂಡಿಯಾ B.O.U.I ಎನ್ನುವ ಸಂಸ್ಥೆ ಸಂಸ್ಥಾಪಕರಾದ ಪಿ.ಡಿ ಸುಂದರರಾವು ಅವರಿಗೆ ನಾನು ಅಪರಿಚಿತ ವ್ಯಕ್ತಿಯೇ ಆದರೂ, ನಾನು ಅವರ ಹತ್ತಿರಕ್ಕೆ ಹೋಗಿದ್ದೇನೆ. ಅವರೊಂದಿಗೆ ಮಾತನಾಡಿದ್ದೇನೆ, ದೇವರ ಸೇವೆಗೆ ವಿನಿಯೋಗಿಸೆಂದು ಸಾವಿರ ರೂಪಾಯಿ ನೋಟನ್ನು ಸಹ ಅವರಿಗೆ ಕೊಟ್ಟು ಬಂದಿದ್ದೇನೆ. ಅತನನ್ನು ಕುರಿತು ಹೇಳಿದರೆ ಆತನು, ಆತನ ಕುಮಾರ ಪ್ರಸನ್ನ ಬಾಬು ದೊಡ್ಡ ವಕ್ತರು. ಧಾರಾಳವಾಗಿ ಮಾತನಾಡುವ ಶಕ್ತಿಯುಕ್ತಿ ಇರುವವರು. ಅವರ ಪರಿಶೋಧನೆಯಲ್ಲಿನ ವಿಷಯಗಳನ್ನು ಭಯವಿಲ್ಲದೆ ನಿರ್ಭಯವಾಗಿ ಸಾರುತ್ತಿದ್ದಾರೆ. ಬೈಬಲ್‌ನ್ನು ಕುರಿತೇ ಅವರು ಹೇಳುತ್ತಿದ್ದಾರೆ ಹೊರತು, ಇತರ ಗ್ರಂಥಗಳನ್ನು ಕುರಿತು ಅವರ ಪರಿಶೋಧನೆ ಇಲ್ಲ. ಅವರು ಹೇಳುವ ಬೋಧನೆಗಳು ಕ್ರೈಸ್ತವರಲ್ಲಿ ಸ್ವಲ್ಪ ವಿಭಿನ್ನವಾಗಿ ಕಾಣಿಸುತ್ತಿರುತ್ತದೆ. ಎಲ್ಲರೂ ಎಲ್ಲರಿಗೂ ಒಪ್ಪಿಗೆ ಆಗಬೇಕೆನ್ನುವ ನಿಯಮವೇನೂ ಇಲ್ಲ ಆದರೆ, ಅವರು ಹೇಳುವ ವಿಷಯಗಳಲ್ಲಿ ಸತ್ಯಾಸತ್ಯಗಳನ್ನು ಪಕ್ಕಕ್ಕಿಟ್ಟರೆ ಅವರು ಹೇಳುವ ವಿಧಾನವಾಗಲಿ, ಮಾಡುವ ಸೇವೆಯಾಗಲಿ ದೊಡ್ಡದೇಯೆಂದು ಹೇಳಬಹುದು. ಎಂತಹವರಲ್ಲಾದರೂ ಸ್ವಲ್ಪವಾದರೂ ಅಜ್ಞಾನ ಅಡಗಿರುತ್ತದೆಂದು ನಾವು ಮೊದಲಿಂದಲೇ ಹೇಳಿದ್ದೇವಲ್ಲವೆ! ಅದರ ಪ್ರಕಾರ ಅವರ ಜ್ಞಾನ ಅವರಿಗೆ ದೊಡ್ಡ ಜ್ಞಾನದಹಾಗೇ ಕಾಣಿಸುತ್ತಿದ್ದರೂ, ಅದರಲ್ಲಿ ಅಜ್ಞಾನ ಒಳಗೊಂಡಿದ್ದರೇ ಅದು ಶಾಸ್ತ್ರಬದ್ಧತೆಗೆ ನಿಲ್ಲುವುದಿಲ್ಲ. ದೇವರ ಜ್ಞಾನಕ್ಕೂ ಸಹ ಶಾಸ್ತ್ರೀಯತೆ ಇದೆಯೆಂದು, ಅದನ್ನು ಸ್ವತಃವಾಗಿ ದೇವರೇ ಹೇಳಿದ್ದಾನೆಂದು, ತಿಳಿಯದೆ ಇರುವಾಗ ಯಾರಾದರೂ ತಾನು ಬೋಧಿಸುವ ಬೋಧನೆಗಳಲ್ಲಿ, ತಾನು ಕಂಡುಹಿಡಿದ ಜ್ಞಾನದಲ್ಲಿ ಶಾಸ್ತ್ರೀಯತೆ ಇದೆಯಾ ಇಲ್ಲಾ ಎಂದು ನೋಡುವುದಿಲ್ಲ. ಶಾಸ್ತ್ರೀಯತೆ ಇಲ್ಲದಿರುವಾಗ ಅವರು ಹೇಳಿರುವುದು ಸಿದ್ಧಾಂತವಲ್ಲ. ಅದರಲ್ಲಿ ಫಲಿತ ಕಾಣಿಸುವುದಿಲ್ಲ. U.I.R.C ಅವರು ತಮ್ಮ ಪರಿಶೋಧನೆಯಲ್ಲಿ ಇಸ್ಲಾಮ್‌ನಲ್ಲಿನ ಖುರಾನ್‌ನನ್ನೇ ಅಲ್ಲದೆ ಭಗವದ್ಗೀತೆ, ವೇದಗಳನ್ನೂ, ಬೈಬಲ್‌ನ್ನೂ ಪರಿಶೋಧಿಸಿ ನೋಡಿದ್ದಾರೆ. ಅವರಿಗೆ ಅವುಗಳಲ್ಲಿ

ತಿಳಿದ ವಿಷಯಗಳನ್ನು ಹೇಳಿದ್ದಾರೆ. ಅವರು ಹೇಳಿರುವವು ಕೆಲವರು ಒಪ್ಪಿಕೊಳ್ಳಬಹುದು, ಒಪ್ಪಿಕೊಳ್ಳದೆ ಇರಬಹುದು. ಅದು ಅವರವರ ವಿಚಕ್ಷಣ ಮೇಲೆ ಆಧಾರವಾಗಿರುತ್ತದೆ. U.I.R.C ಯಲ್ಲಿ ಅವರು ಅವರ ಪರಿಶೋಧನೆಯಲ್ಲಿ ತಿಳಿದಿರುವವು ಹೇಳಿದ್ದಾರೆ. ಹಾಗೆ ಪರಿಶೋಧಿಸುವುದರಲ್ಲಿಯೂ, ಅವರ ಉದ್ದೇಶವನ್ನು ಹೊರಗೆ ಹೇಳುವುದರಲ್ಲಿಯೂ ಯಾವ ತಪ್ಪಿಲ್ಲ. ಇದು ರಾಜ್ಯಾಂಗ ಕೊಟ್ಟಿರುವ ಹಕ್ಕು ಅನ್ನುವುದಕ್ಕಿಂತ ದೇವರುಕೊಟ್ಟ ಸ್ವತಂತ್ರವೆಂದು ಹೇಳಬಹುದು. ಹೇಳಿರುವುದು ತಪ್ಪಾ ಒಪ್ಪಾ ಎನ್ನುವ ವಿಷಯವನ್ನು ಪಕ್ಕದಲ್ಲಿಟ್ಟರೆ, ದೇವರ ವಿಷಯವನ್ನು ಮಾತನಾಡುವುದಕ್ಕೆ ಎಲ್ಲರಿಗೂ ಹಕ್ಕಿದೆ. ಇಸ್ಲಾಮ್‌ನಲ್ಲಾಗಲಿ, ಕ್ರೈಸ್ತದಲ್ಲಾಗಲಿ, ಇಂದೂತ್ವದಲ್ಲಾಗಲಿ ಇದು ಇಂತಹ ಮತದವರಿಗೆಂದು ಎಲ್ಲೂ ಹೇಳಲಿಲ್ಲ. ಇದು ಸರ್ವಮಾನವರಿಗೂ ಅನ್ವಯಿಸುವ ಧರ್ಮವೆಂದು ಹೇಳಲಾಗಿದೆ.

U.I.R.C ಅವರಿಗೆ B.O.U.I ಅವರಿಗೆ ಈ ಮಧ್ಯೆಕಾಲದಲ್ಲಿ ಒಂದು ವಿವಾದ ಬಂದಿದೆ. U.I.R.C ಅಧ್ಯಕ್ಷರು ಷಫೀ ಅವರು ಬೈಬಲ್‌ನ್ನು ಕುರಿತು ಹೇಳುವಾಗ ಅದರಲ್ಲಿ "ಯೇಸುಪ್ರಭು ಶಿಲುಬೆ ಮೇಲೆ ಸತ್ತುಹೋಗಲಿಲ್ಲ. ಆತನು ಸತ್ತುಹೋಗಿ ಪುನಃ ಬದುಕಿದ್ದಾನೆನ್ನುವುದು ಸರಿಯಲ್ಲ. ಮೊದಲಿಗೇ ಆತನು ಸತ್ತುಹೋಗಲಿಲ್ಲ" ಎಂದು ಹೇಳುವುದು ನಡೆದಿದೆ. ಅದಕ್ಕೆ ಬದುಲಾಗಿ B.O.U.I ಅವರಾದ ಸುಂದರರಾವು ಅವರು "ನಮ್ಮ ಬೈಬಲ್‌ನ್ನು ಕುರಿತು ನಮಗೆ ತಿಳಿದಿದೆ, ಯೇಸು ಶಿಲುಬೆ ಮೇಲೆ ಸತ್ತುಹೋಗಿದ್ದಾನೆಂದು ನಾವು ನಿರೂಪಿಸಿ ತೋರಿಸುತ್ತೇವೆ. ನೀವು ಹೇಳುವುದು ಬಹಳ ತಪ್ಪು" ಎಂದು ಹೇಳಿದ್ದಾರೆ. ಈ ವಿಧವಾಗಿ ಯೇಸು ಮರಣ ಇಬ್ಬರ ಮಧ್ಯೆ ದೊಡ್ಡ ಸವಾಲನ್ನು ಒಬ್ಬರಿಗೊಬ್ಬರು ಬೀಸಿಕೊಳ್ಳುವಹಾಗೆ ಮಾಡಿದೆ. ಅದಕ್ಕೆ ಚರ್ಚೆಗೆ ಬನ್ನಿರೆಂದು U.I.R.C ಅವರು ಕರೆಯುವುದು ನಡೆದಿದೆ. ಅದಕ್ಕೆ ಕೆಲವು ನಿಯಮಗಳನ್ನು B.O.U.I ಅವರು ಹೇಳುವುದು ನಡೆದಿದೆ. ಹೀಗೆ ಇಂಟರ್‌ನೆಟ್‌ನಲ್ಲಿ ಅವರ ವಾದಗಳನ್ನು ಕೇಳಿದ್ದೇವೆ. ಈಗ ಎರಡು ಕಡೆ ಎರಡು ಪರಿಶೋಧನಾ ಸಂಸ್ಥೆಗಳು

ಪ್ರಭು ಮರಣವನ್ನು ಒಂದು ಸಮಸ್ಯೆಯಾಗಿ ತೆಗೆದುಕೊಂಡಿದ್ದಾರೆ. ಮೂರನೆ ಸಂಸ್ಥೆಯಾದ ಇಂದೂ ಜ್ಞಾನವೇದಿಕೆ I.G.V ಈ ವಿಷಯವನ್ನೆಲ್ಲ ಗಮನಿಸಿದೆ. ಇಲ್ಲಿ ವಿಚಿತ್ರವೇನೆಂದರೆ B.O.U.I ಅವರು ಕ್ರೈಸ್ತವರು, U.I.R.C ಅವರು ಮುಸ್ಲೀಮರು, (I.G.V) ಅವರು ಇಂದೂಗಳು (ಹಿಂದುಗಳು). B.O.U.I ಅವರು ಕೇವಲ ಒಂದು ಬೈಬಲ್‌ನ್ನು ಕುರಿತು ಮಾತ್ರ ಹೇಳುವರು. U.I.R.C ಅವರು ಖುರಾನ್, ಬೈಬಲ್, ಭಗವದ್ಗೀತೆ, ವೇದಗಳನ್ನು ಕುರಿತು ಹೇಳುವರು. ಇನ್ನೂ I.G.V ಅವರು ಮಾತ್ರ ಮುಖ್ಯವಾಗಿ ಒಂದು ಭಗವದ್ಗೀತೆಯನ್ನೇ ಹೇಳುವರು, ಉಳಿದ ಮತಗಳನ್ನು ಕಡಿಮೆ ಮಾಡಿ ಮಾತನಾಡುವುದಿಲ್ಲ. ಉಳಿದ ಮತಗ್ರಂಥಗಳನ್ನು ಗೌರವವಾಗಿ ನೋಡುವರು. ಉಳಿದ ಮತ ಗ್ರಂಥಗಳಲ್ಲಿ ಸಹ ದೇವರ ಜ್ಞಾನವೇ ಇರುವುದರಿಂದ, ಅವುಗಳನ್ನು ಸಹ ಗೌರವಿಸುತ್ತಿರುವರು. ಅಷ್ಟೇ ಅಲ್ಲದೇ ಖುರಾನ್, ಬೈಬಲ್ ಗ್ರಂಥಗಳಲ್ಲಿ ಆಯಾ ಮತಗಳವರು ತಪ್ಪಾಗಿ ಭಾವವನ್ನು ಗ್ರಹಿಸಿದ ಹಾಗೆ ತಿಳಿದರೆ, ಆಗ ಮಾತ್ರ ಆ ವಾಕ್ಯಗಳಿಗೆ ಸರಿಯಾದ ಭಾವಗಳನ್ನು ತಿಳಿಸುತ್ತಿರುವರು. ಯಾವ ಗ್ರಂಥದಲ್ಲಾದರೂ ದೇವರ ಭಾವಕ್ಕೂ, ದೇವರ ಮಾತಿಗೂ ಭಂಗವಾಗದಂತೆ ನೋಡುವುದು ಮುಖ್ಯವಾದ ಕೆಲಸವಾಗಿ ಭಾವಿಸುತ್ತಿರುವರು. ಇಂದೂ ಜ್ಞಾನವೇದಿಕೆ (I.G.V) ಪೂರ್ತಿಯಾಗಿ ನಮ್ಮ ಪರ್ಯವೇಕ್ಷಣೆಯಲ್ಲೇ ಸಾಗುತ್ತಿರುವುದು.

ಯೂನಿವರ್ಸಲ್ ಇಸ್ಲಾಮಿಕ್ ರೀಸರ್ಚ್ ಸೆಂಟರ್ (U.I.R.C) ಅವರು ಏಸು ಶಿಲುಬೆ ಮೇಲೆ ಮರಣಿಸಲಿಲ್ಲ ಅನ್ನುವ ವಾದವನ್ನು ತಿಳಿಸುತ್ತಿರುವಾಗ, ಬೈಬಲ್ ಓಪೆನ್ ಯೂನಿವರ್‌ಸಿಟಿ ಆಫ್ ಇಂಡಿಯಾ ಅವರು B.O.U.I ಏಸು ಶಿಲುಬೆ ಮೇಲೆ ಮರಣಿಸಿದ್ದಾನೆಂದು ವಾದಿಸುತ್ತಿದ್ದಾರೆ. ಇಬ್ಬರು ನಮ್ಮದು ಸತ್ಯ, ನಿಮ್ಮದು ಅಸತ್ಯ ಎಂದು ಒಬ್ಬರಿಗೊಬ್ಬರು ಛಾಲೆಂಜ್ ಮೇಲೆ ಛಾಲೆಂಜ್ ಮಾಡಿಕೊಳ್ಳುವುದು ನಡೆದಿದೆ. ಇದರಲ್ಲಿ ಯಾರದು ತಪ್ಪು, ಯಾರದು ಸರಿ ಎಂದು ಇಂದೂ ಜ್ಞಾನವೇದಿಕೆ ಆಲೋಚಿಸಬೇಕಾಗಿ ಬಂದಿದೆ. ಒಂದು ವಿಧವಾಗಿ U.I.R.C ಅವರು ಹೇಳುವಹಾಗೆ ಏಸು ಶಿಲುಬೆ ಮೇಲೆ ಸತ್ತುಹೋಗಿಲ್ಲ ಅನ್ನುವ

ಮಾತು ಸತ್ಯವೆಂದು ಹೇಳಬಹುದು. ಅದೇ ವಿಧವಾಗಿ B.O.U.I ಅವರು ಹೇಳುತ್ತಿರುವಹಾಗೆ ಯೇಸು ಶಿಲುಬೆ ಮೇಲೆ ಮರಣಿಸಿದ್ದಾನೆನ್ನುವ ಮಾತು ಸಹ ಸತ್ಯವೇ ಎಂದು ಹೇಳಬಹುದು. ಈ ನಮ್ಮ ಮಾತು ಕೇಳಿದವರು ಯಾರಾದರೂ, ಇದೇನು ಚೋದ್ಯ ಎರಡು ವಾದಗಳು ಪರಸ್ಪರ ವಿರುದ್ಧ ವಾಗಿರುವಾಗ, ಯಾವುದೋ ಒಂದು ಸತ್ಯವಾಗುವುದು ಮತ್ತೊಂದು ಅಸತ್ಯವಾಗುತ್ತದಲ್ಲವೆ! ಹಾಗಲ್ಲದೆ ಎರಡೂ ಸತ್ಯವೆನ್ನುವುದು ಹೇಗೆ ಸರಿ ಹೋಗುತ್ತದೆ? ನೀವು ಹೇಳುವುದು ಕೋಲು ಮುರಿಯಬಾರದು, ಹಾವು ಸಾಯಬಾರದೆಂದು ಹೇಳಿದಹಾಗಿದೆ. ನೀವು ಹೇಳುವುದು ಸತ್ಯಾಸತ್ಯ ನಿರ್ಣಯವಲ್ಲ ಎಂದು ಯಾರಾದರೂ ಎನ್ನಬಹುದು. ಅದಕ್ಕೆ ನಮ್ಮ ಸಮಾಧಾನ ಪೂರ್ತಿಯಾಗಿ ವಿವರಿಸಿ ಹೇಳಿದರೆ ಹೀಗಿದೆ.

ನಾವು ಒಂದು ವಿಧವಾಗಿ ಇಬ್ಬರ ವಾದನೆ ಸತ್ಯವೇ ಎಂದು ಹೇಳಿದ್ದೇವೆ ಆದರೆ, ಎಲ್ಲಾ ವಿಧಗಳಲ್ಲಿ ಅವರ ವಾದ ಸತ್ಯವೆಂದು ಹೇಳಲಿಲ್ಲ ಅಲ್ಲವೆ! ಅವರು ಒಂದು ವಿಧವಾಗಿ ತಮ್ಮ ಮಾತು ಸತ್ಯವಾಗಿ ಇರುವುದರಿಂದ, ತಮ್ಮ ವಾದವೇ ಸತ್ಯವೆಂದು ಪೂರ್ತಿ ನಂಬಿಕೆಯಿಂದ ಹೇಳುತ್ತಿದ್ದಾರೆ. ಆದರೇ ಶಾಸ್ತ್ರಬದ್ಧವಾಗಿ ನೋಡಿದರೆ ನಮ್ಮ ಮಾತು ಸತ್ಯವಾ, ಅಸತ್ಯವಾ ಎಂದು ಅವರು ಯೋಚಿಸಲಿಲ್ಲ. ಆ ಎರಡು ಸಂಸ್ಥೆಗಳಲ್ಲಿನ ಅಧ್ಯಕ್ಷರು ಇಬ್ಬರೂ ಆಲೋಚನೆಯಲ್ಲಿ ಮೇಧಾವಿಗಳೇ ಆದರೆ, ಯೋಚನೆಯಲ್ಲಿ ಸ್ವಲ್ಪ ಹಿಂದೆ ಇರುವ ವಿಷಯ ಅವರಿಗೆ ತಿಳಿಯದು. ಆಲೋಚನೆಗಳು ಅವರ ಬುದ್ಧಿಯೊಂದರ ದೊಡ್ಡತನವನ್ನು ಅನುಸರಿಸಿ ಇರುತ್ತದೆ. ಅವರ ಬುದ್ಧಿ ದೊಡ್ಡದೇ! ಅದರಲ್ಲಿ ಅನುಮಾನವಿಲ್ಲ. ಗ್ರಂಥಗಳಲ್ಲಿ ಎಲ್ಲಿ ಏನಿರುವುದು ಜ್ಞಾಪಕ (ಮನನ) ಮಾಡುವ ಅವರ ಮನಸ್ಸು ಸಹ ದೊಡ್ಡದೇ, ಅದರಲ್ಲಿ ಸಹ ಸಂಶಯವಿಲ್ಲ. ಆದರೇ ಅವರವರ ಬುದ್ಧಿಗೆ ಸೇರುವ ಯೋಚನೆಗಳು ಅವರವಲ್ಲ, ಅವರ ಆತ್ಮವು ಆಗಿರುವುದರಿಂದ, ಅವರ ಆತ್ಮ ಈ ವಿಷಯದಲ್ಲಿ ಅವರ ಬುದ್ಧಿಗೆ ಯೋಚನೆ ಕೊಟ್ಟಿಲ್ಲವೆಂದು ಅರ್ಥವಾಗುತ್ತಿದೆ. ಆದ್ದರಿಂದ ಅವರು, ಅವರ ಆಲೋಚನೆಗೆ

ಸರಿಹೋಗುವ ವಿಷಯವನ್ನೇ ಸತ್ಯವೆಂದು ಹೇಳುತ್ತಿದ್ದಾರೆ. ಯಾರಾದರೂ ಅವರ ಆಲೋಚನಾ ವಿಧಾನದ ಪ್ರಕಾರವೇ ಹೇಳುತ್ತಿರುವರು. ಅದರ ಪ್ರಕಾರವೇ ಅವರು ನಮ್ಮದು ಸತ್ಯ, ನಮ್ಮದು ಸತ್ಯ ಎಂದು ಅನ್ನುತ್ತಿದ್ದಾರೆ. ಆದರೆ ಇಬ್ಬರೂ ತಾವು ಹೇಳುವುದು ಸಿದ್ಧಾಂತವಾ ಅಲ್ಲವಾ, ಶಾಸ್ತ್ರಬದ್ಧವಾ ಅಲ್ಲವಾ ಎಂದು ನೋಡುತ್ತಿಲ್ಲ. ಹಾಗೆ ನೋಡುವುದಾದರೆ ಎರಡು ಕಡೆ ವಾದಗಳು ಶಾಸ್ತ್ರಬದ್ಧ ವಲ್ಲವೆಂದು, ಅಸತ್ಯಗಳೆಂದು, ಕೊನೆಯಲ್ಲಿ ಫಲವನ್ನು ಕೊಡುವ ಸಿದ್ಧಾಂತ ಅಲ್ಲವೆಂದು ತಿಳಿಯಬಲ್ಲದು.

ಯೇಸುಪ್ರಭುವೊಂದರ ಜೀವನದಲ್ಲಿ ಕೊನೆಯಲ್ಲಿ ನಡೆದ ಯಥಾರ್ಥ ಸಂಘಟನೆಯನ್ನು ಕುರಿತು, ಒಬ್ಬರು ಮರಣಿಸಿದ್ದಾನೆಂದು, ಮತ್ತೊಬ್ಬರು ಮರಣಿಸಲಿಲ್ಲವೆಂದು ಹೇಳುವ ವಿಷಯವನ್ನು, ಅಂತಹ ಸಂಘಟನೆಯೊಂದಿಗೆ ಹೋಲಿಸಿ ನೋಡುವುದರಿಂದ ಅದರಲ್ಲಿನ ನಿಜವಾದ ಸತ್ಯ ತಿಳಿಯುವುದಕ್ಕೆ ಅವಕಾಶವಿದೆ. ಆದ್ದರಿಂದ ಯೇಸು ಪ್ರಭು ಮರಣವನ್ನು ಹೋಲಿದ ಮತ್ತೊಂದು ಯಥಾರ್ಥ ಸಂಘಟನೆಯನ್ನು ಪರಿಶೀಲಿಸಿ ನೋಡೋಣ. ಈ ಮಧ್ಯೆ ಕಾಲದಲ್ಲಿ ಇವರ ವಾದ ಪ್ರಾರಂಭದ ನಂತರವೇ ತಮಿಳನಾಡಿನಲ್ಲಿ ಕರೂರು ಜಿಲ್ಲೆಯಲ್ಲಿ ಮುತ್ತುಸ್ವಾಮಿ ಎನ್ನುವಾತನು ಸತ್ತುಹೋಗುವುದು ನಡೆದಿದೆ. ಬೆಳಿಗ್ಗೆ ಸತ್ತುಹೋದಹಾಗೆ ಡಾಕ್ಟರುಗಳು ಪ್ರಕಟಿಸಿದಾಗ, ಕೊನೆಯಲ್ಲಿ ಶವಕ್ಕೆ ಮಾಡಬೇಕಾದ ಕಾರ್ಯಕ್ರಮಗಳನ್ನೆಲ್ಲ ಮಾಡಿ, ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಚಿತೆಮೇಲೆ ಮಲಗಿಸಿ ಬೆಂಕಿ ಹಚ್ಚುವ ಕೆಲವು ಕ್ಷಣಗಳ ಮೊದಲು, ಶವ ಪುನಃ ಸಜೀವವಾಗಿ ಏಳುವುದು ನಡೆದಿದೆ. ಎಲ್ಲರೂ ಆಶ್ಚರ್ಯವಾಗಿ ಮುತ್ತುಸ್ವಾಮಿಯನ್ನು ಮನೆಗೆ ತೆಗೆದುಕೊಂಡು ಹೋಗುವುದು ನಡೆದಿದೆ. ಈ ವಿಷಯ ಪೂರ್ತಿಯಾಗಿ ತಿಳಿಯುವುದಕ್ಕೆ ಈನಾಡು ವಾರ್ತಾಪತ್ರಿಕೆಯಲ್ಲಿನ ಸಮಾಚಾರವನ್ನು ನಂತರ ಪುಟದಲ್ಲಿ ಹೊಂದಿಸಿದ್ದೇವೆ.

ಗತಕಾಲದಲ್ಲಿ ನಾವು **"ಮರಣ ರಹಸ್ಯ"** ಎನ್ನುವ ಒಂದು ಚಿಕ್ಕ ಗ್ರಂಥವನ್ನು ಬರೆದಿದ್ದೇವೆ. ಮರಣ ರಹಸ್ಯ ಕ್ರಿ.ಶ 2011 ನೇ ವರ್ಷದಲ್ಲಿ

ಬರೆದಿರುವಾಗ, **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥವನ್ನು ಕ್ರಿ.ಶ 1980 ನೇ ವರ್ಷದಲ್ಲೇ ಬರೆದಿದ್ದೇವೆ. ಮರಣ ರಹಸ್ಯವನ್ನು ಸಹ ಸಿದ್ಧಾಂತದೊಂದಿಗೆ ಕೂಡಿಕೊಂಡಿರುವ ಹಾಗೆ, ಪೂರ್ತಿಯಾಗಿ ಶಾಸ್ತ್ರಬದ್ಧತೆಯಿಂದ ಬರೆದಿದ್ದೇವೆ. ಅದರಲ್ಲಿ ಮರಣ ಎನ್ನುವುದು ಮೂರು ವಿಧಗಳಾಗಿ ಇದೆಯೆಂದು, ಅದರಲ್ಲಿ ಒಂದು ಕಾಲಮರಣವೆಂದು, ಎರಡನೆಯದು ಅಕಾಲ ಮರಣವೆಂದು, ಮೂರನೆಯದು ತಾತ್ಕಾಲಿಕ ಮರಣವೆಂದು ವಿವರಿಸಿ ಹೇಳುವುದು ನಡೆದಿದೆ. ಮರಣ ರಹಸ್ಯದಲ್ಲಿನ ಸಿದ್ಧಾಂತದ ಪ್ರಕಾರ ಮುತ್ತುಸ್ವಾಮಿ ತಾತ್ಕಾಲಿಕ ಮರಣವನ್ನು ಹೊಂದಿದ್ದಾನಾಗಲಿ, ಮರಣವನ್ನು ಹೊಂದಲಿಲ್ಲ.

## ಸೋದರಿ ರೋದನೆಯಿಂದ ಚಿತೆಯಿಂದ ಮೇಲೆದ್ದ ವ್ಯಕ್ತಿ

ಈನಾಡು, ಬುಧವಾರ ಜೂಲೈ11, 2012

**ಚೆನ್ನೈ, ನ್ಯೂಸ್‌ಟುಡೇ** : ಸ್ವಲ್ಪ ಹೊತ್ತಿನಲ್ಲಿ ಚಿತೆಮೇಲೆ ಸುಟ್ಟುಹೋಗಬೇಕಾದ ವ್ಯಕ್ತಿ, ಸೋದರಿ ಕರೆಯೊಂದಿಗೆ ಪ್ರಾಣದಿಂದ ಹೊರಬಿದ್ದ ವಿಚಿತ್ರ ಸಂಘಟನೆ ಇದು. ತಮಿಳನಾಡಿನಲ್ಲಿ ಕರೂರು ಜಿಲ್ಲೆ ಕಟ್ಟಲೈ ಗ್ರಾಮಕ್ಕೆ ಸೇರಿದ ಮುತ್ತುಸ್ವಾಮಿ (50) ರೈತ. ತೀವ್ರ ಅಸ್ವಸ್ಥತೆಗೆ ಗುರಿಯಾದ ಮುತ್ತು ಸ್ವಾಮಿಯನ್ನು ಹತ್ತು ದಿನಗಳ ಕೆಳಗೆ ಕರೂರುನಲ್ಲಿ ಒಂದು ಪ್ರೈವೇಟು ಆಸ್ಪತ್ರೆಯಲ್ಲಿ ಸೇರಿಸಿದ್ದಾರೆ. ಇದರಿಂದ ಕಳೆದ ಭಾನುವಾರ ನಡೆದ ಮಗಳು ಸರಿತ ವಿವಾಹಕ್ಕೆ ಅವರು ಹಾಜರಾಗಲಿಲ್ಲ. ಇದು ಹೀಗಿದ್ದರೆ ಚಿಕಿತ್ಸೆ ಫಲಿಸದೆ ಮುತ್ತು ಸ್ವಾಮಿ ಮರಣಿಸಿದಹಾಗೆ ವೈದ್ಯರು ಸೋಮವಾರ ಬೆಳಿಗ್ಗೆ ತಿಳಿಸಿದ್ದಾರೆ. ಮದುವೆ ಮನೆಗೆ ಹೆಣ ಬರುವುದು ಒಳ್ಳೆಯದಲ್ಲವೆಂದ ಕೆಲವರ ಸೂಚನೆಯಿಂದ ಮುತ್ತುಸ್ವಾಮಿ ಮೃತದೇಹವನ್ನು ನೇರವಾಗಿ ಸ್ಮಶಾನಕ್ಕೆ ತೆಗೆದುಕೊಂಡು ಹೋಗಿದ್ದಾರೆ. ಅಂತ್ಯಕ್ರಿಯೆಗಳು ಪ್ರಾರಂಭವಾಗಿವೆ. ಅಷ್ಟರಲ್ಲಿ ಕೋಯಂಬತ್ತೂರು ಸಮೀಪದಲ್ಲಿರುವ ಸೋಮೂರಿಗೆ ಸೇರಿದ ಮುತ್ತುಸ್ವಾಮಿ ಸೋದರಿ ಪಾಪ್ಪಾತ್ತಿ ಅಣ್ಣನ ಮರಣವಾರ್ತೆಯನ್ನು ತಿಳಿದುಕೊಂಡು ಸ್ಮಶಾನಕ್ಕೆ ಸೇರಿಕೊಂಡಿದ್ದಾಳೆ. ಅಣ್ಣನನ್ನು ಆ ಪರಿಸ್ಥಿತಿಯಲ್ಲಿ ನೋಡಿದ ಆಕೆ "ಅಣ್ಣಾ" ಎನ್ನುತ್ತಾ ಮೃತದೇಹದ ಮೇಲೆ

ಬಿದ್ದು ಜೋರಾಗಿ ಅಳುವುದಕ್ಕೆ ಶುರುಮಾಡಿದ್ದಾಳೆ. ಸ್ವಲ್ಪ ಹೊತ್ತಿನಲ್ಲೇ ಮುತ್ತುಸ್ವಾಮಿ ಕೈಬೆರಳುಗಳು, ಕಾಲಿನಲ್ಲಿ ಚಲನೆ ಬಂದಿವೆ. ಕಣ್ಣು ಸಹ ತೆರೆದಿದ್ದಾನೆ. ಇದರಿಂದ ಅಲ್ಲಿರುವವರೆಲ್ಲರು ಮುತ್ತುಸ್ವಾಮಿ ಎಂದು ಬೀಕರವಾಗಿ ಕರೆದಿದ್ದಾರೆ. ಮುತ್ತುಸ್ವಾಮಿ ಬಹಳ ಕಷ್ಟದಿಂದ ಏನೆಂದು ಕೇಳಿದ್ದಾನೆ. ಆತನು ಪ್ರಾಣದೊಂದಿಗೆ ಇದ್ದಹಾಗೆ ನಿರ್ಧರಿಸಿಕೊಂಡ ಗ್ರಾಮಸ್ಥರು ಮನೆಗೆ ಕರೆದುಕೊಂಡು ಬಂದಿದ್ದಾರೆ. ಪ್ರಸ್ತುತ ಪುಲಿಯೂರು ಎಂಬ ಸರ್ಕಾರಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾನೆ. ಗತದಲ್ಲಿ ಎಷ್ಟೋ ಜನ ತಾತ್ಕಾಲಿಕ ಮರಣವನ್ನು ಹೊಂದಿ ಹತ್ತು, ಹದಿನೈದು ದಿನಗಳ ನಂತರ ಪುನಃ ಮೇಲೆದ್ದ ಸಂಘಟನೆಗಳು ಸಹ ಇವೆ. ಬೆಳಿಗ್ಗೆ ಸತ್ತುಹೋಗಿ ಸಾಯಂಕಾಲಕ್ಕೆ ಮೇಲೆದ್ದವರು ಸಹ ಇದ್ದಾರೆ. ಈ ಮಧ್ಯದಲ್ಲಿ ವಿಜಯನಗರಂ ಜಿಲ್ಲೆಯಲ್ಲಿ ಒಬ್ಬ ಮುದುಕಿ ಸತ್ತುಹೋದ ನಂತರ ಮೂರು ದಿನಗಳಿಗೆ ಮೇಲೆದ್ದ ಸಂಘಟನೆ ಸಹ ನಡೆದಿದೆ.

ಈಗ ಅಸಲು ವಿಷಯಕ್ಕೆ ಬರೋಣ ಯೇಸುಪ್ರಭುವು ಶಿಲುಬೆ ಮೇಲೆ ಸತ್ತುಹೋಗುವುದು ವಾಸ್ತವವೇ, ಆದರೂ ಅದು ವಾಸ್ತವ ಮರಣವಲ್ಲ, ತಾತ್ಕಾಲಿಕ ಮರಣ ಮಾತ್ರವೇ ಆತನು ಹೊಂದಿದ್ದಾನೆ. ಆದ್ದರಿಂದ ಆತನು ಶಿಲುಬೆ ಮೇಲೆ ಮರಣ ಹೊಂದಲಿಲ್ಲವೆಂದೇ ಹೇಳಬಹುದು. ಆದ್ದರಿಂದ ಒಂದು ವಿಧವಾಗಿ B.O.U.I ಅವರು ಪ್ರಭುವು ಮರಣಿಸಿದ್ದಾನೆನ್ನುವ ಮಾತು ಅಸತ್ಯ. ಯೇಸು ಮೂರನೆ ದಿನ ತನ್ನ ಹನ್ನೊಂದು ಜನ ಶಿಷ್ಯರಿಗೆ ಕಾಣಿಸಿ, ನಾನು ಸತ್ತುಹೋಗಿಲ್ಲವೆಂದು ಯೇಸೇ ಸಾಕ್ಷಿಯನ್ನು ಹೇಳಿದಾಗ, ಸತ್ತುಹೋಗಿ ದ್ದಾನೆನ್ನುವುದು ತಪ್ಪಲ್ಲವೆ! ಇನ್ನು ಯೇಸು ಶಿಲುಬೆ ಮೇಲೆ ಕೊನೆಯದಾಗಿ ಒಂದು ಮಾತನ್ನು ಹೇಳಿ ತಲೆಬಗ್ಗಿಸಿ ಸತ್ತುಹೋಗುವುದನ್ನು ಅಲ್ಲಿರುವವರು ನೋಡಿದ್ದಾರೆ. ನಂತರ ಆತನನ್ನು ಬರ್ಚಿಯಿಂದ ಇರಿದಾಗ ಆತನ ಶರೀರದಲ್ಲಿ ಶ್ವಾಸ ಇಲ್ಲ. ಶಿಲುಬೆ ಮೇಲಿನಿಂದ ಯೇಸು ಶರೀರವನ್ನು ಇಳಿಸಿದಾಗ ಸಹ ಆತನು ಸತ್ತುಹೋದ ಸ್ಥಿತಿಯಲ್ಲೇ ಇದ್ದಾನೆ. ಸಮಾಧಿಯಲ್ಲಿ ಇಟ್ಟಾಗಲೂ ಸಹ ಆತನಲ್ಲಿ ಪ್ರಾಣ ಇಲ್ಲದಿರುವುದು ಆತನ ಶಿಷ್ಯರು ನೋಡಿದ್ದಾರೆ. ಶಿಲುಬೆ

ಮೇಲಿಂದ ಇಳಿಸಿ ದಾಗಿನಿಂದ, ಆತನನ್ನು ಸಮಾಧಿಯಲ್ಲಿ ಇಡುವವರೆಗು ಯೇಸು ಪ್ರಭು ಶರೀರದಲ್ಲಿ ಯಾವ ಕದಲಿಕೆಗಳಾಗಲಿ, ಶ್ವಾಸ ಆಡುವುದಾಗಲಿ ಇಲ್ಲ. ಆದ್ದರಿಂದ ಆಗ ಅವರು ಮರಣಸ್ಥಿತಿಯಲ್ಲಿ ಇರುವಹಾಗೆ ಅವರ ಶಿಷ್ಯರೇ ನಮಗೆ ಸಾಕ್ಷಿ ಕೊಡುತ್ತಿದ್ದಾರೆ. ಇದನ್ನನುಸರಿಸಿ U.I.R.C ಅವರು ಪ್ರಭುವು ಮರಣಿಸಲಿಲ್ಲ ಎನ್ನುವುದು ಅಸತ್ಯ. ದೈವಜ್ಞಾನದಲ್ಲಿ ದೊಡ್ಡವರಾಗಿ ಕಾಣಿಸುವವರೇ, ತಮ್ಮಲ್ಲಿ ಸಂಪೂರ್ಣ ಅವಗಾಹನೆ ಇಲ್ಲದಿರುವುದರಿಂದ, ಸ್ವಲ್ಪ ತಿಳಿಯದತನ (ಅಜ್ಞಾನ) ತಮ್ಮಲ್ಲಿ ಇರುವುದರಿಂದ, ಇಬ್ಬರೂ ಸತ್ಯಕ್ಕೆ ಸ್ವಲ್ಪ ದೂರವಾಗಿದ್ದಾರೆಂದು ತಿಳಿಯುತ್ತಿದೆ.

ಪೂರ್ತಿಯಾಗಿ ಸತ್ತುಹೋದ ಮನುಷ್ಯನಿಗೆ ಶರೀರದಲ್ಲಿನ ಕೀಲುಗಳು ಕದಲದೇ ಬಿಗಿದುಕೊಂಡಿರುವುದು, ರಕ್ತ ಗಡ್ಡೆ ಕಟ್ಟುವುದು, ಶ್ವಾಸ ಆಡದೆ ನಿಂತುಹೋಗುವುದು ಮೇಲಕ್ಕೆ ಕಾಣಿಸುವ ಚಿಹ್ನೆಗಳಾಗಿ ಇರುವವು. ಇಂತಹ ಚಿಹ್ನೆಗಳನ್ನು ನೋಡಿದವರು ಸತ್ತುಹೋದ ಮನುಷ್ಯನನ್ನು ಸುಲಭವಾಗಿ ಗುರುತಿಸಬಲ್ಲರು. ಆದರೆ ಇಲ್ಲಿ ಎಲ್ಲರಿಗೂ ತಿಳಿಯದ ವಿಷಯವೇನೆಂದರೆ! ಶ್ವಾಸ ಆಡದೆ ನಿಂತುಹೋಗಿದ್ದರೂ, ಗುಂಡಿಗೆ ಹೊಡೆದುಕೊಳ್ಳದೆ ಹೋಗಿದ್ದರೂ, ರಕ್ತಪ್ರಸರಣ ನಡೆಯದೆ ಇದ್ದರೂ, ಶರೀರವೆಲ್ಲಾ ಚೈತನ್ಯವಿಲ್ಲದೆ ನಿಂತುಹೋದರೂ, ಶರೀರದಲ್ಲಿ ತಲೆಯಲ್ಲಿ ಜೀವಾತ್ಮನಿರುತ್ತಾನೆಂದು, ಆತನು ಬದುಕಿದ್ದಹಾಗೇ ಎಂದು ಯಾರಿಗೂ ತಿಳಿಯದು. ಮೇಲಕ್ಕೆ ಸತ್ತುಹೋದಹಾಗೆ ಶ್ವಾಸ ಆಡದೆ ಇದ್ದರೂ, ತಾತ್ಕಾಲಿಕ ಮರಣ ಹೊಂದಿ ಮೇಲಕ್ಕೆ ಸತ್ತುಹೋದಹಾಗೆ ಕಾಣಿಸುತ್ತಿದ್ದರೂ, ಒಳಗೆ ಜೀವಾತ್ಮನಿದ್ದರೇ ಅವನು ಯಾವ ಸ್ಕಾನಿಂಗ್‌ಗು ತಿಳಿಯುವುದಿಲ್ಲ ಆದರೆ, ಅಂತಹ ಶರೀರದಲ್ಲಿ ಎರಡು ಚಿಹ್ನೆಗಳು ಚೆನ್ನಾಗಿ ಕಾಣಿಸುತ್ತವೆ. ಆತನ ಶರೀರದಲ್ಲಿ ರಕ್ತ ಘನೀಭವಿಸುವುದಿಲ್ಲ. ಹಾಗೇ ಕೀಲುಗಳು ಸುಲಭವಾಗಿ ಕದಲುತ್ತಿರುತ್ತವೆ. ಯೇಸು ಶಿಲುಬೆ ಮೇಲೆ ತಾತ್ಕಾಲಿಕ ಮರಣ ಹೊಂದಿರುವುದರಿಂದ, ಆತನ ಶರೀರದಲ್ಲಿ ರಕ್ತ ಗಡ್ಡೆ ಕಟ್ಟದೆ ದ್ರವ ರೂಪದಲ್ಲಿ ಇರುವುದರಿಂದ, ಯೇಸು ಪ್ರಭುವು ಸತ್ತುಹೋಗಿಲ್ಲವೆಂದು ಎಲ್ಲರಹಾಗೆ ಬದುಕೇ

ಇದ್ದಾನೆಂದು U.I.R.C ಅವರು ಅಭಿಪ್ರಾಯ ಪಟ್ಟಿದ್ದಾರೆ. ಮೂಗು ರಂಧ್ರಗಳಲ್ಲಿ ಶ್ವಾಸ ಆಡುತ್ತಿಲ್ಲ ಎನ್ನುವುದು ತಿಳಿಯದೆ, ಆತನು ಪ್ರಾಣವಾಯುವನ್ನು ಹೀರುತ್ತಾ ಪ್ರಾಣದಿಂದ ಇದ್ದಾನೆಂದುಕೊಂಡಿದ್ದಾರೆ. ವಾಸ್ತವಕ್ಕೆ ಆ ಸಮಯದಲ್ಲಿ ಪ್ರಭುವಿಗೆ ಪ್ರಾಣವಿಲ್ಲ. ಆದ್ದರಿಂದ ಆತನು ಸತ್ತುಹೋಗಿದ್ದಾನೆಂದು ಹೇಳುವುದು B.O.U.I ಅವರ ಮಾತು ಮೇಲಕ್ಕೆ ಕಾಣಿಸುವ ಸತ್ಯವೆಂದು ಹೇಳಬಹುದು.

ಒಬ್ಬ ಮನುಷ್ಯ ಮರಣಿಸಿದರೆ ಮೇಲಕ್ಕೆ ಕಾಣಿಸುವ ಚಿಹ್ನೆಗಳಿಂದಲೇ ಅವನನ್ನು ಮರಣಿಸಿದ್ದಾನೆಂದು ಹೇಳುವುದು ಪೂರ್ತಿ ನಿರ್ಧಾರಣೆ ಅಲ್ಲ. ಆ ಮರಣ ಸತ್ಯವೂ ಆಗಬಹುದು, ಅಸತ್ಯವೂ ಆಗಬಹುದು. ಯೇಸುಪ್ರಭು ಬದುಕಿರುವಾಗಲೆ ಒಂದು ಊರಿನಲ್ಲಿ ಒಬ್ಬ ಬಾಲಕಿ ಮರಣಿಸಿದಾಗ, ಆ ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವುದಕ್ಕೆ ತಪ್ಪಡಿಗಳನ್ನು ಬಾರಿ ಸುತ್ತಿರುವಾಗ, ಯೇಸು ಅಲ್ಲಿಗೆ ಹೋಗಿ ಏಕೆ ತಪ್ಪಡಿಗಳನ್ನು ಬಾರಿಸುತ್ತಿದ್ದೀರೆಂದು ಕೇಳಿದಾಗ, ಅಲ್ಲಿರುವವರು ಬಾಲಕಿ ಸತ್ತುಹೋಗಿದ್ದಾಳೆ. ಶವವನ್ನು ತೆಗೆದುಕೊಂಡು ಹೋಗುವುದಕ್ಕೆ ಪ್ರಯತ್ನಿಸುತ್ತಿದ್ದೇವೆಂದು ಹೇಳಿದ್ದಾರೆ. ಆಗ ಪ್ರಭುವು ಆ ಬಾಲಕಿ ಸತ್ತುಹೋಗಿಲ್ಲವೆಂದು ಹೇಳಿ, ಆ ಬಾಲಕಿಯನ್ನು ತಟ್ಟಿ ಎಬ್ಬಿಸಿದಾಗ ಆಕೆ ಪುನಃ ಸಜೀವವಾಗಿ ಎದ್ದಳು. ಅಲ್ಲಿ ಯೇಸು ತಾತ್ಕಾಲಿಕ ಮರಣವನ್ನು ಗುರುತಿಸಿದಹಾಗೆ ನಮಗೆ ಅರ್ಥವಾಗುತ್ತಿದೆ. ಬೈಬಲ್ ಗ್ರಂಥದಲ್ಲಿ ಮತ್ತಾಯ 9 ನೇ ಅಧ್ಯಾಯದಲ್ಲಿ 23, 24, 25 ವಾಕ್ಯಗಳಲ್ಲಿ ಹೀಗೆ ಇದೆ. "ಜಾಗಬಿಡಿ ಈ ಹುಡುಗಿ ನಿದ್ರೆ ಮಾಡುತ್ತಿದ್ದಾಳೆ ಹೊರತು ಸತ್ತುಹೋಗಿಲ್ಲವೆಂದು ಅವರೊಂದಿಗೆ ಹೇಳಿದಾಗ, ಅವರು ಆತನನ್ನು ಅಪಹಾಸ್ಯ ಮಾಡಿದರು. ಜನ ಸಮೂಹವನ್ನು ಕಳುಹಿಸಿ, ಆತನು ಒಳಗೆ ಹೋಗಿ ಆಕೆ ಕೈಯನ್ನು ಹಿಡಿದುಕೊಳ್ಳುತ್ತಲೆ ಆ ಹುಡುಗಿ ಎದ್ದಳು. ಈ ಸಮಾಚಾರ ದೇಶದೊಳಗೆಲ್ಲಾ ಹಬ್ಬಿತು." ಆ ಕಾಲದಲ್ಲೇ ಯೇಸುವೇ ಸ್ವತಃವಾಗಿ ಆಕೆ ಸತ್ತುಹೋಗಿಲ್ಲ ಎಂದು ಎಲ್ಲರ ದೃಷ್ಟಿಯಲ್ಲಿ ಸತ್ತುಹೋದ ಬಾಲಕಿಯನ್ನು ಕುರಿತು ಹೇಳಿದ್ದಾನೆ. ಆದರೂ ಕ್ರೈಸ್ತವ ಬೋಧಕ ರಾದ ಅವರಿಗೆ ಆ ವಿಷಯ ಏನೂ ಅರ್ಥವಾಗಲಿಲ್ಲ. ಮೇಲಾಗಿ ಯೇಸು

ಮೂರು ದಿನಗಳಿಗೆ ಮತ್ತೆ ಬಂದು ನಾನು ಸತ್ತುಹೋಗಿಲ್ಲ, ಮೊದಲಿದ್ದ ಶರೀರವೇ ಇದೆ ನೋಡಿ ಎಂದು ಆತನ ಕೈಗಳಿಗು, ಪಕ್ಕ ಹೊಟ್ಟೆಗೂ ಇರುವ ಗಾಯಗಳನ್ನು ಸಾಕ್ಷಿಯಾಗಿ ತೋರಿಸಿದರೂ, ಅರ್ಥಮಾಡಿಕೊಳ್ಳದೆ ಯೇಸು ಸತ್ತುಹೋಗಿದ್ದಾನೆಂದು ಹೇಳುವವರ ಮೆದುಳಿಗೆ, ಎಷ್ಟು ಗ್ರಾಹಿತ ಶಕ್ತಿ ಇದೆಯೋ ಅರ್ಥವಾಗುತ್ತಿದೆ. ಇಂದಿಗಾದರೂ ನಾವು ಎಷ್ಟು ಅಜ್ಞಾನದಲ್ಲಿದ್ದೇವೆಂದು ಚಿಂತಿಸದೆ, ಕೊಬ್ಬೇರಿದ ಕೋಣ ರೈಲನ್ನು ಢೀ ಹೊಡೆದ ಹಾಗೆ ನನಗೆ ಯಾರೂ ಸಾಟಿ ಇಲ್ಲ, ನನಗೆ ಯಾರೂ ಪೋಟಿಗೆ ಬರುವುದಿಲ್ಲ, ನನ್ನ ಕೈಗಳು ತುರಿಕೆಗಳಾಗಿವೆ. ನಾನು ಸಿಂಹ ಎಂದು ಅಂದುಕೊಳ್ಳುತ್ತಾ ಇದ್ದರೆ, ದೇವರು ಅಂತಹವನನ್ನು ನೋಡಿ ಇವನು ಈ ಯುಗದಲ್ಲಿ ಆಗದಿದ್ದರೂ, ಬರುವ ಯುಗದಲ್ಲಾದರು ಜ್ಞಾನಿ ಆಗುತ್ತಾನೆನ್ನುವ ನಂಬಿಕೆಯೇ ಇಲ್ಲ ಎಂದು ಅಂದುಕೊಳ್ಳುತ್ತಾನೆ. ಅಂತಹವರನ್ನು ದಯೆ ತೋರಿ ಅವರಿಗೆ ತನ್ನ ಜ್ಞಾನವನ್ನು ತಿಳಿಸುವುದಕ್ಕೆ ದೇವರೇ ಸ್ವತಃವಾಗಿ ಬಂದರೂ, ನಮಗೆ ಎಲ್ಲಾ ಗೊತ್ತು ಎಂದು ಅಹಂಕಾರದಿಂದಿರುವವರು, ನಾವು ಮನುಷ್ಯರು ಹೇಳುವ ಬೋಧನೆಯನ್ನು ಕೇಳುವುದಿಲ್ಲ, ಓದುವುದಿಲ್ಲ ಎಂದು ಅನ್ನುತ್ತಾರೆ. ದೇವರು ದೇವರಾಗಿಯೇ ಬರುವುದಕ್ಕೆ ಆತನಿಗೆ ಒಂದು ರೂಪ ಅನ್ನುವುದು ಯಾವುದೂ ಇಲ್ಲ. ಅಂತಹದರಲ್ಲಿ ಮನುಷ್ಯನಿಗೆ ಹೇಳುವುದಕ್ಕೆ ಮನುಷ್ಯನಾಗಿಯೇ ಬಂದರೆ ಮನುಷ್ಯನ ಮಾತು ಕೇಳುವುದಿಲ್ಲ ಎನ್ನುತ್ತಾರೆ. ಅಂತವರಿಗೆ ದೇವರಾದರು ಹೇಗೆ ಹೇಳಬಲ್ಲನು?

ಭಗವದ್ಗೀತೆಯನಾಗಲಿ, ಬೈಬಲ್‌ನ್ನಾಗಲಿ, ಖುರಾನ್‌ನನ್ನಾಗಲಿ ಮನುಷ್ಯರೇ ಹೇಳಿದ್ದಾರೆ ವಿನಃ ಪ್ರತ್ಯೇಕಿಸಿ ದೇವರು ಹೇಳಲಿಲ್ಲ ಅಲ್ಲವೆ! ನಾವು **"ಮರಣ ರಹಸ್ಯ"** ಎನ್ನುವ ಗ್ರಂಥವನ್ನು ಸುಂದರರಾವು ಅವರಿಗೆ ಕಳಿಸಿ, ಇದರಲ್ಲಿ ಯೇಸು ಪ್ರಭುವೊಂದರ ಮರಣಕ್ಕೆ ಸಂಬಂಧಿಸಿದ ಸಮಾಚಾರವಿದೆ ಎಂದು ಹೇಳಿದರೆ, ನಮಗೆ ಬೇಡ ಮನುಷ್ಯರು ಬರೆದಿರುವವು ನಾವು ಓದುವುದಿಲ್ಲ ಎಂದಿದ್ದಾರೆ. ಅಂತಹದರಲ್ಲಿ ನಾವು ಒಂದು ಪ್ರಶ್ನೆ ಕೇಳುತ್ತಿದ್ದೇವೆ. ನೀವು ಸಹ

ಕೆಲವು ಗ್ರಂಥಗಳನ್ನು ಬರೆದಿದ್ದೀರ ಅಲ್ಲವೆ! ನೀವು ಹೇಳಿದಹಾಗೆ ಉಳಿದವರು ಸಹ ನಾವು ಮನುಷ್ಯರು ಬರೆದ ಗ್ರಂಥಗಳನ್ನು ಓದುವುದಿಲ್ಲ ಅಂದರೆ, ನಿಮ್ಮಂತೆ ಇತರರು ಮಾತನಾಡಿದರೆ, ನಿಮ್ಮ ಗ್ರಂಥಗಳನ್ನು ಯಾರು ಓದುವುದಿಲ್ಲ ಅಲ್ಲವೆ! ಅಂತಹದರಲ್ಲಿ ನೀವು ಗ್ರಂಥಗಳನ್ನು ಏಕೆ ಬರೆದಿದ್ದೀರಾ? ದೇವರು ಯಾವಾಗಾದರೂ, ಯಾವ ವಿಧದಲ್ಲಾದರೂ, ಯಾವ ರೂಪದಲ್ಲಾದರೂ ಮನುಷ್ಯರಿಗೆ ತನ್ನ ಜ್ಞಾನವನ್ನು ತಿಳಿಸುವನೆನ್ನುವ ಉದ್ದೇಶದಿಂದ, ನಾವು ನೀವು ಬರೆದ ಗ್ರಂಥಗಳನ್ನು ನಿಮ್ಮ ಹತ್ತಿರವೇ ಕೊಂಡಿದ್ದೇವೆ, ಅದೇ ಉದ್ದೇಶ ನಿಮಗೇಕೆ ಇಲ್ಲ? ಒಂದು ವೇಳೆ ಯೇಸೇ ನಿಮ್ಮಗೋಸ್ಕರ ಜ್ಞಾನ ಸಂದೇಶವನ್ನು ಕಳುಹಿಸಿದರೂ, ಅಥವಾ ಆತನೇ ನಿಮ್ಮ ಹತ್ತಿರಕ್ಕೆ ಬಂದು ಹೇಳಿದರೂ, ನೀವು ಕೇಳದೇ ಹೋದರೇ, ಅಥವಾ ಆತನ ಸಂದೇಶವನ್ನು ನೀವು ಓದದೇ ಹೋದರೇ ನೀವು ಜ್ಞಾನದಲ್ಲಿ ನಷ್ಟವಾದಹಾಗೆ ಅಲ್ಲವೆ! ನಾವು ಆತ್ಮಜ್ಞಾನಿಗಳೆಂದುಕೊಂಡರೂ! ಆತ್ಮ ಅಂದರೆ ಏನೋ ತಿಳಿಯದು. ಅದು ಯಾವ ಕೆಲಸವನ್ನು ಮಾಡುತ್ತಿದೆಯೋ ತಿಳಿಯದು. ಆತ್ಮ ಶರೀರದಲ್ಲಿ ಎಲ್ಲಿ ನಿವಾಸವಿರುವುದು ತಿಳಿಯದು, ಮರಣದಲ್ಲಿ ಆತ್ಮ ಏನು ಮಾಡುತ್ತಿದೆಯೊ ತಿಳಿಯದು. ಆತ್ಮನನ್ನು ಕುರಿತಿರುವ ಜ್ಞಾನವೇ ಇಲ್ಲದೇ ಆತ್ಮಜ್ಞಾನಿಗಳೆಂದುಕೊಳ್ಳುವುದು, ನಮಗೆ ಯಾರೂ ಸಮಾನರಿಲ್ಲ ಎನ್ನುವುದು, ನಾವು ಸಿಂಹಗಳು, ನಮ್ಮ ಕೈಗಳು ಪೋಟಿಗೆ ತುರಿಕೆಗಳಾಗಿವೆ ಎನ್ನುವುದು ನಿಮ್ಮಲ್ಲಿ ಅಹಂವೊಂದರ ಕೆಲಸ ಅಲ್ಲವೆ!

ಶರೀರದಲ್ಲಿ ಕೆಲವು ಕಾಣಿಸುವ ಭಾಗಗಳು, ಕೆಲವು ಕಾಣಿಸದ ಭಾಗಗಳಿವೆ. ಅವುಗಳಲ್ಲಿ ಮನಸ್ಸು, ಬುದ್ಧಿ, ಅಹಂ ಕಾಣಿಸುವುದಿಲ್ಲ. ಆದರೇ ಅವುಗಳ ಕೆಲಸ ಮಾತ್ರ ಹೊರಗೆ ತಿಳಿಯುತ್ತಿರುತ್ತದೆ. ಬೈಬಲ್‌ನಲ್ಲಿ ಮುಖ್ಯವಾದ ಸಾರಾಂಶ ಅಹಂಕಾರವನ್ನು ಬಿಡಬೇಕೆಂದು ಇದೆ. ನಾನು ಇಂತಹವನೆಂದು ಹೇಳಿಕೊಳ್ಳುವುದೇ ಅಹಂವೊಂದರ ಕೆಲಸ. ಅಸಲಿಗೆ ನೀನು ಶರೀರದಲ್ಲಿ ಎಲ್ಲಿದ್ದೀಯಾ? ಯಾವ ರೂಪದಲ್ಲಿ ಇದ್ದೀಯಾ? ಎಂದು ಪ್ರಶ್ನಿಸಿದರೆ ಒಂದಕ್ಕೂ ಸಹ ಉತ್ತರ ತಿಳಿಯದು. ಜೀವಾತ್ಮ ಆದವನು ತನ್ನನ್ನು ಕುರಿತೇ ತಾನು ತಿಳಿಯನು.

ಎಂದಿಗಾದರೂ ತನ್ನನ್ನು ಕುರಿತು ತಿಳಿದ ನಂತರವೇ ಆತ್ಮನನ್ನು ಕುರಿತು ತಿಳಿಯಬಲ್ಲನು. ಆತ್ಮನನ್ನು ಕುರಿತು ತಿಳಿದ ನಂತರವೇ ಪರಮಾತ್ಮನಾದ ದೇವರನ್ನು ಕುರಿತು ತಿಳಿಯುವುದು. ಇದು ದಾರಿಯಾದಾಗ, ತನ್ನನ್ನು ಕುರಿತು ತಾನು ತಿಳಿಯದವನು ನಾನು ಇಷ್ಟು, ನಾನು ಅಷ್ಟು ಎಂದು ಹೇಳಿಕೊಳ್ಳುವುದು ನಡೆಯುತ್ತಿರುತ್ತದೆ. ತನ್ನನ್ನು ಕುರಿತು (ಜೀವಾತ್ಮನನ್ನು ಕುರಿತು) ತಿಳಿದವನು ಅಹಂಕಾರದಿಂದ ಕೂಡಿಕೊಂಡು ಮಾತನಾಡುವುದಿಲ್ಲ. ಆದರೇ ಕೆಲವರು ತಮ್ಮ ಮತ ಗ್ರಂಥಗಳನ್ನು ಅಡ್ಡವಾಗಿಟ್ಟುಕೊಂಡು, ಇತರರ ದೃಷ್ಟಿಯಲ್ಲಿ ದೊಡ್ಡ ವರೆಂದೆನಿಸಿಕೊಳ್ಳುವುದಕ್ಕೋಸ್ಕರ, ತಮ್ಮ ಮೂಲ ಗ್ರಂಥಗಳಲ್ಲಿನ ಸೂತ್ರಗಳನ್ನು ಅತಿಕ್ರಮಿಸಿ ಮಾತನಾಡುತ್ತಿರುವರು. ಜೀವಾತ್ಮ ಮೂರು ವಿಧಗಳ ಮರಣಗಳನ್ನು ಹೊಂದುವುದಕ್ಕೆ ಅವಕಾಶ ಇದೆಯೆಂದು ತಿಳಿಯದವರು, ಯೇಸು ಪ್ರಭು ಶಿಲುಬೆ ಮೇಲೆ ನಾನು ಮರಣಿಸಲಿಲ್ಲವೆಂದು ಹೇಳುತ್ತಿದ್ದರೂ, ಮರಣಿಸಿದ್ದಾನೆಂದು ಆತನನ್ನು ಕುರಿತು ಪ್ರಚಾರ ಮಾಡುವುದು ಪ್ರಭು ಮಾತನ್ನು ಅಗೌರವ ಪಡಿಸಿದಹಾಗೆ ಅಲ್ಲವೆ!

ಯೇಸು ಮರಣಿಸಿ ಮೂರು ದಿನಗಳಿಗೆ ಪುನಃ ಎಚ್ಚರಗೊಂಡಿದ್ದಾನೆ, ಆದ್ದರಿಂದ ಪ್ರಭು ದೊಡ್ಡವನು, ಆತನು ನಿಜವಾಗಿ ದೇವರು, ಹಾಗೆ ಎದ್ದವರು ಯಾರೂ ಇಲ್ಲ. ಆದ್ದರಿಂದ ನಮ್ಮ ದೇವರೊಂದಿಗೆ ಸಮಾನ ಯಾರೂ ಇಲ್ಲವೆಂದು ಕೆಲವರನ್ನುತ್ತಿದ್ದಾರೆ. ಹಾಗೆ ಅಂದುಕೊಂಡರೇ ತಮಿಳನಾಡಿನಲ್ಲಿ ಚಿತೆಯಿಂದ ಎದ್ದ ಮುತ್ತುಸ್ವಾಮಿ ಸಹ ದೊಡ್ಡವನೇ ಆಗುತ್ತಾನೆ. ಅಷ್ಟೇ ಅಲ್ಲದೆ ಎಷ್ಟೋ ಜನ ಹಾಗೆ ಎದ್ದವರಿದ್ದಾರೆ ಅವರೆಲ್ಲಾ ಯೇಸುನೊಂದಿಗೆ ಸಮಾನರಾಗುತ್ತಾರಲ್ಲವೆ! ಆದ್ದರಿಂದ ನಾವು ಏನೂ ತಿಳಿಯದೆ ಯೇಸು ಪ್ರಭು ಮರಣವನ್ನು ಕುರಿತು ಮಾತನಾಡಿದರೆ, ಆತನ ಗೌರವವನ್ನು ಕಡಿಮೆ ಮಾಡಿದಹಾಗೆ ಆಗುತ್ತದೆ. ಆದ್ದರಿಂದ ನೀವು ಪ್ರಪಂಚ ವಿಷಯಗಳನ್ನು ಹೇಗೆ ಮಾತನಾಡಿದರೂ ಫರವಾಗಿಲ್ಲ ಆದರೆ, ದೇವರ ವಿಷಯದಲ್ಲಿ ಅಹಂಕಾರವನ್ನು ಬಿಟ್ಟು, ತನ್ನನ್ನು ತಾನು ತಗ್ಗಿಸಿಕೊಂಡು ಮಾತನಾಡುವುದು, ಎಲ್ಲರಿಗೂ ಒಳ್ಳೆಯದೆಂದು ಹೇಳುತ್ತಿದ್ದೇವೆ.

ಯಾವ ಮತದಲ್ಲಿನ ಮನುಷ್ಯನಾದರೂ ದೇವರ ವಿಷಯದಲ್ಲಿ ಎಡವಿದರೆ ಅವರಿಗೆ ಸತ್ಯವನ್ನು ತಿಳಿಸುವುದು ನಮ್ಮ ಕರ್ತವ್ಯ. ಆದ್ದರಿಂದ ಪ್ರಭು ಮರಣದಲ್ಲಿ ಒಬ್ಬರಿಗೊಬ್ಬರು ಸವಾಲುಗಳು, ಛಾಲೆಂಜ್‌ಗಳು ಬೀಸಿಕೊಂಡವರಿಗೆ ಯೇಸು ಪ್ರಭು ಮರಣವನ್ನು ಕುರಿತು ಸತ್ಯ ತಿಳಿಸುವ **"ಮರಣ ರಹಸ್ಯ"** ಎಂಬ ಗ್ರಂಥವನ್ನು ವಿಶಾಖಪಟ್ಟಣದಲ್ಲಿ ನಮ್ಮ ಅನುಚರರು ಸುಂದರರಾವು ಅವರಿಗೆ **B.O.U.I** ನಲ್ಲಿ ಕೊಟ್ಟರೆ ಅವರು ತೆಗೆದುಕೊಂಡಿಲ್ಲ. ಹೈದರಾಬಾದ್‌ನಲ್ಲಿ **U.I.R.C** ಅವರಿಗೆ ಕೊಟ್ಟರೆ ತೆಗೆದುಕೊಂಡಿದ್ದಾರಾಗಲಿ, ಅವರು ಯಾವಮಾತ್ರ ಅದನ್ನು ಓದಲಿಲ್ಲ. ನಮಗೆ ಎಲ್ಲಾ ತಿಳಿದಿದೆ ಎನ್ನುವ ಭಾವ ಎರಡು ಕಡೆಯವರಲ್ಲಿ ಇರುವುದರಿಂದ ಅವರು ನಾವು ಹೇಳಿದ ಮರಣ ರಹಸ್ಯವನ್ನು ನೋಡಲಿಲ್ಲ. ಎರಡು ಕಡೆಯವರಿಗೂ ಸತ್ಯ ತಿಳಿಯಬೇಕೆಂದರೇ ಕೊನೆಗೆ ನಾವು ಹೇಳಿರುವುದೇ ಆಧಾರವಾಗುತ್ತದೆ. ನಿಮ್ಮದೇನಾದರೂ ದೇವರ ಬೋಧನೆಯಾ ಎಂದು ಯಾರಾದರೂ ನಮ್ಮನ್ನು ಪ್ರಶ್ನಿಸಿದರೇ ಸತ್ಯ ತಿಳಿಯುವಾಗ ದೇವರ ಬೋಧನೆಯೇ ಅಂದುಕೊಂಡರೇ ತಪ್ಪೇನಿದೆ ಎಂದು ಉತ್ತರವಾಗಿ ಪ್ರಶ್ನಿಸುತ್ತಿದ್ದೇವೆ. ದೊಡ್ಡ ಜ್ಞಾನಿಗಳೆಂದುಕೊಳ್ಳುವವರಲ್ಲಿ ಸಹ ಅಜ್ಞಾನ ಹೇಗೆ ಅಡಗಿದೆಯೋ, ಅವರು ಹೇಗೆ ಅದನ್ನು ಗುರುತಿಸದೆ ಹೋಗುತ್ತಿದ್ದಾರೋ, ತಿಳಿಸುವುದಕ್ಕೆ ತಾರ್ಕಾಣವಾಗಿ ಈ ವಿಷಯವನ್ನೆಲ್ಲಾ ಹೇಳಬೇಕಾಗಿ ಬಂದಿದೆ. ಈ ವಿಷಯ ತಿಳಿಯುವುದರಿಂದ ಕೆಲವರಾದರೂ ತಮ್ಮಲ್ಲಿನ ಅಹಂನ್ನು ಕಡಿಮೆಮಾಡಿಕೊಳ್ಳಬಲ್ಲರು, ಅಜ್ಞಾನವನ್ನು ದೂರ ಮಾಡಿಕೊಳ್ಳಬಲ್ಲರು.

ಪ್ರಕೃತಿ ಪರಮಾತ್ಮರಲ್ಲಿ ಪ್ರಕೃತಿ ಕಾಣಿಸುತ್ತದೆ, ದೇವರು ಕಾಣಿಸುವುದಿಲ್ಲ. ಪ್ರಕೃತಿ ಸ್ಥೂಲವಾದದ್ದು, ಪರಮಾತ್ಮ ಸೂಕ್ಷ್ಮವಾದವನು. ಆದ್ದರಿಂದ ಯಾವ ಮತದಲ್ಲಿನ ಮೂಲಗ್ರಂಥದಲ್ಲಾದರೂ, ಸ್ಥೂಲವಾದ ಶರೀರದಲ್ಲಿ ಸೂಕ್ಷ್ಮವಾದ ದೇವರಿದ್ದಾನೆನ್ನುವ ವಿಷಯವೇ, ಮುಖ್ಯವಾದ ಸಾರಾಂಶ ಜ್ಞಾನವಾಗಿ ಇರುತ್ತದೆ. ದೇವರು ಸೃಷ್ಟಿಯನ್ನು ತಯಾರು ಮಾಡಿದಾಗ ತನ್ನಿಂದ ಒಂದು ಪ್ರಕೃತಿ ಭಾಗವನ್ನು ತಯಾರುಮಾಡಿ ನಂತರ ತಾನು ಮೂರು ಭಾಗಗಳಾಗಿ ಬೇರೆಯಾಗಿ

ದ್ದಾನೆ. ಒಂದು ಭಾಗವಾದ ಪ್ರಕೃತಿಯಲ್ಲಿ ಮೂರು ಭಾಗಗಳಾದ ಮೂರು ಆತ್ಮಗಳಾಗಿರುವ ದೇವರಿದ್ದಾನೆ. ದೇವರ ಮೂರು ಭಾಗಗಳನ್ನು, ಪ್ರಕೃತಿಯನ್ನು ಸೇರಿಸಿ ವಿಶ್ವ ಎನ್ನುತ್ತಿದ್ದೇವೆ. ಪ್ರಕೃತಿ ಅನಂತವಾದದ್ದು. ಅನಂತವಾದ ಪ್ರಕೃತಿಯಲ್ಲಿ ಅದೃಶ್ಯವಾದ ದೇವರು ಮೂರು ವಿಧಗಳಾಗಿ, ಮೂರು ಆತ್ಮಗಳಾಗಿ ವ್ಯಾಪಿಸಿದ್ದಾನೆ. ಮೂರು ಆತ್ಮಗಳ ವಿವರವನ್ನು ಶಾಸ್ತ್ರೀಯತೆ ಮಾಡುವುದೇ ತ್ರೈತ ಸಿದ್ಧಾಂತ. ತ್ರೈತ ಸಿದ್ಧಾಂತವನ್ನು ಸ್ವತಃವಾಗಿ ದೇವರೇ ಸೃಷ್ಠಿ ಆದಿಯಲ್ಲಿ ಹೇಳಿದ್ದಾನೆ. ಅದು ಯಾರಿಗೂ ತಿಳಿಯದೇ ಹೋಗಿರುವುದರಿಂದ, ಮನುಷ್ಯನಾಗಿ ಬಂದಿರುವ ಭಗವಂತನು ಅದನ್ನೇ ಭಗವದ್ಗೀತೆ ರೂಪದಲ್ಲಿ ಪುನಃ ಹೇಳಿದ್ದಾನೆ. ಭಗವದ್ಗೀತೆ ಕೃಷ್ಣನಿಂದ ಹೇಳಲಾಗಿ ಐದು ಸಾವಿರ ಸಂವತ್ಸರಗಳು ಮುಗಿದುಹೋದರೂ ಆಗಿನಿಂದ ಇಲ್ಲಿಯವರೆಗೂ ತ್ರೈತ ಸಿದ್ಧಾಂತವಾಗಿರುವ ಮೂರು ಆತ್ಮಗಳ ವಿಷಯ ಯಾರಿಗೂ ತಿಳಿಯಲಿಲ್ಲ. ಈಗ ನಮಗೆ ಬಂದ ಯೋಚನೆಗಳಲ್ಲಿ ತ್ರೈತ ಸಿದ್ಧಾಂತ ತಿಳಿದಿದೆ. ಅದನ್ನೇ ನಿಮಗೆ ಹೇಳುತ್ತಿದ್ದೇನೆ. ಅಸೂಯೆ ಇಲ್ಲದೆ ಕೇಳಿದರೇ ಅರ್ಥವಾಗುತ್ತದೆ. ಒಗ್ಗರಣೆ ಇಲ್ಲದೆ ಸಾಂಬಾರು ಮಾಡುವುದು ಪೂರ್ತಿ ಆಗದಂತೆ, ತ್ರೈತ ಸಿದ್ಧಾಂತ ತಿಳಿಯದೇ ಯಾರೂ ಸಂಪೂರ್ಣ ಜ್ಞಾನಿ ಆಗಲಾರನು. ದೇವರ ಜ್ಞಾನವನ್ನು ತಿಳಿಯಬೇಕೆಂದರೆ, ಪರಮಾತ್ಮನನ್ನು ಕುರಿತು ತಿಳಿಯಬೇಕು. ಪರಮಾತ್ಮನನ್ನು ಕುರಿತು ತಿಳಿಯಬೇಕೆಂದರೆ, ಮೊದಲು ಆತ್ಮನನ್ನು ಕುರಿತು ತಿಳಿಯಬೇಕು. ಆತ್ಮನನ್ನು ಕುರಿತು ತಿಳಿಯಬೇಕೆಂದರೆ, ಮೊದಲು ಜೀವಾತ್ಮನನ್ನು ಕುರಿತು ತಿಳಿದಿರಬೇಕು. ಈ ಕಾಲದಲ್ಲಿ ನಾವು ಜ್ಞಾನದಲ್ಲಿ, ಪ್ರಮುಖರು ಎನ್ನುವವರಿಗೆಲ್ಲರಿಗು ತಾನು ಜೀವಾತ್ಮನೆನ್ನುವ ವಿಷಯವು ಸಹ ತಿಳಿಯದು. ಒಂದುವೇಳೆ ತಾನು ಜೀವಾತ್ಮ ಎಂದು ತಿಳಿದರೂ ತಾನು ಶರೀರದಲ್ಲಿ ಎಲ್ಲಿರುವುದು, ಏನು ಮಾಡುತ್ತಿರುವುದು, ಹೇಗೆ ಬದುಕುತ್ತಿರುವುದು ತಿಳಿಯದು. ಕೆಲವರು ಜೀವಾತ್ಮ ದೇವರು ಶರೀರದಲ್ಲೇ ಇದ್ದಾರೆಂದು ಹೇಳಿದರೂ, ಎರಡನೆ ಆತ್ಮವೊಂದರ ವಿಷಯವೇ ಅವರಿಗೆ ತಿಳಿಯದು.

ಬಹಳ ಜನ ನಾವು ಜ್ಞಾನಿಗಳೆನ್ನುವವರೆಲ್ಲರೂ, ಶರೀರದಲ್ಲಿನ ಆತ್ಮಗಳ ವಿಷಯಗಳ ತಂಟೆಗೆ ಹೋಗದೆ ಗ್ರಂಥಪಠನ ಮಾಡಿ, ಅದರಲ್ಲಿನ ವಾಕ್ಯಗಳೆಲ್ಲವನ್ನು ತಮಗಿರುವ ಜ್ಞಾಪಕಶಕ್ತಿಯಿಂದ ಧಾರಾಳವಾಗಿ ಹೇಳುತ್ತಾ, ಇತರರ ದೃಷ್ಠಿಯಲ್ಲಿ ಜ್ಞಾನವನ್ನು ದೊಡ್ಡದಾಗಿ ತಿಳಿದವರಾಗಿ ಗುರುತು ಹೊಂದುತ್ತಿದ್ದಾರೆ. ಅಂತವರು ಎಲ್ಲಾ ಮತಗಳಲ್ಲಿಯೂ ಹೆಚ್ಚಾಗಿದ್ದು ಗುರುಗಳಾಗಿ, ಜ್ಞಾನಿಗಳಾಗಿ ಹೆಸರು ಪಡೆದಿದ್ದಾರೆ. ಕೆಲವರಾದರೆ ತಮ್ಮ ಮತಗ್ರಂಥಗಳನ್ನೇ ಅಲ್ಲದೆ, ಇತರ ಮತ ಗ್ರಂಥಗಳನ್ನು ಸಹ ಚೆನ್ನಾಗಿ ಕಲಿತು, ಅವರ ಮನಸ್ಸಿಗಿರುವ ಜ್ಞಾನಪಕಶಕ್ತಿಯಿಂದ ಸುಲಭವಾಗಿ ಪುನಃ ಹೇಳುತ್ತಿದ್ದಾರೆ. ಗ್ರಂಥಗಳಲ್ಲಿನ ವಾಕ್ಯಗಳನ್ನು ಸಂದರ್ಭಾನುಸಾರವಾಗಿ ಹೇಳುವುದು ವಿಶೇಷವೇ ಆದರೂ, ಪ್ರಜೆಗಳ ದೃಷ್ಠಿಯಲ್ಲಿ ದೊಡ್ಡವಕ್ತರಾಗಿ ಕಾಣಿಸಿದರೂ, ಅದರಿಂದ ಸಮಾಜದಲ್ಲಿ ಗೌರವ ಲಭಿಸಿದರೂ, ಅವರದು ಗ್ರಂಥಗಳಲ್ಲಿನ ಸ್ಥೂಲಜ್ಞಾನವೇ ಆಗುತ್ತದೆ ಆದರೆ, ಸೂಕ್ಷ್ಮ ಜ್ಞಾನವಲ್ಲ. ಸ್ಥೂಲಜ್ಞಾನದಲ್ಲಿ ಶಕ್ತಿ ಇರುವುದಿಲ್ಲ. ಸೂಕ್ಷ್ಮಜ್ಞಾನದಲ್ಲೇ ಜ್ಞಾನಶಕ್ತಿ ಇರುತ್ತದೆ. ಸ್ಕೂಲಿಗೆ ಹೋಗುವವನು ಪ್ರತಿ ದಿನ ಹಾಜರಾತಿಗೋಸ್ಕರ ಹೋದರೂ ಪ್ರಯೋಜನವಿಲ್ಲ. ಕೆಲವು ದಿನಗಳು ಹಾಜರು ಇಲ್ಲದಿದ್ದರೂ ಪರೀಕ್ಷೆಯಲ್ಲಿ ಮಾರ್ಕ್ಸ್ ಬರುವುದು ಮುಖ್ಯ. ಹಾಗೇ ಸ್ಥೂಲ ಜ್ಞಾನವಾದ ಗ್ರಂಥಪಠನೆ, ಅದನ್ನು ತಿರುಗಿ ಹೇಳುವುದು ಸ್ಕೂಲಿನಲ್ಲಿ ಹಾಜರಂತದ್ದು. ಸೂಕ್ಷ್ಮಜ್ಞಾನವಾದ ಆತ್ಮಗಳ ವಿವರ ತಿಳಿಯುವುದು ಪರೀಕ್ಷೆಯಲ್ಲಿ ಒಳ್ಳೆ ಅಂಕಗಳು ಬರುವಂತದ್ದು.

ಮೂಲ ಗ್ರಂಥಗಳಲ್ಲಿ ಸ್ಥೂಲ, ಸೂಕ್ಷ್ಮ ಜ್ಞಾನವೇನು? ಸ್ಥೂಲವೆಷ್ಟು ಸೂಕ್ಷ್ಮವೆಷ್ಟು ಇರುತ್ತದೆಂದು ಪ್ರಶ್ನಿಸಿದರೇ ಅದಕ್ಕೆ ಸಮಾಧಾನ ಹೀಗೆ ಹೇಳಿಕೊಳ್ಳೋಣ. ಸೃಷ್ಠಿ ತಯಾರಾದಾಗ ದೇವರಿಂದ ಒಂದು ಭಾಗ ಪ್ರಕೃತಿಯಾಗಿ ಬೇರೆಯಾದಾಗ, ಮೂರು ಭಾಗಗಳಾಗಿ ದೇವರು ಬೇರೆಯಾಗಿದ್ದಾನೆ. ದೇವರು ಈ ವಿಧವಾಗಿ ಆದಿಯಲ್ಲಿ ನಾಲ್ಕು ಭಾಗಗಳಾಗಿ ಬೇರೆಯಾಗಿದ್ದಾನೆಂದು ತಿಳಿಯುತ್ತಿದೆ. ಒಂದು ಭಾಗವಾದ ಪ್ರಕೃತಿ ಸ್ಥೂಲವಾಗಿ ಕಾಣಿಸುತ್ತದೆ. ಉಳಿದ ಮೂರು ಭಾಗಗಳಾದ ಮೂರು ಆತ್ಮಗಳು ಸೂಕ್ಷ್ಮವಾಗಿ ಕಾಣಿಸದೇ ಇವೆ.

ಇದನ್ನನುಸರಿಸಿ ದೇವರು ನಾಲ್ಕು ಅಂಶಗಳಲ್ಲಿ ಒಂದು ಸ್ಥೂಲವಾದ ಪ್ರಕೃತಿಯಾದಾಗ, ಮೂರು ಸೂಕ್ಷ್ಮವಾದ ಆತ್ಮಗಳಾಗಿವೆ ಅಲ್ಲವೆ! ಅದರ ಪ್ರಕಾರವೇ ದೇವರ ಗ್ರಂಥ ಯಾವ ಮತದಲ್ಲಿ ತಯಾರಾದರೂ, ಅದು ನಾಲ್ಕು ಅಂಶಗಳಾಗಿ ಇರುತ್ತಾ ಅದರಲ್ಲಿ ಒಂದು ಭಾಗ ಸ್ಥೂಲವನ್ನು ಕುರಿತು, ಉಳಿದ ಮೂರು ಭಾಗಗಳು ಸೂಕ್ಷ್ಮವನ್ನು ಕುರಿತು ಇರುತ್ತದೆ. ಉದಾಹರಣೆಗೆ ಇಂದೂಗಳ ಮೂಲ ಗ್ರಂಥವಾದ ಭಗವದ್ಗೀತೆಯಲ್ಲಿ ಒಂದು ಭಾಗ ಸ್ಥೂಲವಾದ ಪ್ರಕೃತಿಯನ್ನು ಕುರಿತು, ಪ್ರಕೃತಿಯಲ್ಲಿ ತಯಾರಾದ ಶರೀರವನ್ನು ಕುರಿತು ಇರುವಾಗ, ಮೂರು ಭಾಗಗಳು ಕ್ಷರ, ಅಕ್ಷರ, ಪುರುಷೋತ್ತಮ ಎನ್ನುವ ಮೂರು ಆತ್ಮಗಳನ್ನು ಕುರಿತು ಇದೆ. ಹಾಗೇ ಕ್ರೈಸ್ತವರ ಬೈಬಲ್‌ನಲ್ಲಿ ನಾಲ್ಕು ಸುವಾರ್ತೆಗಳಲ್ಲಿಯೂ, ಮುಸ್ಲೀಮ್‌ರ ಖುರಾನ್ ಗ್ರಂಥದಲ್ಲಿಯೂ ಮೂರು ಭಾಗಗಳು ಸೂಕ್ಷ್ಮಜ್ಞಾನ, ಒಂದು ಭಾಗ ಸ್ಥೂಲಜ್ಞಾನವಿದೆ. ನಮ್ಮ ದೃಷ್ಠಿಯಲ್ಲಿ ಕ್ರೈಸ್ತವರಿಗೆ ದೇವರು ಹೇಳಿದ ಬೈಬಲ್ ಕೇವಲ ಮತ್ತಾಯ, ಮಾರ್ಕ, ಲೂಕಾ, ಯೋಹಾನು ಎನ್ನುವ ನಾಲ್ಕು ಸುವಾರ್ತೆಗಳೆ. ಕ್ರೈಸ್ತವರು ಎಲ್ಲರೂ ಅಂದುಕೊಂಡ ಹಾಗೆ 66 ಪಾಠಗಳನ್ನಲ್ಲದೇ ಅದರಲ್ಲಿ ನಾಲ್ಕು ಪಾಠಗಳನ್ನೇ ಹೇಳುತ್ತಿದ್ದೇವೆ. ಆದ್ದರಿಂದ ಅವರು ಸ್ಥೂಲ ಸೂಕ್ಷ್ಮ ಜ್ಞಾನಗಳನ್ನು ಕುರಿತು ಪ್ರಶ್ನಿಸದೆ ಹೋಗಬಹುದು. ಮುಸ್ಲೀಮರು ಮಾತ್ರ ನಮ್ಮ ಗ್ರಂಥಗಳಲ್ಲಿ ನೀವು ಹೇಳಿದಹಾಗೆ ಸೂಕ್ಷ್ಮ ಜ್ಞಾನ ಎಲ್ಲಿಯೂ ಕಾಣಿಸಲಿಲ್ಲವೇ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ಪವಿತ್ರ ಖುರಾನ್ ಗ್ರಂಥಗಳಲ್ಲಿ “ಆಲೀ ಇಮ್ರಾನ್” ಎನ್ನುವ ಮೂರನೆ ಸುರಾದಲ್ಲಿ ಏಳನೆ ಆಯತ್‌ನಲ್ಲಿ ಹೀಗೆ ಇದೆ. “ಈ ಗ್ರಂಥವನ್ನು ಸೃಷ್ಠಿ ಮಾಡಿದವನು ದೇವರೇ. ಈ ಗ್ರಂಥದಲ್ಲಿ ಎರಡು ವಿಧಗಳ ಆಯತ್‌ಗಳು ಇವೆ. ಮೊದಲನೆಯವು **“ಮುಹ್ಕಮಾತ್” (ಸ್ಪಷ್ಟವಾದ)** ವಾಕ್ಯಗಳಿವೆ. ಇವು ಗ್ರಂಥಕ್ಕೆ ಬುನಾದಿಗಳಂತಹವು. ಎರಡನೆಯವು **‘ಮುತಷಾಬಿಹಾತ್’ (ಅಸ್ಪಷ್ಟವಾದ)** ವಾಕ್ಯಗಳು. ವಕ್ರ ಮನಸ್ಕರು ಕಲಬೆರಕೆ ಮಾಡುವುದಕ್ಕೆ, ಅಸ್ಪಷ್ಟವಾದ ವಿಷಯಗಳಿಗೆ ವಕ್ರಭಾವಗಳು ಹೇಳುವ ಪ್ರಯತ್ನ ಮಾಡುತ್ತಿರುತ್ತಾರೆ. ಆದರೆ ಅವುಗಳ ಅಸಲಾದ ಅರ್ಥ ಅಲ್ಲಾಹ್ ಬಿಟ್ಟರೆ ಮತ್ಯಾರಿಗೂ ತಿಳಿಯದು. ಜ್ಞಾನದಲ್ಲಿ ಪರಿಪಕ್ವತೆ

ಇರುವವರು ಮಾತ್ರ "ನಾವು ಇವನ್ನು ವಿಶ್ವಸಿದ್ದೇವೆ, ಇವೆಲ್ಲಾ ನಮ್ಮ ದೇವರಿಂದ ಬಂದಿರುವವೇ" ಎಂದು ಅನ್ನುತ್ತಾರೆ. ವಾಸ್ತವಕ್ಕೆ ಬುದ್ಧಿಗ್ರಾಹಿತಶಕ್ತಿ ಇರುವವರು ಮಾತ್ರವೇ ಹಿತ ಬೋಧನೆಯನ್ನು ಗ್ರಹಿಸುತ್ತಾರೆ.

ಇಲ್ಲಿ ಮುಖ್ಯವಾಗಿ ಹೇಳುವುದೇನೆಂದರೆ! ಖುರಾನ್ ಗ್ರಂಥದಲ್ಲಿ ಸ್ಥೂಲವಾದವುಗಳನ್ನು ಮುಹ್ಕಮಾತ್ ವಾಕ್ಯಗಳೆಂದು, ಸೂಕ್ಷ್ಮವಾದವುಗಳನ್ನು ಮುತಷಾಬಿಹಾತ್ ವಾಕ್ಯಗಳೆಂದು ಎರಡು ವಿಧಗಳ ಹೆಸರುಗಳಿಟ್ಟು ಹೇಳುವುದು ನಡೆದಿದೆ. ದೇವರಿಂದ ಮೊದಲು ತಯಾರಾದ ಪ್ರಕೃತಿ ಅದೇ ಮುಹ್ಕಮಾತ್ (ಸ್ಥೂಲ) ಎಂದು ಹೇಳಲಾಗಿದೆ. ಮೊದಲು ತಯಾರಾಗಿರುವುದು ಬುನಾದಿ ಯಂತದ್ದು, ಅದರಮೇಲೆಯೇ ಕಟ್ಟಡವನ್ನು ಕಟ್ಟಿದಹಾಗೆ ಪ್ರಕೃತಿಯಿಂದ ತಯಾರಾದ ಶರೀರವನ್ನು ಆಧಾರಮಾಡಿಕೊಂಡು ಅದರಲ್ಲಿ ಮೂರು ಆತ್ಮಗಳನ್ನು ಪ್ರತಿ ಒಬ್ಬರಲ್ಲಿಯೂ ಇರಿಸುವುದು ನಡೆದಿದೆ. ಮೂರನೇ ಸುರಾ ಆಲೀ ಇಮ್ರಾನ್‌ನಲ್ಲಿ ಏಳನೇ ಆಯತ್‌ನಲ್ಲಿ ಹೇಳಿದಹಾಗೆ ಖುರಾನ್ ಗ್ರಂಥದಲ್ಲಿ ಸಹ ಸ್ಥೂಲ ಸೂಕ್ಷ್ಮ ಜ್ಞಾನ ವಿಷಯಗಳಿರುವವೆಂದು ತಿಳಿದುಹೋಗಿದೆ. ಈ ವಿಧವಾಗಿ ಮೂರು ಮೂಲ ಗ್ರಂಥಗಳು ದೇವರನ್ನು ಕುರಿತು ಹೇಳಿರುವವೇ, ಆದ್ದರಿಂದ ದೇವರು ಒಂದು ಪಾಲು ಸ್ಥೂಲವಾಗಿ, ಮೂರು ಪಾಲು ಸೂಕ್ಷ್ಮವಾಗಿ ಇರುವುದರಿಂದ, ಆತನ ಗ್ರಂಥಗಳಲ್ಲಿ ಎಲ್ಲಾದರೂ ಒಂದು ಮೂರು ನಿಷ್ಪತ್ತಿಗಳಲ್ಲಿ ಸ್ಥೂಲ ಸೂಕ್ಷ್ಮಗಳಿವೆಯೆಂದು ಹೇಳಬಹುದು. ಆದರೇ ಮೂಲ ಗ್ರಂಥಗಳಲ್ಲಿನ ಸೂಕ್ಷ್ಮ ವಿಷಯಗಳು ದೇವರಿಗೆ ಹೊರತು ಇತರರಿಗೆ ಯಾರಿಗೂ ತಿಳಿಯವು ಎಂದು ಸಹ ಖುರಾನ್ ಗ್ರಂಥದಲ್ಲಿ ಹೇಳಲಾಗಿದೆ. ವಕ್ರ ಬುದ್ಧಿ ಇರುವವರು ಸೂಕ್ಷ್ಮವಾದ ವಿಷಯಗಳನ್ನು ಹೇಳುವುದಕ್ಕೆ ಪ್ರಯತ್ನಿಸುತ್ತಾರೆ. ಆದ್ದರಿಂದ ವಕ್ರ ಭಾವ ಹೊರಗೆ ಬಂದು ಪ್ರಜೆಗಳಲ್ಲಿ ನಿನ್ನ ದೇವರು ನನ್ನ ದೇವರು ಎಂದು, ನಿನ್ನ ಮತ ನನ್ನ ಮತ ಎಂದು ಹಚ್ಚಿ ಕೊಡುತ್ತಾರೆ ಹೊರತು ಪ್ರಜೆಗಳಿಗೆ ಜ್ಞಾನ ತಿಳಿಯುವುದಿಲ್ಲ. ಬುದ್ಧಿ ಇರುವವರು ಸೂಕ್ಷ್ಮವಾದ ವಿಷಯಗಳನ್ನು ಕುರಿತು ತಾವು ಹೇಳುವುದಕ್ಕೆ ಹೋಗುವುದಿಲ್ಲ. ಬುದ್ಧಿವಂತರು ಕೇಳಿ ಗ್ರಹಿಸಿಕೊಳ್ಳಬಲ್ಲರು

ಎಂದು ಇದೆ ಅಲ್ಲವೆ! ಆದರೇ ಇಲ್ಲಿ ಒಂದು ದೊಡ್ಡ ಪ್ರಶ್ನೆ ಬರಬಹುದು. ಅದೇನೆಂದರೆ! ಮೂಲ ಗ್ರಂಥದಲ್ಲಿಯೂ ಮೂರರಷ್ಟು ಸೂಕ್ಷ್ಮ ವಾಕ್ಯಗಳನ್ನು ಕುರಿತು ದೇವರಿಗೆ ಹೊರತು ಯಾರಿಗೂ ತಿಳಿಯದೆ ಇರುವಾಗ, ಒಂದು ವೇಳೆ ಯಾರಾದರೂ ಅವುಗಳನ್ನು ಕುರಿತು ಹೇಳುವುದಕ್ಕೆ ಹೋದರೆ, ಅವರು ವಕ್ರಬುದ್ಧಿಯಿಂದ ತಪ್ಪು ಭಾವಗಳನ್ನು ಹೇಳುವ ಅವಕಾಶವಿರುವಾಗ, ಬುದ್ಧಿಯಲ್ಲಿ ಜ್ಞಾನದಲ್ಲಿ ಪರಿಪಕ್ವತೆ ಹೊಂದಿದವರು ಸೂಕ್ಷ್ಮ ವಿಷಯಗಳನ್ನು ಹೇಗೆ ಗ್ರಹಿಸಬಲ್ಲರು? ಒಳ್ಳೆ ಬುದ್ಧಿ ಇರುವವರು ಸೂಕ್ಷ್ಮವಾಕ್ಯಗಳ ಜ್ಞಾನವನ್ನು ಗ್ರಹಿಸಿಕೊಳ್ಳುವುದಕ್ಕೆ ಆ ವಾಕ್ಯಗಳನ್ನು ಕುರಿತು ದೇವರೇ ಹೇಳಬೇಕಲ್ಲ! ಎಂದು ಕೇಳಬಹುದು. ಅದಕ್ಕೆ ಉತ್ತರ ಹೀಗೆ ಇದೆ.

ಸಂದರ್ಭಾನುಸಾರವಾಗಿ ಈ ಪ್ರಶ್ನೆ ಬಹಳ ಸಮಂಜಸವಾದದ್ದು. ವಿಚಕ್ಷಣಾ ಬುದ್ಧಿ ಇರುವವರು ಯಾರಾದರೂ ಈ ಪ್ರಶ್ನೆ ಕೇಳಬಹುದು. ದೇವರು ಹೇಳಿದಾಗಲೇ ಸೂಕ್ಷ್ಮವಾದ ಜ್ಞಾನ ಮನುಷ್ಯರಿಗೆ ತಿಳಿಯಬೇಕೆ ಹೊರತು, ಮನುಷ್ಯರು ಯಾರೂ ಹೇಳುವುದಕ್ಕೆ ಅವಕಾಶವಿಲ್ಲ. ಏಕೆಂದರೆ ಸೂಕ್ಷ್ಮ ಜ್ಞಾನ ದೇವರಿಗೊಬ್ಬರಿಗೇ ಹೊರತು ಇತರರಿಗೆ ತಿಳಿಯದು, ಆದ್ದರಿಂದ ದೇವರೇ ಹೇಳಬೇಕು ಎಂದು ನಾವು ಹೇಳಿಕೊಳ್ಳುತ್ತಿದ್ದೇವೆ. ಆದರೇ ಮುಸ್ಲೀಮ್ ಸಮಾಜ ದಲ್ಲಿ ದೇವರು ಭೂಮಿ ಮೇಲೆಗೆ ಬರುವುದಿಲ್ಲವೆಂದು, ಕಾಣಿಸಿ ಮಾತನಾಡುವ ವನು ಯಾರೂ ದೇವರಲ್ಲವೆಂದು, ದೇವರೊಂದಿಗೆ ಸಮಾನವಾಗಿ ಯಾರನ್ನೂ ಹೋಲಿಸಿಕೊಳ್ಳಬಾರದೆಂದು ಅವರ ವಾದನೆ ಇದೆ. ಅವರ ವಾದದೊಂದಿಗೆ ನಾವು ಸಹ ಪೂರ್ತಿಯಾಗಿ ಏಕೀಭವಿಸುತ್ತೇವೆ. ಆದರೇ ದೇವರ ವಾಕ್ಯವಾದ ಖುರಾನ್ ಗ್ರಂಥದಲ್ಲಿನ ಮೂರನೆ ಸುರಾ, ಏಳನೇ ಆಯತ್‌ನಲ್ಲಿನ ವಾಕ್ಯವನ್ನು ಪೂರ್ತಿಯಾಗಿ ವಿಶ್ಲೇಷಿಸಿ ನೋಡಿದರೆ ವಾಕ್ಯವನ್ನು ಹೇಳುವವನು, ವಾಕ್ಯವನ್ನು ಕೇಳಿ ಗ್ರಹಿಸುವವನು, ವಾಕ್ಯವನ್ನು ತಿಳಿದವನು ಮೂವರಿದ್ದಾರೆ. ವಾಕ್ಯವನ್ನು ತಿಳಿದವನು ಪೂರ್ತಿಯಾಗಿ ದೇವರೆಂದೇ ತಿಳಿದುಹೋಗಿದೆ. ವಾಕ್ಯವನ್ನು ಕೇಳಿ ತಿಳಿದುಕೊಳ್ಳುವವನು ಶ್ರದ್ಧೆಯಿರುವ ಬುದ್ಧಿ ಇರುವವನು. ವಾಕ್ಯವನ್ನು

ಹೇಳಬೇಕೆಂದು ಪ್ರಯತ್ನಿಸುವವನು ವಕ್ರ ಬುದ್ಧಿ ಇರುವವನೆಂದು ತಿಳಿದು ಹೋಗಿದೆ. ಆದರೆ ಪ್ರಸ್ತುತ ಕಾಲದಲ್ಲಿ ಖುರಾನ್ ಗ್ರಂಥವನ್ನು 114 ಅಧ್ಯಾಯಗಳೊಂದಿಗೆ (114 ಸುರಾಗಳಲ್ಲಿ) ನಾವು ನೋಡಬಹುದು. 114 ಸುರಾಗಳಲ್ಲಿನ ಎಲ್ಲಾ ಆಯತ್‌ಗಳಿಗು ವಿವರವನ್ನು ಹೇಳಿದ ಗ್ರಂಥವನ್ನು ನಾವು ನೋಡುತ್ತಿದ್ದೇವೆ. ಆದರೆ ಮೇಲಿನ ವಾಕ್ಯಗಳಲ್ಲಿನ ವಿಶ್ಲೇಷಣ ಪ್ರಕಾರ ನೋಡಿದರೆ ಈಗ ನಮ್ಮ ಮುಂದಿರುವ ಗ್ರಂಥಗಳಲ್ಲಿನ ವಾಕ್ಯಗಳು ದೇವರವೇ ಆದರೂ ಅದರಲ್ಲಿನ ವಿವರ ಮಾತ್ರ ಮನುಷ್ಯರು ಬರೆದಿರುವುದೇ. ಆದ್ದರಿಂದ ದೇವರ ವಾಕ್ಯವನ್ನು ನೋಡು. ಅದು ನಿನಗೆ ಅರ್ಥವಾಗದಿದ್ದರೂ ಫರವಾಗಿಲ್ಲ. ಆದರೇ ವಾಕ್ಯಕ್ಕೆ ಬರೆದಿರುವ ವಿವರವನ್ನು ಮಾತ್ರ ನೋಡಬೇಡ. ಏಕೆಂದರೆ ದೇವರ ವಾಕ್ಯವೊಂದರ ವಿವರ ದೇವರಿಗೆ ಬಿಟ್ಟು ಇತರ ಮನುಷ್ಯರಿಗೆ ಯಾರಿಗೂ ತಿಳಿಯದು. ಅದನ್ನು ಕುರಿತು ಹೇಳುವುದಕ್ಕೆ ಪ್ರಯತ್ನಿಸಿದವರೆಲ್ಲರೂ ವಕ್ರಬುದ್ಧಿ ಇರುವವರೇ, ಅವರ ವಕ್ರ ಭಾಷ್ಯಗಳಿಂದ ಪ್ರಜೆಗಳಲ್ಲಿ ಬೇದ ಭಾವಗಳು ಉಂಟಾಗುತ್ತವೆಂದು ಮೊದಲೇ ಹೇಳಲಾಗಿದೆ. ಆದ್ದರಿಂದ ಗ್ರಂಥದಲ್ಲಿನ ವಾಕ್ಯವನ್ನು ನೋಡು, ಅದರ ಭಾವವನ್ನು ನೋಡುವುದರಲ್ಲಿ ಜಾಗ್ರತೆಯನ್ನು ವಹಿಸು. ಈ ಸೂಚನೆ ಒಂದು ಖುರಾನ್ ಗ್ರಂಥಕ್ಕೆ ಮಾತ್ರವೇ ಹೇಳಿರುವುದಲ್ಲ. ದೇವರ ಗ್ರಂಥಗಳೆಲ್ಲವುಗಳಿಗೂ ಅನ್ವಯಿಸುತ್ತದೆ. ಈ ಲೆಕ್ಕ ಪ್ರಕಾರ ಹಿಂದೂಗಳು (ಇಂದೂಗಳು) ಭಗವದ್ಗೀತೆಯನ್ನು ನೋಡಿದಾಗ, ಖುರಾನ್ ಗ್ರಂಥದಲ್ಲಿ ಮೂರನೆ ಸುರಾದಲ್ಲಿ ಹೇಳಿದ ಏಳನೆ ವಾಕ್ಯವನ್ನು ಜ್ಞಾಪಕದಲ್ಲಿಟ್ಟುಕೊಂಡು ನೋಡಬೇಕು. ದೇವರ ಶ್ಲೋಕ ಸತ್ಯವೇ ಆದರೂ, ಮನುಷ್ಯ ಬರೆದಿರುವ ಭಾವ ದೇವರದಲ್ಲ. ಹಾಗೇ ಬೈಬಲ್ ಗ್ರಂಥದಲ್ಲಿ ಯೇಸು ಪ್ರಭು ಹೇಳಿದ ವಾಕ್ಯವನ್ನು ಮಾತ್ರ ನೋಡು. ಆದರೇ ಮನುಷ್ಯರು ಆ ವಾಕ್ಯಕ್ಕೆ ಹೇಳಿರುವ ವಿವರವನ್ನು ಕೇಳಬೇಡ. ಈಗ ಕೆಲವರಲ್ಲ ಬಹಳ ಜನ ಹೀಗೆ ಪ್ರಶ್ನಿಸಬಹುದು. “ನೀವು ಹೇಳಿದಹಾಗೆ ವಾಕ್ಯವನ್ನು ಮಾತ್ರ ನೋಡಿ ಅದರ ಭಾವವನ್ನು ನಂಬದೇ ಹೋದರೇ, ದೇವರ ವಾಕ್ಯದಲ್ಲಿನ ನಿಗೂಢವಾದ ಜ್ಞಾನ ನಮಗೆ ಹೇಗೆ ತಿಳಿಯುತ್ತದೆ? ಮೂಲ ಗ್ರಂಥಗಳೊಳಗಿನ ದೇವರ ವಾಕ್ಯಗಳೆಲ್ಲವುಗಳಿಗೂ

ಮನುಷ್ಯರೇ ವಿವರವನ್ನು ಹೇಳಿದ್ದಾರಲ್ಲವೆ! ಅವರು ಹೇಳಿರುವುದು ಸರಿಯಾದ ಭಾವವಲ್ಲವೆಂದುಕೊಂಡರೇ, ಗ್ರಂಥದಲ್ಲಿ 75%ರಷ್ಟು ಅಸತ್ಯವಿದ್ದಹಾಗಾಗುತ್ತದೆ. ಅಂತಹದರಲ್ಲಿ ದೇವರ ಜ್ಞಾನ ಹೇಗೆ ತಿಳಿಯುತ್ತದೆ? ಎಂದು ಪ್ರಶ್ನಿಸಬಹುದು. ಅದಕ್ಕೆ ನನ್ನ ಉತ್ತರವೇನೆಂದರೆ! ನಾನು ನಿಮಗು ದೇವರ ವಾಕ್ಯಕ್ಕೂ ಮಧ್ಯೆವರ್ತಿ ಮಾತ್ರವೇ, ದೇವರು ಹೇಳಿದ ವಿಷಯವನ್ನೇ ನಾನು ಹೇಳಿದ್ದೇನೆ ಹೊರತು ಸ್ವತಃವಾಗಿ ನಾನು ಏನೂ ಹೇಳಲಿಲ್ಲವಲ್ಲ! ದೇವರ ವಾಕ್ಯ ದೇವರಿಗೇ ತಿಳಿದರೇ ನಮಗೆ ಹೇಗೆ ತಿಳಿಯುತ್ತದೆ? ಎಂದು ಪ್ರಶ್ನಿಸಿದರೇ ನಾನಾದರೂ ಉತ್ತರ ಹೇಗೆ ಹೇಳಬಲ್ಲೆನು. ನಿಮ್ಮ ಮಾತಿಗೆ ದೇವರೇ ಉತ್ತರವನ್ನು ಹೇಳಬೇಕು, ಆದರೆ ನಾವು ಒಂದು ವೇಳೆ ಹೇಳಿದರೂ ಅದು ಸರಿಯಾದ ಉತ್ತರ ಆಗದೆ ಇರಬಹುದು.

ನನ್ನ ಅನಿಸಿಕೆ ಪ್ರಕಾರ ಖುರಾನ್ ಗ್ರಂಥದಲ್ಲಿ ಮೂರನೆ ಸುರಾ, ಏಳನೆ ಆಯತ್‌ನಲ್ಲಿಯೇ ಕೊನೆಯಲ್ಲಿ ಒಂದು ಮಾತು ಇದೆ. ಬುದ್ಧಿಯಲ್ಲಿ ಪರಿಪಕ್ವತೆ ಹೊಂದಿದವರು, ಪೂರ್ತಿ ದೇವರ ಜ್ಞಾನದ ಮೇಲೆ ಶ್ರದ್ಧೆ ಇರುವವರು ಮಾತ್ರ ದೇವರ ವಾಕ್ಯಗಳು ದೇವರಿಂದ ಬಂದಿರುವವೇ ಎಂದು ವಿಶ್ವಾಸಿಸಿ ಅವುಗಳನ್ನು ಗ್ರಹಿಸಬಲ್ಲರೆಂದು ಇದೆ. ಮನುಷ್ಯರು ಬರೆದ ಗ್ರಂಥದ ವಿವರ ಸರಿಇಲ್ಲದಿರುವಾಗ ನಮಗೆ ವಾಕ್ಯಗಳಲ್ಲಿನ ಅಥವಾ ಶ್ಲೋಕಗಳಲ್ಲಿನ ಅಸಲು ವಿವರ ಹೇಗೆ ತಿಳಿಯುತ್ತದೆ ಎನ್ನುವ ಪ್ರಶ್ನೆಗೆ ದೇವರೇ ಬಂದು ಹೇಳಬೇಕಾಗಿದ್ದೇ ಎಂದು ಹೇಳಬಲ್ಲೆವು. ದೇವರು ಇಳಿದು ಬರುತ್ತಾನಾ ಎಂದರೆ ಭಗವದ್ಗೀತೆ ಗ್ರಂಥದಲ್ಲಿ ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ 6, 7, 8 ಶ್ಲೋಕಗಳಲ್ಲಿ ಧರ್ಮಗಳನ್ನು ತಿಳಿಸುವುದಕ್ಕೆ ಮನುಷ್ಯನಾಗಿ ಜನ್ಮಿಸುತ್ತೇನೆಂದು ಹೇಳಿದ್ದಾನೆ. ಖುರಾನ್ ಗ್ರಂಥದಲ್ಲಿ 89ನೇ ಸುರಾ ಅಲ್‌ಫಜ್ರಲ್ 22, 23, 24 ಸುರಾಗಳಲ್ಲಿ ಈ ವಿಧವಾಗಿ ಇದೆ "22) ದೇವದೂತರು ಸಾಲು ಸಾಲಾಗಿ ನಿಂತಿರುವಾಗ ದೇವರು ಅಗಮಿಸುತ್ತಾನೆ (ಬರುತ್ತಾನೆ). 23) ನರಕವನ್ನು ಸಹಿತ ತಂದ ಆ ದಿನ ಮನುಷ್ಯನಿಗೆ ಜ್ಞಾನೋದಯವಾಗುತ್ತದೆ. ಆದರೇ ಆ ದಿನ ಜ್ಞಾನ ತಿಳಿದು

ಏನು ಲಾಭ? 24) ಅಯ್ಯೋ! ನಾನು ಪರಲೋಕಕ್ಕಾಗಿ ಮುಂಚೆಯೇ ಜಾಗ್ರತೆಯಾಗಿದ್ದು ಏನಾದರೂ ನೋಡಿಕೊಂಡಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅಂದುಕೊಳ್ಳುತ್ತಾನೆ". ಇದರ ಭಾವ ದೇವರು ಅವತರಿಸಿ ಬಂದಾಗ ಮನುಷ್ಯನಿಗೆ ಅಸಲಾದ ಜ್ಞಾನ ತಿಳಿಯುತ್ತದೆಂದು, ಆಗ ಮನುಷ್ಯ ಇಷ್ಟುಕಾಲ ಜ್ಞಾನದಲ್ಲಿ ಇಲ್ಲದೆ ಅಜ್ಞಾನ ಮಾರ್ಗದಲ್ಲಿ ನಡೆದುಕೊಂಡಿರುವುದಕ್ಕೆ ಚಿಂತಿಸಿ, ಮೊದಲೇ ಅಸಲಾದ ಜ್ಞಾನದಲ್ಲಿ ನಡೆದಿದ್ದರೇ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅಂದುಕೊಳ್ಳುತ್ತಾನೆ. ಇದೇ ವಿಧವಾಗಿ ಬೈಬಲ್ ಯೋಹಾನ್ ಸುವಾರ್ತೆಯಲ್ಲಿ ಸಹ 16ನೇ ಅಧ್ಯಾಯದಲ್ಲಿ 12, 13, 14 ವಾಕ್ಯಗಳಲ್ಲಿ ದೇವರು ಬಂದು ಪ್ರಜೆಗಳಿಗೆ ಜ್ಞಾನವನ್ನು ತಿಳಿಸುವನೆಂದು ಹೇಳಲಾಗಿದೆ. ಈ ವಿಧವಾಗಿ ಯಾವ ಮನುಷ್ಯರಿಗೂ ತಿಳಿಯದ ತನ್ನ ಗ್ರಂಥದಲ್ಲಿನ ಸೂಕ್ಷ್ಮ ಜ್ಞಾನವನ್ನು ಮನುಷ್ಯರಿಗೆ ಯಾವುದೋ ಒಂದು ಮನುಷ್ಯನಹಾಗೇ ಬಂದಿರುವ ದೇವರು ತಿಳಿಸುವನು. ಆಗ ಆತನು (ದೇವರು) ಹೇಳಿದ ಜ್ಞಾನವನ್ನು ಬುದ್ಧಿ ಇರುವವನು, ಶ್ರದ್ಧೆ ಇರುವವನು ಗ್ರಹಿಸಬಲ್ಲರು. ಹೀಗೆ ದೈವ ಗ್ರಂಥದಲ್ಲಿನ ಜ್ಞಾನವನ್ನು ನಂತರ ದೇವರೇ ತಿಳಿಸಿ, ತನ್ನ ಜ್ಞಾನವನ್ನು ಸಂಪೂರ್ಣ ಮಾಡುತ್ತಾನೆ. ಈ ಪದ್ಧತಿಯನ್ನು ಯಾರು ನಂಬಿದರೂ, ನಂಬದೆ ಹೋದರೂ ಇರುವ ಸತ್ಯ ಇಷ್ಟೇ. ಎಲ್ಲಾ ಮತಗಳಲ್ಲಿಯೂ ಇದೇ ವಿಧಾನ ನಡೆಯುತ್ತದೆ.

ಸೃಷ್ಟ್ಯಾದಿಯಲ್ಲೇ ದೇವರು ಎನ್ನುವ ಶಕ್ತಿ ತನ್ನಿಂದ ಪ್ರಕೃತಿ ಎನ್ನುವ ಒಂದು ಭಾಗವನ್ನು ವಿಭಜಿಸಿ ತಾನು ಮೂರು ಭಾಗಗಳಾಗಿ ಬೇರೆಯಾಗಿದೆ. ಆದ್ದರಿಂದ ವಿಶ್ವದಲ್ಲಿ ಪ್ರಕೃತಿ ಭಾಗ ಪರಮಾತ್ಮ ಭಾಗಗಳೆಂದು ಎರಡು ವಿಧಾನಗಳಿವೆ. ಪ್ರಕೃತಿ ಸ್ಥೂಲವಾಗಿದೆ, ಎಲ್ಲರಿಗೂ ಕಾಣಿಸುತ್ತಿದೆ. ಆದ್ದರಿಂದ ಅದನ್ನು (ಪ್ರಕೃತಿಯನ್ನು) ಕುರಿತು ತಿಳಿಯಬೇಕಾದ ಕೆಲಸವಿಲ್ಲ. ಮನುಷ್ಯ ತಿಳಿಯಬೇಕಾಗಿರುವುದು ಮೂರು ಆತ್ಮಗಳ ರೂಪದಲ್ಲಿ ಕಾಣಿಸದೆ ಇರುವ ದೈವವನ್ನು ತಿಳಿಯಬೇಕು. ದೈವವನ್ನು ತಿಳಿಯುವುದಕ್ಕೆ ದೇವರ ಜ್ಞಾನವೇ ಆಧಾರ. ದೇವರು ತನ್ನ ವಿಷಯವನ್ನು ಮೂರು ಸಿದ್ಧಾಂತಗಳ ರೂಪದಲ್ಲಿ

ತಿಳಿಸಿದ್ದಾನೆ. ಒಂದು ಅದ್ವೈತ ಸಿದ್ಧಾಂತ, ಎರಡು ದ್ವೈತ ಸಿದ್ಧಾಂತ, ಮೂರು ತ್ರೈತ ಸಿದ್ಧಾಂತ. ಅದ್ವೈತ ಸಿದ್ಧಾಂತ ಎರಡೂ ಅಲ್ಲದ ಒಂದು ಆತ್ಮವನ್ನು ಕುರಿತು ತಿಳಿಸಿದರೆ, ದ್ವೈತ ಸಿದ್ಧಾಂತ ಎರಡು ಆತ್ಮಗಳನ್ನು ಕುರಿತು ತಿಳಿಸುತ್ತಿದೆ. ಇನ್ನು ಮೂರನೆಯದಾದ ತ್ರೈತ ಸಿದ್ಧಾಂತ ಮೂರು ಆತ್ಮಗಳನ್ನು ಕುರಿತು ತಿಳಿಸುತ್ತದೆ. ಮನುಷ್ಯ ಅದ್ವೈತವನ್ನು ತಿಳಿದರೂ, ದ್ವೈತವನ್ನು ತಿಳಿದರೂ ಕೊನೆಗೆ ತ್ರೈತ ಸಿದ್ಧಾಂತವನ್ನು ತಿಳಿಯದೇ ಮೂರು ಭಾಗಗಳಾಗಿರುವ ದೈವ ತಿಳಿಯುವುದಿಲ್ಲ. ದೇವರನ್ನು ತಿಳಿಯಬೇಕೆಂದರೆ ಯಾವ ಮನುಷ್ಯನಾದರೂ ಕೊನೆಗೆ ತ್ರೈತ ಸಿದ್ಧಾಂತವನ್ನು ತಿಳಿಯಬೇಕಾಗಿದ್ದೇ. ಪ್ರಪಂಚದಲ್ಲಿ ಈ ಮಾರ್ಗ ಬಿಟ್ಟು ಮತ್ತ್ಯಾವ ಇತರ ಮಾರ್ಗವೂ ಇಲ್ಲ. ಮನುಷ್ಯ ಭಜನೆಗಳಿಂದಲೂ, ಭಕ್ತಿಯಿಂದಲೂ, ಆರಾಧನೆಗಳಿಂದಲೂ ದೇವರನ್ನು ತಿಳಿಯಲಾರನು. ಅವೆಲ್ಲಾ ನಿನ್ನನ್ನು ದೇವರಿಗೆ ಭಕ್ತನನ್ನಾಗಿ ಮಾಡಬಲ್ಲವು ಆದರೆ ದೇವರಲ್ಲಿ ಸೇರಿಸಲಾರವು. ಒಬ್ಬ ಮನುಷ್ಯ (ಒಬ್ಬ ಜೀವಾತ್ಮ) ದೇವರಲ್ಲಿ ಐಕ್ಯವಾಗಿ, ತಾನು ಸಹ ದೇವರಾಗಿ ಬದಲಾಗುವುದಕ್ಕೆ ತಪ್ಪದೆ ತ್ರೈತ ಸಿದ್ಧಾಂತ ಜ್ಞಾನವನ್ನು ತಿಳಿಯಬೇಕು. ತಿಳಿದು ಅದರ ಪ್ರಕಾರ ನಡೆಯುವುದಾದರೆ ಎಂತಹ ಪಾಪಿಯಾದರೂ, ಎಂತಹ ಅಜ್ಞಾನಿ ಆದರೂ ಸಂಪೂರ್ಣ ಜ್ಞಾನಿಯಾಗಿ ಬದಲಾಗಿ, ಪಾಪ (ಕರ್ಮ) ಇಲ್ಲದವನಾಗಿ ದೇವರಲ್ಲಿ ಸೇರಿಹೋಗುವನು.

ಆಧ್ಯಾತ್ಮಿಕ ವಿದ್ಯೆಯಲ್ಲೇ ತ್ರೈತ ಸಿದ್ಧಾಂತ ಜ್ಞಾನ ಎಷ್ಟೋ ದೊಡ್ಡ ದೆನ್ನುವುದಕ್ಕೆ ಗುರುತಾಗಿ, ದೇವರೇ ಕೆಲವು ಸೂಚನೆಗಳನ್ನು ಭೂಮಿಮೇಲೆ ಇಟ್ಟಿದ್ದಾನೆ. ಆ ಸೂಚನೆಗಳನ್ನು ಸ್ವಲ್ಪ ವಿವರವಾಗಿ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿದರೆ ಈ ವಿಧವಾಗಿ ಅರ್ಥವಾಗುತ್ತಿದೆ. ವಿಶ್ವ ಕಾಣಿಸುವ ಮತ್ತು ಕಾಣಿಸದ ಒಟ್ಟು ನಾಲ್ಕು ಭಾಗಗಳಾಗಿ ಇದೆ. ಕಾಣಿಸುವುದು ಪ್ರಪಂಚ ಅಥವಾ ಪ್ರಕೃತಿ, ಕಾಣಿಸದೆ ಇರುವವು ಮೂರು ಆತ್ಮಗಳೆಂದು ತಿಳಿಯುತ್ತಿದೆ. ಇದನ್ನನುಸರಿಸಿ ವಿಶ್ವದಲ್ಲಿ ನಡೆಯುವ ಕಾಲಕ್ಕೆ ನಾಲ್ಕು ಯುಗಗಳ ಹೆಸರುಗಳನ್ನು ಇಟ್ಟಿದ್ದಾರೆ. ವಿಶ್ವವೆಲ್ಲವೂ ದೈವದಲ್ಲಿರುವುದೇ, ಆದ್ದರಿಂದ ದೇವರು ಬೇರೆಯಾಗಿರುವ ಭಾಗಗಳು

ನೆನಪಲ್ಲಿರುವಹಾಗೆ ಕಾಲವನ್ನು ನಾಲ್ಕು ಯುಗಗಳಾಗಿ ಹೇಳಿದ್ದಾರೆ. ಕಾಲ ಎಂದರೆ ದೇವರು. ಆದ್ದರಿಂದ ದೇವರಿಂದ ಬೇರೆಯಾಗಿರುವ ಒಂದು ಪ್ರಕೃತಿ, ಮೂರು ಆತ್ಮಗಳನ್ನು ಮನುಷ್ಯರು ತಿಳಿಯುವಹಾಗೆ, ಕಾಲ ಸ್ವರೂಪನಾದ ದೇವರನ್ನು ನಾಲ್ಕು ಯುಗಗಳಾಗಿ ನಿರ್ಣಯಿಸಿದ್ದಾರೆ. ನಾಲ್ಕು ಯುಗಗಳು ದೈವಕ್ಕೆ ಮತ್ತೊಂದು ಹೆಸರಾಗಿವೆಯೆಂದು ನಮ್ಮ ರಚನೆಗಳಲ್ಲಿನ **"ಕಲಿಯುಗ"** ಎನ್ನುವ ಗ್ರಂಥದಲ್ಲಿ ಬರೆದಿದ್ದೇವೆ. ಅದನ್ನು ಇಲ್ಲಿ ಸ್ವಲ್ಪ ತಿಳಿಸುತ್ತಿದ್ದೇವೆ.

ಇಲ್ಲಿಯವರೆಗು ಬಳಕೆಯಲ್ಲಿರುವವು, ಬಹಳ ಜನರಿಗೆ ತಿಳಿದಿರುವವು ಕಾಲಗಳಲ್ಲಿ ದೊಡ್ಡವು ನಾಲ್ಕು ಯುಗಗಳು. ಅದರಲ್ಲಿ ಮೊದಲನೆಯದು ಕೃತಯುಗ, ಎರಡನೆಯದು ತ್ರೇತಾಯುಗ, ಮೂರನೆಯದು ದ್ವಾಪರಯುಗ, ನಾಲ್ಕನೆಯದು ಕಲಿಯುಗ. ಒಂದು ವಿಧವಾಗಿ ಹೇಳಿದರೆ ನಾಲ್ಕು ಯುಗಗಳ ಹೆಸರುಗಳು ಬೇರೆಬೇರೆಯಾಗಿ ಇದ್ದರೂ ಕೊನೆಯಲ್ಲಿ ಮಾತ್ರ ಯುಗಗಳಾಗಿಯೇ ಕರೆಯಲಾಗುತ್ತಿದೆ. ಕೊನೆಯಲ್ಲಿ ಯುಗಗಳನ್ನು ಬಿಟ್ಟು ನೋಡಿದರೆ ಒಂದು ಕೃತ, ಎರಡು ತ್ರೇತಾ, ಮೂರು ದ್ವಾಪರ, ನಾಲ್ಕು ಕಲಿ ಎಂದು ಹೇಳಬಹುದು. ಈ ನಾಲ್ಕು ಹೆಸರುಗಳಲ್ಲಿ ಕೊನೆಯ ದ್ವಾಪರ, ಕಲಿ ಅನ್ನುವ ಎರಡು ಹೆಸರುಗಳು ಹಿರಿಯರು ಹೇಗೆ ನಿರ್ಣಯಿಸಿದ್ದಾರೊ ಹಾಗೇ ಇವೆ. ಮೊದಲಿಗಿರುವ ಕೃತ, ತ್ರೇತಾ ಎನ್ನುವ ಎರಡು ಹೆಸರುಗಳು ಸ್ವಲ್ಪ ಬದಲಾವಣೆ ಹೊಂದಿವೆ. ಮೊದಲನೆ ಹೆಸರಾದ ಕೃತ ಎನ್ನುವ ಹೆಸರು ಪೂರ್ವದಲ್ಲಿ ಕೃತ್ ಎನ್ನುವ ಹೆಸರಾಗಿ ಇರುತ್ತಿತ್ತು. ಕೃತ್ ಎಂದರೆ ಮಾಡಿದವನು ಮಾಡಿರುವುದು ಎಂದು ಅರ್ಥ ಬರಬಲ್ಲದು. ಕೃತ ಎಂದರೆ ಮಾಡಲ್ಪಟ್ಟಿರುವುದು ಎಂದು ಅರ್ಥ ಬರುತ್ತದೆ. ಇಲ್ಲಿ ವಿಶ್ವವನ್ನು ಸೃಷ್ಟಿಸಿದ ದೇವರನ್ನು ಉದ್ದೇಶಿಸಿ ಇಟ್ಟಿರುವ ಹೆಸರು ಕೃತ್ ಎಂದು ತಿಳಿಯುತ್ತಿದೆ. ಸರ್ವಸೃಷ್ಟಿಯನ್ನು ತಯಾರು ಮಾಡಿದವನನ್ನು ಕೃತ್ ಎನ್ನುತ್ತೇವೆ. ಮಾಡಲಾಗಿರುವ ವಿಶ್ವವನ್ನು ಕೃತ ಎನ್ನುತ್ತೇವೆ. ಇಲ್ಲಿ ಇಟ್ಟಿರುವ ಹೆಸರು ಕಾಲವನ್ನು ಉದ್ದೇಶಿಸಿ ಇಟ್ಟಿರುವುದು, ವಿಶ್ವವನ್ನು ಉದ್ದೇಶಿಸಿ ಇಟ್ಟಿರುವುದು ಅಲ್ಲ. ಆದ್ದರಿಂದ ಕೃತ್ ಎನ್ನುವ ಹೆಸರು ವಾಸ್ತವವಾಗಿರುವುದೆಂದು ಅರ್ಥ

ವಾಗುತ್ತಿದೆ. ಈ ವಿಧವಾಗಿ ಕಾಲಕ್ರಮದಲ್ಲಿ ಕೃತ್‌ಯುಗ ಸ್ವಲ್ಪ ಕೃತಯುಗವಾಗಿ ಬದಲಾಗಿದೆ. ಅರ್ಥ ವಿವರ ತಿಳಿಯದವರು ಅಂಧಕಾರದಿಂದ ಕೃತಯುಗ ಅನ್ನುತ್ತಿದ್ದಾರೆ. ಸಾಮಾನ್ಯ ಪ್ರಜೆಗಳೇ ಅಲ್ಲದೆ ಜ್ಯೋತಿಷ್ಯ ಪಂಡಿತರು ಸಹ ಅರ್ಥಹೀನವಾದ ಹೆಸರೊಂದಿಗೇ ಬರೆಯುತ್ತಿದ್ದಾರೆ. ಈ ವಿಧವಾಗಿ ಮಾಯೆ ಎಲ್ಲರನ್ನು ಮೋಸಮಾಡುತ್ತಿದೆ. ಇದು ಕಾಲಕ್ಕೆ ಇಟ್ಟಿರುವ ಹೆಸರೆಂದು, ಕೃತ್‌ಯುಗವೇ ಆಗಲಿ ಕೃತಯುಗವಲ್ಲವೆಂದು ಪಂಡಿತರು ಸಹ ಗ್ರಹಿಸದಂತಿದ್ದಾರೆ.

ಇನ್ನು ಎರಡನೆ ಹೆಸರು ಸಹ ಅರ್ಥಹೀನವಾಗಿದೆಯೆಂದು ಹೇಳ ಬಹುದು. ದೇವರು ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ಹೇಳಿದಹಾಗೆ ದೇವರು ಮೂರು ಭಾಗಗಳಾಗಿ ಇದ್ದಾನೆ. ಅದನ್ನೇ ಮೂವರು ಪುರುಷರಾಗಿ ಅಲ್ಲಿ ಹೇಳುವುದು ನಡೆದಿದೆ. ಕ್ಷರ ಪುರುಷನು, ಅಕ್ಷರ ಪುರುಷನು, ಪುರುಷೋತ್ತಮನು ಎಂದು ಮೂವರು ಪುರುಷರಾಗಿ ದೇವರಿದ್ದಾನೆ. ಆ ಮೂವರು ಪುರುಷರನ್ನೇ ಜೀವಾತ್ಮ, ಆತ್ಮ, ಪರಮಾತ್ಮ ಎಂದು ಮೂರು ಆತ್ಮಗಳಾಗಿ ಸಹ ಹೇಳುತ್ತಿದ್ದೇವೆ. ದೇವರು ಹೇಳಿದ ಜ್ಞಾನವನ್ನು ಅನುಸರಿಸಿ ದೇವರ ಹಿರಿಮೆಗೆ ತಕ್ಕಹಾಗೆ ಸೂಚನೆ ಪದಗಳನ್ನು ದೇವರ ಬಗ್ಗೆ ಬಳಸುತ್ತಿದ್ದರು. ಕೃತ್ ಎಂದರೆ ಮಾಡಿದವನೆಂದು ಅರ್ಥವನ್ನು ಕೊಡುವ ಸೂಚನೆ ಪದವಾಗಲಿ ಅದು ಒಂದು ಹೆಸರಲ್ಲ. ವಾಸ್ತವವಾಗಿ ದೇವರಿಗೆ ಹೆಸರುಗಳಿರುವುದಿಲ್ಲ. ಕ್ಷರ, ಅಕ್ಷರ ಪುರುಷರಿಗಿಂತಲೂ ಉತ್ತಮವಾದವನು ಎನ್ನುವ ಸೂಚನೆಯೊಂದಿಗೆ ಪುರುಷೋತ್ತಮನು ಎಂದಿದ್ದಾರೆ. ಹಾಗೇ ಜೀವಾತ್ಮ ಆತ್ಮಗಳಿಗಿಂತಲೂ ಬೇರೆಯಾದವನು ಎನ್ನುವ ಅರ್ಥವನ್ನು ಕೊಡುವ ಪದ ದೊಂದಿಗೆ ಪರಮಾತ್ಮ ಎಂದು ಅಂದಿದ್ದಾರೆ. ಪುರುಷೋತ್ತಮ ಎಂದರೂ, ಪರಮಾತ್ಮ ಎಂದರು ಅವು ಅರ್ಥವನ್ನು ಕೊಡುವವೇ ಆಗಲಿ ಹೆಸರುಗಳು ಮಾತ್ರ ಅಲ್ಲ. ಹಾಗೇ ದೇವರು ಎಂದರೂ ಸಿಗದೇ ಇರುವವನು (ದೇವಿದರೂ) ಎಂದು ಅರ್ಥವೇಯಾಗಲಿ ಅದು ಹೆಸರಲ್ಲ. ಹಾಗೇ ಎರಡನೆ ಯುಗದ ಮುಂದೆ ದೇವರ ವಿಧಾನವನ್ನು ತಿಳಿಸುವ ಪದವನ್ನು ಉಪಯೋಗಿಸುತ್ತಾ

ತ್ರೈತಾ ಎಂದಿದ್ದಾರೆ. ತ್ರೈತಾ ಎಂದರೆ ಮೂರನೆಯದು. ದೇವರು ಮೂರನೆ ಪುರುಷನು ಅಥವಾ ಮೂರನೆ ಆತ್ಮ ಆದ್ದರಿಂದ ಕಾಲವನ್ನು ತ್ರೈತಾಯುಗ ಎಂದಿದ್ದಾರೆ. ಆದರೆ ಕಾಲಕ್ರಮದಲ್ಲಿ ಅಜ್ಞಾನ ಬೆಳೆದುಹೋಗಿ, ತ್ರೈತಾಯುಗ ಸ್ವಲ್ಪ ತ್ರೇತಾ ಯುಗವಾಗಿ ಬದಲಾಗಿದೆ. ತ್ರೇತಾ ಅಂದರೇ ಅರ್ಥವಿಲ್ಲ. ತ್ರೈತಾ ಎಂದರೆ ಮೂರನೆಯವನು ಎಂದು ಅರ್ಥವಿದೆ. ಈ ದಿನ ಜ್ಯೋತಿಷ್ಯ ಪಂಡಿತರು, ಸ್ವಾಮೀಜಿಗಳು ಎಲ್ಲರೂ ತ್ರೇತಾಯುಗವೆಂದೇ ಹೇಳುತ್ತಿದ್ದಾರೆ. ಊರೆಲ್ಲಾ ಉತ್ತರವೆಂದರೆ ನಾವೊಬ್ಬರೇ ದಕ್ಷಿಣವೆಂದ ಹಾಗೆ, ಎಲ್ಲರೂ ತ್ರೇತಾಯುಗ ಎನ್ನುತ್ತಿದ್ದರೆ ನಾವೊಬ್ಬರೆ ತ್ರೇತಾ ಅಲ್ಲ ತ್ರೈತಾ ಎಂದು ಹೇಳುತ್ತಿದ್ದೇವೆ. ಆದರೂ ಬುರಡೆ ಇಲ್ಲದ ಮನುಷ್ಯರು ಕೇಳುವ ಸ್ಥಿತಿಯಲ್ಲಿಲ್ಲ. ಈಗಾದರೂ ದೇವರ ಹಿರಿಮೆಗೂ, ವಿಧಾನಕ್ಕೂ ಭಂಗವಾಗದಂತೆ, ಅರ್ಥಹೀನವಾಗದಂತೆ ಕೃತ ಯುಗವನ್ನು ಬಿಟ್ಟು ಕೃತ್ ಯುಗವೆಂದೂ, ಹಾಗೇ ತ್ರೇತಾಯುಗವನ್ನು ತ್ರೈತಾಯುಗವೆಂದು ಕರೆಯಬೇಕೆಂದು ತಿಳಿಸುತ್ತಿದ್ದೇವೆ. ಕೃತ್ ಎನ್ನುವ ಶಬ್ದವಾಗಲಿ, ತ್ರೈತ ಎನ್ನುವ ಶಬ್ಧವಾಗಲಿ ಕಾಲಕ್ಕೆ ಪೂರ್ತಿಯಾಗಿ ಸರಿಹೋಗುತ್ತದೆಂದು ತಿಳಿಯಬೇಕು. ಕಾಲ ಕ್ರಮದಲ್ಲಿ ಅಜ್ಞಾನ ಬೆಳೆದುಹೋಗಿ ಕೆಲವು ವಿಷಯಗಳು ತಿಳಿಯದೇ ಹೋದರೂ, ಅವುಗಳನ್ನು ಕುರಿತು ವಿವರವಾಗಿ ತಿಳಿಸುವವರು ಬಂದು ತಿಳಿಸಿದಾಗ, ಅದರಲ್ಲಿನ ಸಾರಾಂಶವನ್ನು ಗ್ರಹಿಸಿ, ಯಾವುದು ಸತ್ಯವೋ ಆಲೋಚಿಸಿ ಅದರ ಪ್ರಕಾರ ನಡೆದುಕೊಳ್ಳುವುದು ವಿಜ್ಞರ ಲಕ್ಷಣ.

ಮೂರನೆಯದು ದ್ವಾಪರವೆಂದು ಇದೆ. ಇದಕ್ಕೂ ಮೊದಲೇ ದೇವರನ್ನು ಪರಮಾತ್ಮ ಎನ್ನುತ್ತಾರೆಂದು ಹೇಳಿಕೊಂಡಿದ್ದೇವೆ. ಆತ್ಮಗಿಂತಲೂ ಬೇರೆಯಾಗಿ ಇರುವವನು ಆದ್ದರಿಂದ ಪರಮಾತ್ಮ ಎಂದು ಅನ್ನುತ್ತೇವೆ. ಜೀವಾತ್ಮ, ಆತ್ಮ ಅಲ್ಲದವನು ಪರಮಾತ್ಮ. ಹಾಗೇ ಕ್ಷರಪುರುಷನು, ಅಕ್ಷರಪುರುಷನು ಅಲ್ಲದವನು ಪುರುಷೋತ್ತಮನು. ಮೂರು ಆತ್ಮಗಳಲ್ಲಿ ಮೂರನೆಯದನ್ನು ತ್ರೈತಾ ಅನ್ನುತ್ತೇವೆ. ಹಾಗೇ ಮೂರರಲ್ಲಿ ಎರಡೂ ಅಲ್ಲದ್ದು ದೇವರು ಎನ್ನುವುದಕ್ಕೆ ದ್ವಾಪರ ಎಂದು ಎನ್ನುತ್ತೇವೆ. ದ್ವಾ ಎಂದರೆ ಎರಡು ಎಂದು, ಪರ ಎಂದರೆ ಬೇರೆಯಾಗಿರುವು

ದೆಂದು ಅರ್ಥ. ದ್ವಾಪರ ಎಂದರೆ ಎರಡಕ್ಕಿಂತ ಬೇರೆಯಾಗಿರುವು ದೆಂದು ಅರ್ಥ. ದೇವರ ಸ್ಥಾನಕ್ಕೆ ತಕ್ಕಹಾಗೆ ಇರುವ ಶಬ್ದ ದ್ವಾಪರ. ಆದ್ದರಿಂದ ಪೂರ್ವದಲ್ಲಿ ಹಿರಿಯರು ಕಾಲಕ್ಕೆ ದ್ವಾಪರ ಎಂದು ಸೂಚನೆಯಾಗಿ ಕರೆದಿದ್ದಾರೆ. ಅದನ್ನೇ ದ್ವಾಪರಯುಗ ಎಂದು ಅನ್ನುತ್ತೇವೆ. ಇದು ಪೂರ್ವದಲ್ಲಿ ಹಿರಿಯರು ನಿರ್ಣಯಿಸಿದ ಪದ. ಅದೃಷ್ಟವಶಾತ್ತು ಈ ಪದ, ಅದರ ಅರ್ಥ ಬದಲಾಗದೆ ಹಾಗೇ ಇದೆ. ಇದು ದೇವರ ಗುರುತೆಂದು ನಾವು ಹೇಳುವುದಕ್ಕೆ ಸಾಕ್ಷಿಯಾಗಿ ನಿಂತಿದೆ. ಇನ್ನು ನಾಲ್ಕನೆಯದು ಕಲಿಯುಗ. ಇದು ಸಹ ಪೂರ್ವದಲ್ಲಿ ಹಿರಿಯರು ನಿರ್ಣಯಿಸಿದಹಾಗೆ ಅರ್ಥ ಬದಲಾಗದೆ ಇದೆ. ಭಗವದ್ಗೀತೆಯಲ್ಲಿ ನೀನು ಯಾರು ಎಂದು ಅರ್ಜುನನು ಕೇಳಿದಾಗ ಅದಕ್ಕೆ ಉತ್ತರವಾಗಿ "ಕಾಲೋಸ್ಮಿ ಲೋಕಕ್ಷಯ" ಎನ್ನುವುದು ನಡೆದಿದೆ. ಅದರ ಅರ್ಥ "ಲೋಕವನ್ನು ನಾಶ ಮಾಡುವ ಕಾಲನು" ಎಂದು ಇದೆ. ಇದರ ಪ್ರಕಾರ ಕಾಲ ಸರ್ವರನ್ನು ನಾಶ ಮಾಡುತ್ತಿದೆಯೆಂದು ಅರ್ಥವಾಗುತ್ತಿದೆ. ದೇವರು ಎಲ್ಲರನ್ನೂ, ಎಲ್ಲವನ್ನೂ ಸೃಷ್ಠಿಸುವ ಸೃಷ್ಠಿಕರ್ತನೇ ಅಲ್ಲದೆ. ತಾನು ಸೃಷ್ಠಿಸಿದ ಎಲ್ಲರನ್ನೂ, ಎಲ್ಲವನ್ನೂ ನಾಶ ಮಾಡಬಲ್ಲನು. ಆದ್ದರಿಂದ ತನ್ನನ್ನು ಲೋಕಕ್ಷಯನಾಗಿ ಹೇಳಿದ್ದಾನೆ. ಕ್ಷಯ ಎಂದರೆ ನಾಶ. ದೇವರನ್ನು ಆತನ ಸ್ಥಾನಕ್ಕೆ ತಕ್ಕ ಹಾಗೆ ಕರೆಯುವುದು ಧರ್ಮವಾಗುತ್ತದೆ. ಆದ್ದರಿಂದ ಅದೇ ಉದ್ದೇಶದಿಂದ ಕಾಲಕ್ಕೆ ಕಲಿಯುಗ ಎಂದು ಸೂಚಿಸಿದ್ದಾರೆ. ಕಲಿ ಎಂದರೆ ನಾಶವನ್ನು ಉಂಟುಮಾಡುವ ಯುದ್ಧ ಎಂದು ಅರ್ಥ. ಯುದ್ಧ ಎಂದರೆ ನಾಶವೆಂದೇ ಅರ್ಥ ಆದ್ದರಿಂದ ದೇವರನ್ನು ಕಲಿಪುರುಷನು ಎಂದಿದ್ದಾರೆ. ಅದೇ ಉದ್ದೇಶದಿಂದ ಕಾಲವನ್ನು ಕಲಿಯುಗ ಎಂದು ಅಂದಿದ್ದಾರೆ. ಪೂರ್ವದಲ್ಲಿ ಕೆಲವರು ಜ್ಞಾನಿಗಳು ಒಂದು ಕಡೆ ಕುಳಿತುಕೊಂಡು ಕಾಲಕ್ಕೆ ಹೆಸರಲ್ಲದ ಪದಗಳನ್ನು ನಿರ್ಣಯಿಸಿದ್ದಾರೆ. ಆ ಪದಗಳು ದೇವರ ಧರ್ಮಗಳಿಗೆ ತಕ್ಕಹಾಗೆ ಏರ್ಪಡಿಸಿದ್ದಾರೆ. ಅವರು ಸಕ್ರಮವಾಗಿ ಏರ್ಪಡಿಸಿರುವವು 1) ಕೃತ್‌ಯುಗ 2) ತ್ರೈತಾಯುಗ 3) ದ್ವಾಪರಯುಗ 4) ಕಲಿಯುಗ. ಆದರೇ ಮೊದಲಿರುವ ಎರಡು ದೊಡ್ಡ ಹೆಸರುಗಳು ಸ್ವಲ್ಪ

ಬದಲಾಗಿ ಕೃತ್‌ಯುಗ ಕೃತಯುಗವಾಗಿ, ತ್ರೈತಾಯುಗ ತ್ರೇತಾಯುಗವಾಗಿ ಉಳಿದಿವೆ.

ಯುಗಗಳ ಹೆಸರುಗಳ ವಿಷಯದಲ್ಲಿ ಈಗ ಸಂಚಲನ ವಾರ್ತೆ ತಿಳಿದಂತಾಗಿದೆ. ಈಗ ಹೇಳಿರುವ ಸತ್ಯವನ್ನು ಕೆಲವರು ಚೆನ್ನಾಗಿ ಅರ್ಥ ಮಾಡಿಕೊಂಡರೂ, ಕೆಲವರು ಮಾತ್ರ ಜೀರ್ಣಿಸಿಕೊಳ್ಳದೆ ಹೋಗಬಹುದು. ಅಂತವರು ಈಗ ಹೇಳುವ ಮತ್ತೊಂದು ವಿಷಯವನ್ನು ಕೇಳಿದರೆ ಪೂರ್ತಿಯಾಗಿ ವಾಂತಿ ಮಾಡಿಕೊಳ್ಳುತ್ತಾರೇನೋ ಎನಿಸುತ್ತದೆ. ಸತ್ಯಾನ್ವೇಷಿಗಳಿಗೆ ನಾವು ಹೇಳುವ ಸತ್ಯಗಳು ಒಳ್ಳೆ ಆಹಾರವಾಗಿ ಇರುವಾಗ, ಅನ್ವೇಷಣೆ ಇಲ್ಲದವರಿಗೆ ನಾವು ಹೇಳುವ ವಿಷಯಗಳು ಯಾವ ಮಾತ್ರ ಜೀರ್ಣವಾಗುವುದಿಲ್ಲ. ನಮ್ಮ ಆಧ್ಯಾತ್ಮಿಕ ಗ್ರಂಥಗಳಲ್ಲಿನ ಆಧ್ಯಾತ್ಮಿಕ ವಿದ್ಯೆ ಎಲ್ಲವೂ ಜೀವಾತ್ಮ ದೇವರಲ್ಲಿ ಐಕ್ಯವಾಗುವ ವಿಧಾನವನ್ನೇ ತೋರಿಸಿವೆ. ಹಾಗೆ ಐಕ್ಯವಾಗುವುದನ್ನೇ ಮುಕ್ತಿ ಹೊಂದುವುದು ಅಥವಾ ಮೋಕ್ಷವನ್ನು ಹೊಂದುವುದು ಎನ್ನುತ್ತಾರೆ. ದೇವರ ಸಮಾಚಾರ, ಜ್ಞಾನ ಧರ್ಮಗಳು ಎಲ್ಲಿರುವವೊ ಅಲ್ಲೆಲ್ಲಾ ಜೀವ ಬ್ರಹ್ಮ ಐಕ್ಯ ವಿಧಾನವೇ ಇರುತ್ತದೆ. ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಮುಖ್ಯ ಗ್ರಂಥವಾದ ಭಗವದ್ಗೀತೆಯಲ್ಲಿ ದೇವರಲ್ಲಿ ಐಕ್ಯವಾಗುವ ವಿಧಾನಗಳನ್ನೇ ಮುಖ್ಯವಾಗಿ ಹೇಳಿದ್ದಾರೆ. ದೇವರನ್ನು ಸೇರುವ ವಿಧಾನವನ್ನೇ ಯೋಗವೆಂದು ಗೀತೆಯಲ್ಲಿ ಹೇಳಿದ್ದಾರೆ. ಅಂತಹ ಯೋಗಗಳು ಧರ್ಮಗಳ ಪ್ರಕಾರ ಹೇಳಲಾಗುವವು ಎರಡೇ ಎರಡು ಇವೆ. ಅದರಲ್ಲಿ ಒಂದು ಬ್ರಹ್ಮಯೋಗ, ಎರಡನೆಯದು ಕರ್ಮಯೋಗ. ಧರ್ಮಗಳಿಗೆ ಅತೀತವಾದ ಯೋಗವು ಸಹ ಒಂದು ಇದೆ. ಅದನ್ನು ಭಕ್ತಿಯೋಗ ಎನ್ನುತ್ತೇವೆ. ಭಕ್ತಿಯೋಗ ಬಹಳ ದೊಡ್ಡದು. ಅದು ಎಲ್ಲರಿಗೂ ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ. ಧರ್ಮಗಳೊಂದಿಗೆ ಕೂಡಿಕೊಂಡಿರುವ ಬ್ರಹ್ಮ, ಕರ್ಮ ಯೋಗಗಳನ್ನು ಮನುಷ್ಯ ಅರ್ಥ ಮಾಡಿಕೊಂಡರೆ ನಂತರ ಭಕ್ತಿಯೋಗ ಅರ್ಥವಾಗಬಲ್ಲದು. ಭಗವದ್ಗೀತೆ ಯಲ್ಲಿ ದೇವರ ವಿಧಾನವೆಲ್ಲವೂ ಸಂಪೂರ್ಣವಾಗಿ ಇದೆ. ಅಲ್ಲೇ ಯೋಗಗಳ ವಿವರವೆಲ್ಲವೂ ಸಂಪೂರ್ಣವಾಗಿ ಇದೆ. ಈ ವಿಷಯವೆಲ್ಲಾ ಏಕೆ ಹೇಳುತ್ತಿದ್ದೇ

ನೆಂದರೆ! ದೈವಸ್ವರೂಪ ಎಲ್ಲಾದರೆ ಇದೆಯೋ ಅದರೊಳಗೆ ಐಕ್ಯವಾಗಿ ಹೋಗೆನ್ನುವ ವಿಧಾನವೂ ಸಹ ಅಲ್ಲಿ ಇರುತ್ತದೆಂದು ಅರ್ಥವಾಗುವುದಕ್ಕೆ ಹೇಳಬೇಕಾಗಿ ಬಂದಿದೆ.

ಯೋಗ ಎಂದರೆ ಕೂಡುವಿಕೆ ಎಂದು ಅರ್ಥ. ವಿಯೋಗ ಎಂದರೆ ಕೂಡಿರುವುದು ಬೇರೆಯಾಗುವುದೆಂದು ಅರ್ಥ. ಯೋಗ ಅನ್ನುವ ಮಾತು ದೈವತ್ವವಿರುವ ಕಡೆಯೇ ಹೇಳಲಾಗುತ್ತದೆಂದು ಹೇಳಿದ್ದೇವೆ ಅಲ್ಲವೆ! ಕಾಲ ದೈವಸ್ವರೂಪ ಎಂದಿದ್ದೇವೆ. ಹಾಗೇ ಕಾಲಕ್ಕೆ ದೈವವನ್ನು ಸೂಚಿಸುವ ಕೃತ್ ಎಂದೂ, ತ್ರೈತಾ ಎಂದೂ, ದ್ವಾಪರ ಎಂದೂ, ಕಲಿ ಎಂದೂ ಕರೆಯುತ್ತಿದ್ದೇವೆ. ಅಂತಹ ದೈವಸ್ವರೂಪವಾದ ಕಾಲಗಳ ಪಕ್ಕದಲ್ಲಿ ಯೋಗ ಎನ್ನುವ ಶಬ್ದವನ್ನು ಹಿರಿಯರು ಜೊತೆಮಾಡಿ ಹೇಳಿದ್ದಾರೆ. ಇಲ್ಲಿಯವರೆಗು ನಾವು ಕರೆಯುತ್ತಿರುವ ಯುಗಗಳು ಪೂರ್ವದಲ್ಲಿ ಯೋಗಗಳಾಗಿ ಇಟ್ಟಿರುವ ಹೆಸರುಗಳು. ವಾಸ್ತವಕ್ಕೆ ಕೃತ್‌ಯೋಗ, ತ್ರೈತಾಯೋಗ, ದ್ವಾಪರಯೋಗ, ಕಲಿಯೋಗ ಎನ್ನುವ ಹೆಸರುಗಳು ಸತ್ಯವಾದವು. ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತವೆಂದು ದೇವರು ಗೀತೆಯಲ್ಲಿ ಹೇಳಿರುವಹಾಗೆ ಧರ್ಮಗಳಾದ ಯೋಗಗಳ ಹೆಸರುಗಳೇ ಕೊನೆಗೆ ಯುಗಗಳಾಗಿ ಕರೆಯಲಾಗುತ್ತಿವೆ. ಯೋಗ ಎಂದರೆ ದೇವರಲ್ಲಿ ಐಕ್ಯವಾಗು ಎಂದು ಅರ್ಥವಿರುವಾಗ, ಯುಗ ಎಂದರೆ ಯಾವ ಅರ್ಥವೂ ಇಲ್ಲವೆಂದು ಹೇಳಬಹುದು. ಕೃತ್, ತ್ರೈತ, ದ್ವಾಪರ, ಕಲಿ ಎನ್ನುವ ದೈವವೊಂದರ ಸ್ಥಿತಿಯನ್ನು ತಿಳಿಸುವ ಪದಗಳ ಪಕ್ಕದಲ್ಲಿ ಯೋಗವಿದ್ದರೇ ಅಂದವೂ, ಅರ್ಥವೂ ಸರಿಹೋ ಗುತ್ತದೆ. ಹಾಗಲ್ಲದೆ ಅಷ್ಟು ದೊಡ್ಡ ಪದಗಳ ಪಕ್ಕದಲ್ಲಿ ಅರ್ಥವಿಲ್ಲದ ಸಣ್ಣಪದಗಳನ್ನು ಇಡುವುದು ಒಳ್ಳೆಯದಲ್ಲ. ಹಾಗೆ ಅರ್ಥವಿಲ್ಲದ ಪದಗಳನ್ನು ಇಡುವುದು ಇಂದ್ರನ ಪಕ್ಕದಲ್ಲಿ ಒಣಗಿಹೋದ ಎಲುಬನ್ನು ಕಡಿಯುತ್ತಿರುವ ನಾಯಿಯನ್ನು ಇಟ್ಟಿ ದಹಾಗಿರುತ್ತದೆ. ಕುಬೇರನ ಪಕ್ಕದಲ್ಲಿ ಗಂಜಿಯೂ ಸಹ ಇಲ್ಲದ ಬಿಕಾರಿಯನ್ನು ಇಟ್ಟಂತಿರುತ್ತದೆ. ಆದ್ದರಿಂದ ನಾವು ಹೇಳುವ ಸತ್ಯವನ್ನು ತಿಳಿದುಕೊಂಡು

ಯುಗವನ್ನು ಯೋಗ ಎಂದು ಕರೆಯುತ್ತಾ ಸತ್ಯ ಹೊರಬೀಳುವಹಾಗೆ ಮಾಡುವರೆಂದು ಅಂದುಕೊಳ್ಳುತ್ತಿದ್ದೇನೆ. ಇಲ್ಲಿಗೆ ಕಾಲಗಳ ಹೆಸರುಗಳಲ್ಲಿನ ಲೋಪಗಳು ಪೂರ್ತಿಯಾಗಿ ತಿಳಿದುಹೋಗಿವೆ ಅಂದುಕೊಳ್ಳುತ್ತೇನೆ.

ಇಲ್ಲಿಯವರೆಗು ಹೇಳಿರುವುದನ್ನು ಅನುಸರಿಸಿ ನಾಲ್ಕು ಯುಗಗಳ ವಿವರ ತಿಳಿದಿದೆ ಅಲ್ಲವೆ! ನಾಲ್ಕು ಯುಗಗಳಲ್ಲಿ ಮಧ್ಯದಲ್ಲಿರುವ ಎರಡು ಯುಗಗಳನ್ನು ಹೇಳಿಕೊಂಡರೆ ಒಂದು ತ್ರೈತಾಯುಗ ಮತ್ತೊಂದು ದ್ವಾಪರಯುಗ. ಈ ಎರಡು ಯುಗಗಳ ಹೆಸರುಗಳು ಪ್ರತ್ಯೇಕಿಸಿ ಒಂದು ಪ್ರತ್ಯಕ್ಷವಾಗಿ "ತ್ರೈತ" ಎನ್ನುವ ಹೆಸರನ್ನು ತಿಳಿಸುತ್ತಿರುವಾಗ, ಮತ್ತೊಂದು ಪರೋಕ್ಷವಾಗಿ "ದ್ವಾಪರ" ಎನ್ನುವ ಹೆಸರನ್ನು ತಿಳಿಸುತ್ತಿದೆ. ತ್ರೈತ ಎಂದರೆ ಮೂರನೆಯದೆಂದು, ದ್ವಾಪರ ಎಂದರೆ ಎರಡಕ್ಕಿಂತಲೂ ಬೇರೆಯಾಗಿರುವುದೆಂದು ಅರ್ಥ. ಎರಡಕ್ಕಿಂತಲೂ ಬೇರೆಯಾಗಿರುವುದು ಎಂದರೆ ಮೂರನೆಯದೆಂದು ಅರ್ಥವಾಗುತ್ತದೆ. ಆದ್ದರಿಂದ ತ್ರೈತ ಎಂದರೂ, ದ್ವಾಪರ ಎಂದರೂ ಎರಡೂ ಒಂದೇ ಅರ್ಥವನ್ನು ಕೊಡುತ್ತಿವೆ. ಈ ವಿಧವಾಗಿ ಯುಗಗಳಲ್ಲಿ ಮಧ್ಯೆದಲ್ಲಿ ಮೂರು ಎನ್ನುವ ಅರ್ಥವನ್ನು ಕೊಡುವ ಯುಗಗಳಿರುವುದರಿಂದ ಒಂದು ವಿಶೇಷವಾದ ಅರ್ಥವಿದೆ. ಅದೇನೆಂದರೆ! ಮನುಷ್ಯನ ಜೀವನ ನಾಲ್ಕು ದಶಗಳಾಗಿ ಇದೆ. ಒಂದು ಬಾಲ್ಯ, ಎರಡು ಯವ್ವನ, ಮೂರು ಕೌಮಾರ, ನಾಲ್ಕು ವೃದ್ಧಾಪ್ಯ. ನಾಲ್ಕು ದಶಗಳಲ್ಲಿ ಮೊದಲು ಬಾಲ್ಯದಲ್ಲೂ ಕೊನೆಯ ವೃದ್ಧಾಪ್ಯದಲ್ಲೂ ದೇವರ ಜ್ಞಾನ ತಿಳಿದುಕೊಳ್ಳುವುದಕ್ಕೆ ಅನುಕೂಲವೂ, ಅವಕಾಶವೂ ಇರುವುದಿಲ್ಲ. ಬಾಲ್ಯದಲ್ಲಿ ಬುದ್ಧಿ ದೈವಜ್ಞಾನವನ್ನು ಗ್ರಹಿಸಿಕೊಳ್ಳುವ ಸಾಮರ್ಥ್ಯಕ್ಕೆ ಬೆಳೆದಿರುವುದಿಲ್ಲ. ನಂತರ ಬಾಲ್ಯದಲ್ಲಿ ಸ್ವತಂತ್ರವಾಗಿ ಜ್ಞಾನ ತಿಳಿದುಕೊಳ್ಳುವ ಅವಕಾಶವೂ ಸಹ ಇರುವುದಿಲ್ಲ. ಹಾಗೇ ವೃದ್ಧಾಪ್ಯದಲ್ಲಿ ಬುದ್ಧಿ ಬಲಹೀನವಾಗಿ ಕೇಳಿರುವುದನ್ನು ಗ್ರಹಿಸಿಕೊಳ್ಳುವ ಸಾಮರ್ಥ್ಯ ಕಳೆದು ಕೊಂಡಿರುತ್ತದೆ. ಆದ್ದರಿಂದ ಇತ್ತ ಶರೀರ ಅತ್ತ ಬುದ್ಧಿ ಎರಡೂ ಅನುಕೂಲವಾಗಿರುವುದಿಲ್ಲ. ನಂತರ ವೃದ್ಧಾಪ್ಯದಲ್ಲಿ ಸ್ವತಂತ್ರತೆ ಇರುವುದಿಲ್ಲ. ಸ್ವತಂತ್ರತೆ ಇದ್ದರೂ ಶರೀರ ಸಹಕರಿಸುವುದಿಲ್ಲ. ಈ ವಿಧವಾಗಿ ಬಾಲ್ಯದಲ್ಲಿಯೂ,

ವೃದ್ಧಾಪ್ಯದಲ್ಲಿಯೂ ಎರಡು ದಶಗಳಲ್ಲಿಯೂ ಮೂರು ಆತ್ಮಗಳ ಜ್ಞಾನವಾದ ತ್ರೈತ ಸಿದ್ಧಾಂತ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದ ಜೀವನಕ್ಕೆ ಮಧ್ಯದಲ್ಲಿರುವ ಯವ್ವನ, ಕೌಮಾರದಶೆಗಳ ಕಾಲದಲ್ಲೇ ದೈವಜ್ಞಾನವನ್ನು ತಿಳಿಯಬೇಕು. ಮನುಷ್ಯ ಯವ್ವನದಲ್ಲಾಗಲಿ, ಕೌಮಾರದಲ್ಲಾಗಲಿ ತಿಳಿಯಬೇಕಾದ ಜ್ಞಾನ ಮೂರು ಆತ್ಮಗಳಿಗೆ ಸಂಬಂಧಿಸಿದ ಜ್ಞಾನ, ಆದ್ದರಿಂದ ಯಾವ ಮನುಷ್ಯನಾದರೂ ತ್ರೈತ ಜ್ಞಾನವನ್ನೇ ತಿಳಿಯಬೇಕು ಎನ್ನುವ ಸೂಚನೆಯೊಂದಿಗೆ, ನಾಲ್ಕು ಯುಗಗಳ ಮಧ್ಯದಲ್ಲಿರುವ ಯುಗಗಳಿಗೆ ತ್ರೈತಯುಗವೆಂದು, ದ್ವಾಪರ ಯುಗವೆಂದು ಹೆಸರು ಇಡಲಾಗಿದೆ.

ಮೂಗು, ಮೂತಿ, ಶ್ವಾಸ, ಧ್ಯಾಸ, ಮಾನ, ಪ್ರಾಣ ಇರುವ ಯಾವ ಮನುಷ್ಯನಾದರೂ ದೇವರಿಂದ ಸೃಷ್ಠಿಸಲ್ಪಟ್ಟಿರುವವನೆ. ಸೃಷ್ಠಿಸಲ್ಪಟ್ಟ ಮನುಷ್ಯ ನಾಸ್ತಿಕನಾದರೂ ಆಸ್ತಿಕನಾದರೂ, ರಾಜನಾದರೂ ಬಡವನಾದರೂ, ಹಿಂದುವಾದರೂ (ಇಂದೂವಾದರೂ) ಇಸ್ಲಾಮಿ ಆದರೂ, ಇಂಡಿಯಾದವ ನಾದರೂ, ಇಂಡೋನೇಷಿಯಾದವನಾದರೂ ನಾಲ್ಕು ಯುಗಗಳ ಕಾಲದಲ್ಲೇ ನಿವಾಸಿಸುತ್ತಿದ್ದಾರೆ. ಆದ್ದರಿಂದ ಯುಗಗಳ ಮಧ್ಯೆದಲ್ಲಿ ತಿಳಿಸಿದ ಹಾಗೆ ಮನುಷ್ಯ ಬಾಲ್ಯಕ್ಕೂ ವೃದ್ಧಾಪ್ಯಕ್ಕೂ ಮಧ್ಯದಲ್ಲಿರುವ ವಯಸ್ಸಿನಲ್ಲಿ ತ್ರೈತ ಎನ್ನುವ ಜ್ಞಾನವನ್ನಾಗಲಿ ಅಥವಾ ದ್ವಾಪರ ಎನ್ನುವ ಜ್ಞಾನವನ್ನಾಗಲಿ ತಿಳಿಯಬೇಕು. ಹಾಗೆ ತಿಳಿಯುವುದರಿಂದ ಮನುಷ್ಯ ದೈವವನ್ನು ಸೇರಬಲ್ಲನು. ಇದೇ ತ್ರೈತವೇ ಮುಖ್ಯವಾಗಿ ಎಲ್ಲಾ ಮತಗಳ ಮೂಲ ಗ್ರಂಥಗಳಲ್ಲಿಯೂ ಇದೆ. ಕೆಲವರು ಬೈಬಲ್‌ನ್ನು ಓದಿ ನಮ್ಮ ಗ್ರಂಥದಲ್ಲಿ ತ್ರೈತವೆನ್ನುವ ಹೆಸರೇ ಇಲ್ಲ ಎಂದು ಕೇಳಬಹುದು. ಹಾಗೇ ಮುಸ್ಲೀಮ್‌ರು ಖುರಾನ್ ಓದಿ ನಮ್ಮ ಗ್ರಂಥದಲ್ಲಿ ಮೂರು ಆತ್ಮಗಳೆಂದಾಗಲಿ, ತ್ರೈತವೆಂದಾಗಲಿ ಇಲ್ಲವೇ ಎಂದು ಕೇಳಬಹುದು. ಹಾಗೇ ಭಗವದ್ಗೀತೆಯನ್ನು ಬರೆದ ಎಷ್ಟೋ ಸ್ವಾಮೀಜಿಗಳು ನಾವು ಭಗವದ್ಗೀತೆಗೆ ವಿವರವಾಗಿ ಭಾವವನ್ನು ಬರೆದಿದ್ದೇವೆ ನಮಗೆ ತಿಳಿದಿರುವಹಾಗೆ ಎಲ್ಲಿಯೂ ತ್ರೈತವೆನ್ನುವ ಪದವಾಗಲಿ, ಅದರ ಭಾವವಾಗಲಿ ಇಲ್ಲವೇ ಎಂದು ಕೇಳಬಹುದು.

ನಮ್ಮ ಗ್ರಂಥಗಳಲ್ಲಿ ಎಲ್ಲಿಯೂ ತ್ರೈತ ಸಿದ್ಧಾಂತ ಇಲ್ಲ ಎಂದು ಎಲ್ಲಾ ಮತಗಳವರು ಏಕ ಕಂಠದಿಂದ ಕೂಗಿದರೂ, ತ್ರೈತ ಕಾಣಿಸದ ಸತ್ಯವಾಗಿ ಎಲ್ಲಾ ಮತಗಳಲ್ಲಿಯೂ ಮುಖ್ಯ ಸಾರಾಂಶವಾಗಿ ಇದೆ. ಎಲ್ಲರೂ ಅದನ್ನು ಸುಲಭವಾಗಿ ಗ್ರಹಿಸಿಕೊಳ್ಳುವ ಹಾಗೆ ಇದ್ದರೇ, ಗೀತೆಯಲ್ಲಿ ಜ್ಞಾನಯೋಗ 6, 7, 8 ಶ್ಲೋಕಗಳಲ್ಲಿ, ಖುರಾನ್ 22, 23, 24 ಆಯತ್‌ಗಳಲ್ಲಿ, ಬೈಬಲ್ ಯೊಹಾನ್ 16ನೇ ಅಧ್ಯಾಯ 12, 13, 14 ರಲ್ಲಿ ಬರುತ್ತೇನೆಂದು ಹೇಳಿರುವ ದೇವರು ಭೂಮಿ ಮೇಲೆ ಅವತರಿಸಬೇಕಾದ ಕೆಲಸವೇ ಇಲ್ಲ ಅಲ್ಲವೆ! ಆದಿಯಲ್ಲಿ ದೇವರು ಹೇಳಿರುವ ಜ್ಞಾನವನ್ನು ತಿರುಗಿ ದೇವರೇ ಗ್ರಂಥರೂಪದಲ್ಲಿ ಕೊಟ್ಟರೂ, ಅದರಲ್ಲಿನ ಸಾರಾಂಶವನ್ನು ಮನುಷ್ಯ ತಿಳಿಯದೆ ಇದ್ದಾನೆ. ಯಾವ ಮತಸ್ಥನಾದರೂ ತನ್ನ ಗುಂಡಿಗೆ ಮೇಲೆ ಕೈಯ್ಯನ್ನು ಇಟ್ಟುಕೊಂಡು ನನಗೆ ನಮ್ಮ ಗ್ರಂಥದಲ್ಲಿನ ದೇವರ ಜ್ಞಾನ ಪೂರ್ತಿಯಾಗಿ ತಿಳಿದಿದೆಯೆಂದು ಹೇಳೆನ್ನಿರಿ. ಯಾರೂ ಧೈರ್ಯವಾಗಿ ಹಾಗೆ ಹೇಳಲಾರರು. ಹಾಗೆ ಹೇಳಿದರೆ ಅದು ದೈವ ದ್ರೋಹವಾಗುತ್ತದೆ. ತನ್ನನ್ನು ತಾನು ಮೋಸ ಮಾಡಿಕೊಂಡಹಾಗಾಗುತ್ತದೆ. ಯಾರಿಗೆ ಎಷ್ಟು ಜ್ಞಾನ ತಿಳಿದಿರುವುದು ನನಗೆ ತಿಳಿದಿದೆ ಎನ್ನುತ್ತಾನೆ ದೇವರು. ತ್ರೈತಸಿದ್ಧಾಂತ ಜ್ಞಾನವನ್ನು ಪಕ್ಕಕ್ಕಿಟ್ಟು ದ್ವೈತ ಸಿದ್ಧಾಂತ ಜ್ಞಾನ ತಿಳಿದಿದೆಯಾ ಎಂದು ಕೇಳುತ್ತಿದ್ದೇನೆ.

ಈಗ ನಿಮಗೆ ಒಂದು ಹೊಸ ವಿಷಯವನ್ನು ಹೇಳುತ್ತೇನೆ ಕೇಳಿರಿ. ನೀವು ಕೇಳಿರಿ ಎಂದರೆ ನಾವೇಕೆ ಕೇಳಬೇಕು ಎಂದು ಕೆಲವರು ನನಗೆ ಎದುರು ಪ್ರಶ್ನೆಯನ್ನು ಕೇಳಬಹುದು. ಅದಕ್ಕೆ ನನ್ನ ಉತ್ತರ ಏನೆಂದರೆ! ನೀನು ಜ್ಞಾನಿ ಆಗಬೇಕೆಂದರೆ ಈ ಮಾತು ನಿನಗೆ ಬಹಳ ಅಗತ್ಯ. ಮತಕ್ಕೆ ಅತೀತವಾಗಿ ನೋಡಿದರೆ ಈ ಮಾತು ಎಲ್ಲರಿಗೂ ಅಗತ್ಯವೇ. ನಾನು ಹೇಳುವುದು ಇತರರಿಗೆ ಸ್ವಲ್ಪ ಆಶ್ಚರ್ಯವನ್ನುಂಟುಮಾಡಬಹುದು. ಏಕೆಂದರೆ ನನ್ನ ಮಾತು ಮತಗಳಿಗೆ ಅತೀತವಾಗಿ ಇರುತ್ತದೆ. ನಾನು ಯಾವ ಮತ ಭೂಮಿ ಮೇಲೆ ಇಲ್ಲದ ದಿನ ಇಂದೂ ಧರ್ಮದಲ್ಲಿ (ದೇವರ ಧರ್ಮದಲ್ಲಿ) ಹುಟ್ಟಿರುವವನು. ಆದ್ದರಿಂದ

ನಾನು ಎಂದಿಗೂ ಇಂದೂನೇ. ಇಂದೂಗಳಲ್ಲಿ ಮುಖ್ಯವಾದ ಯೋಗಿಯಾಗಿ ಹೆಸರುಹೊಂದಿರುವ ವೇಮನಯೋಗಿಯವರು, ಆತನ ರಚನೆಗಳಲ್ಲಿ ಮೂರು ಸಾವಿರದ ಎರಡು (3002) ಪದ್ಯಗಳನ್ನು ಆಧ್ಯಾತ್ಮಿಕ ಜ್ಞಾನದೊಂದಿಗೆ ಹೊಂದಿಸಿ ಹೇಳಿದ್ದಾನೆ. ಅದರಲ್ಲಿ ನನಗೆ ಬಹಳ ಇಷ್ಟವಾದ ಪದ್ಯವೊಂದು ಇದೆ.

ಪತಿಯೊಪ್ಪಿದರೆ ಸತಿ ಒಪ್ಪುವಳು
ಪತಿಸತಿಗಳೊಂದಾದರೆ ಪರಮ ಪಾವನದಲ್ಲಿ
ಪತಿಸತಿ ನ್ಯಾಯವೆ ಮೋಕ್ಷ
ಬತುಲಿತ ಪರಮಾತ್ಮನೈಕ್ಯವಾಗೊ ವೇಮಾ.

**ಭಾವಾರ್ಥ :–** ಪತಿ ಎಂದರೆ ಗಂಡ, ಸತಿಯೆಂದರೆ ಹೆಂಡತಿ ಎಂದು ಎಲ್ಲರಿಗೂ ತಿಳಿದಿರುವುದೆ. ಮದುವೆ ಆದರೇನೆ ಪತಿ ಸತಿಗಳಾಗುತ್ತಾರೆನ್ನುವ ವಿಷಯ ಸಹ ತಿಳಿದಿದೆ. ಪತಿ, ಸತಿಗಳಿಗೆ ಮಕ್ಕಳು ಹುಟ್ಟುತ್ತಾರೆನ್ನುವುದು ಸಹ ತಿಳಿದಿದೆ. ಈ ವಿಧಾನವೆಲ್ಲಾ ಜ್ಞಾನಿಗಳಿಗು, ಅಜ್ಞಾನಿಗಳಿಗು ಎಲ್ಲರಿಗೂ ತಿಳಿದಿದ್ದರೂ, ಬಹಳಜನಕ್ಕೆ ಈ ವಿಷಯ ದೈವಿಕವಾದದ್ದೆಂದು, ಆ ದೈವಿಕ ವಿಷಯವೇ ಪ್ರಪಂಚದಲ್ಲಿ ಹೀಗೆ ಪ್ರತಿಬಿಂಬಿಸಿ ಇದೆಯೆಂದು, ಪ್ರಪಂಚದಲ್ಲಿ ಪ್ರತ್ಯಕ್ಷವಾಗಿರುವ ಪತಿ ಸತಿಗಳ ವಿಧಾನವನ್ನು ಆಧಾರಮಾಡಿಕೊಂಡು ಪರೋಕ್ಷವಾಗಿರುವ ದೈವ ವಿಧಾನವನ್ನು ಅರ್ಥ ಮಾಡಿಕೊಳ್ಳುತ್ತೀರೆಂದು ದೇವರೇ ಹೀಗೆ ಇಟ್ಟಿದ್ದಾನೆ. ದೈವಿಕವಾದ ಪತಿ, ಸತಿ ವಿಧಾನ ಯಾವುದೋ ಈಗ ವಿವರಿಸಿಕೊಂಡು ನೋಡಿಕೊಳ್ಳೋಣ.

ಭಗವದ್ಗೀತೆ ಗುಣತ್ರಯ ವಿಭಾಗ ಯೋಗವೆನ್ನುವ ಅಧ್ಯಾಯದಲ್ಲಿ ಮೊದಲೇ ಪರಮಾತ್ಮನನ್ನು ಪತಿಯಾಗಿ, ಪ್ರಕೃತಿಯನ್ನು ಸತಿಯಾಗಿ ಹೇಳಿದ್ದಾರೆ. ಶ್ರೀ ಕೃಷ್ಣನು ಹೇಳಿದ ಭಗವದ್ಗೀತೆಯ ಪ್ರಕಾರ ಜಗತಿ ಎಲ್ಲದಕ್ಕೂ ಪ್ರಕೃತಿ, ಪುರುಷರು ಸತಿಪತಿಗಳಾಗಿದ್ದು ಪ್ರತಿ ಜೀವರಾಶಿಗೂ ಅವರೇ ತಾಯಿ ತಂದೆಯಾಗಿದ್ದಾರೆ. ಪ್ರಪಂಚದಲ್ಲಿನ ಮನುಷ್ಯ ಜಾತಿಗೆ ಅಲ್ಲದೆ ಕ್ರಿಮಿ, ಕೀಟಕ,

ಪಶು, ಪಕ್ಷಿ, ವೃಕ್ಷಲತಾದಿಗಳೆಲ್ಲವುಗಳಿಗೂ ತಾಯಿ ಪ್ರಕೃತಿ, ತಂದೆ ಪರಮಾತ್ಮ ಎಂದು ತಿಳಿದು ಬಂದಿದೆ. ಜಗತಿ ಎಲ್ಲದಕ್ಕು ತಾಯಿ ತಂದೆಯರಾಗಿದ್ದು ಪತಿ ಸತಿಗಳಾಗಿ ಒಪ್ಪುವ ಪರಮಾತ್ಮ ಪ್ರಕೃತಿ ಪ್ರಪಂಚದಲ್ಲಿ ವಿಭಿನ್ನವಾಗಿ ಪ್ರವರ್ತಿಸುತ್ತಿದ್ದಾರೆ. ಪತಿಯಾದ ಪರಮಾತ್ಮನಿಗೆ ಸತಿಯಾದ ಪ್ರಕೃತಿ ವಿಧೇಯಳಾಗಿದ್ದರೂ, ಪರಮಾತ್ಮ ಆದೇಶಾನುಸಾರವಾಗಿ ಜಗತಿಯ ಬಗ್ಗೆ ಪರಮಾತ್ಮ ಮಾರ್ಗವಾದ ದೈವಮಾರ್ಗಕ್ಕೆ ಪ್ರಕೃತಿಯಾದ ಮಾಯೆ ಎಷ್ಟೋ ವಿರುದ್ಧವಾಗಿ ಇದೆ. ದೈವಮಾರ್ಗವನ್ನು ಅನುಸರಿಸಬೇಕೆಂದುಕೊಳ್ಳುವವನನ್ನು ಆ ಪ್ರಯತ್ನವನ್ನು ಭಂಗಮಾಡಿ ದೂರ ಸರಿಯುವಂತೆ ಮಾಡುತ್ತಿದೆ. ಇದೆಲ್ಲವೂ ದೇವರಿಗೆ ತಿಳಿದೇ ನಡೆಯುತ್ತಿದೆ. ದೇವರನ್ನು ಕುರಿತಿರುವ ಪ್ರಯತ್ನದಲ್ಲಿ ಮಾಯೆ ಪ್ರಭಾವಕ್ಕೆ ತಾಳದೆ ಎಲ್ಲರೂ ಹಿಂತಿರುಗುತ್ತಿದ್ದಾರೆ. ಆದರೂ ಎಷ್ಟೋ ಲಕ್ಷಜನರಲ್ಲಿ ಯಾವ ಒಬ್ಬನೋ ಮಾಯೆಯನ್ನು ವಿರೋಧಿಸಿ ಎಲ್ಲಾ ಕಷ್ಟಗಳಿಗು ಸಹಿಸಿಕೊಂಡು ದೇವರನ್ನು ಸೇರಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದಾನೆ. ಅಂತಹವನನ್ನು ದೇವರು ಅವನ ಮಾರ್ಗವನ್ನು ಸುಗಮಮಾಡಿ, ಮಾಯೆ ಆತಂಕವನ್ನು ತೊಲಗಿಸಿ ತನ್ನಲ್ಲಿ ಸೇರಿಸಿಕೊಳ್ಳುವನು. ಬಲವಾದ ಮಾಯೆ ಕಲ್ಪಿಸುವ ಪರಿಸ್ಥಿತಿಗಳೆಲ್ಲವನ್ನು ಅನುಭವಿಸುತ್ತಾ, ಛಲವನ್ನು ಬಿಡದೆ ದೇವರಿಗೋಸ್ಕರ ಪ್ರಯತ್ನಿಸುವವನನ್ನು ದೇವರು ಒಪ್ಪಿಕೊಳ್ಳುವನು. ದೇವರು ಒಪ್ಪಿಕೊಂಡಾಗ ಮಾಯೆ ಅವನನ್ನು ಆತಂಕಮಾಡುವುದಿಲ್ಲ. ಅಂತಹವನ ಯೋಗವೊಂದರ ಕ್ಷೇಮವನ್ನು ದೇವರೇ ಪರಿರಕ್ಷಿಸುವನು. ಆಗ ಅವನು ದೇವರಲ್ಲಿ ಐಕ್ಯವಾಗಿ ಹೋಗುವನು.

ಪ್ರಪಂಚದಲ್ಲಿ ಮಾಯೆ ಉಂಟುಮಾಡುವ ಅನೇಕ ಕಷ್ಟಗಳನ್ನು ಅತಿಕ್ರಮಿಸಿ ದೇವರ ಮಾರ್ಗವನ್ನು ಬಿಡದವನನ್ನು, ದೇವರು ತನ್ನ ಮನುಷ್ಯನನ್ನಾಗಿ ಅಂಗೀಕರಿಸುವನು. ಆಗ ಕೂಡಲೇ ಪ್ರಕೃತಿಯಾದ ಮಾಯೆ ತಾನು ಸಹ ಅವನನ್ನು ಒಪ್ಪಿಕೊಂಡಿರುವುದಾಗಿ ಅವನಿಗೆ ಆತಂಕಪಡಿಸುವುದಿಲ್ಲ. ಆದ್ದರಿಂದ ಮೇಲಿನ ಪದ್ಯದಲ್ಲಿ ಪತಿಯೊಪ್ಪಿದರೆ ಸತಿ ಒಪ್ಪುವಳು ಎಂದಿದ್ದಾರೆ. ಆ ವಿಧವಾಗಿ ಪರಮಾತ್ಮ, ಪ್ರಕೃತಿ ಇಬ್ಬರೂ ಅವನಲ್ಲಿ ಒಂದಾಗಿ ನಡೆದುಕೊಂಡಾಗ ಅವನು ಮೋಕ್ಷ ಹೊಂದುವನು. ಅದನ್ನೇ ಪದ್ಯದಲ್ಲಿ ವ್ಯಕ್ತಪಡಿಸುತ್ತಾ ಪತಿಸತಿಗಳೊಂದಾದರೆ

పరమ పావనదల్లి ఎందిద్దారె. పతి, సతిగళిబ్బరు ఒందే మార్గదల్లి నడెదుకొళ్ళువుదు న్యాయవాగుత్తదె. పతిగె సతి విరుద్ధవాగి నడెదు కొళ్ళువుదు అన్యాయవాగుత్తదె. ప్రకృతి, పరమాత్మ భక్తనబగ్గె న్యాయ మార్గదల్లి చరిసిదరె మోక్ష లభిసుత్తదె. ఆద్దరింద మేలిన పద్యదల్లి పతి సతి న్యాయవే మోక్ష ఎందిద్దారె. పతి, సతి న్యాయవాగి చరిసిదాగ భక్తను కూడలే జన్మరాహిత్య హొందువను. ఆద్దరింద బతులిత పరమాత్మనైక్యవాగు ఎందిద్దారె.

ప్రపంచదల్లి ఒబ్బ భక్తన బగ్గె గండ హెండతియరాద ప్రకృతి పరమాత్మరు మొదలు అన్యాయవాగి ప్రవర్తిసువరెందు, ఈ పద్యదింద వేమన యోగి నమగె తిళిసిద్దానె. పతి ఒప్పిదరేనె సతియు ఒప్పికొండు ఇబ్బరు న్యాయవాగి ప్రవర్తిసువరు. అవరిబ్బరు ఒందాగి న్యాయవాగి ప్రవర్తిసిదాగలే భక్తనిగె మోక్ష లభిసుత్తదె. మాయె ఆతంకగళన్ను సహిసికొళ్ళదె నానెష్టు భక్తనాగిద్దరూ ననగే కష్టగళు బరుత్తివెయెందు, దేవర హత్తిర న్యాయవే ఇల్లెందుకొండవను దేవర మార్గదల్లి భ్రష్టనాగుత్తానె. దేవరన్ను కురితు ఏనూ అందుకొళ్ళదె ఎల్లవన్ను సహిసికొండవను మొదలు పరమాత్మనింద ఒప్పికొండవనాగి ప్రకృతి, పరమాత్మరు న్యాయవాగి ప్రవర్తిసిదాగ భక్తను మోక్ష హొందువను.

పతి సతియర విధాన ప్రపంచదల్లి ప్రతిబింబిసి ఇదెయెందు మొదలె హేళికొండిద్దేవె. పతిగె సతి విరుద్ధవాగి నడెదుకొళ్ళువుదు, పతియన్ను తన్న మాతు కేళువహాగె మాడికొళ్ళువంతహ అన్యాయ విధాన భూమి మేలె ఇదె. హాగే పతిగె సతి అనుకూలవాగి నడెదు కొళ్ళుత్తా, పతి మాతన్నే తన్న మాతాగి పతి హేళిదహాగె సతి నడెదుకొళ్ళువ న్యాయమార్గవూ భూమి మేలె ఇదె. నిమ్మ అనుభవదల్లి న్యాయ, అన్యాయ, పతి, సతియరన్ను కురితు తిళిదిద్దరే యారాదరూ

ಸಂಪೂರ್ಣ ಜ್ಞಾನಿಗಳಾಗಬಲ್ಲರು. ದೇವರ ಮಾರ್ಗದಲ್ಲಿ ನಡೆಯುವವರಿಗೆ ಆತಂಕಗಳು ಏರ್ಪಟ್ಟು, ದೇವರ ಹತ್ತಿರ ನ್ಯಾಯವಿದೆಯಾ? ಎಂದು ಸಹನೆಯನ್ನು ಕಳೆದುಕೊಂಡು ಮಾತನಾಡುವುದಿಲ್ಲ. ಎಷ್ಟು ಕಷ್ಟಗಳು ಬಂದರೂ ಇದು ತಾಯಿಯಾದ ಮಾಯೆ ಕೆಲಸ ಎಂದು ಎಚ್ಚರಿಕೆಯಲ್ಲಿದ್ದು ನಡೆದುಕೊಳ್ಳುವರು.

ಈ ಪದ್ಯ ಸ್ವಚ್ಛವಾಗಿ ಪರಮಾತ್ಮ ಪ್ರಕೃತಿಗಳನ್ನು ಕುರಿತು ಹೇಳಿರುವುದು. ಪ್ರಪಂಚವೆಲ್ಲದಕ್ಕೂ ತಾಯಿತಂದೆಯರಾದ ಇವರಲ್ಲಿ ತಾಯಿ ತಂದೆಗೆ ವಿಧೇಯಳಾಗಿ ಪ್ರವರ್ತಿಸುತ್ತಾ, ತನ್ನ ಗಂಡನಿಗೆ ಸಂಬಂಧಿಸಿದ ಕಾರ್ಯಗಳೆಲ್ಲವೂ ತಾನೇ ಮಾಡುತ್ತಿದೆ. ಅತ್ಯಂತ ಉನ್ನತವಾದ ಆದಿ ದಂಪತಿಯರನ್ನು ಕುರಿತು ಹೇಳಿರುವ ವೇಮನ ಪದ್ಯ ನನಗೆ ಎಷ್ಟೋ ಇಷ್ಟವಾದದ್ದು. ಹಾಗೇ ಭಗವದ್ಗೀತೆ ಗ್ರಂಥದಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ ಆರನೆಯ ಶ್ಲೋಕ...

*ಶ್ಲೋ॥ ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋಽಪಿಸನ್,*
*ಪ್ರಕೃತಿ ಸ್ವಾಮಧಿಷ್ಠಾ ಸಂಭವಾ ಮ್ಯಾತ್ಮ ಮಾಯಯಾ.*

ಈ ಶ್ಲೋಕದಲ್ಲಿಯೂ ಸಹ ಎಲ್ಲರಿಗೂ ತಂದೆಯಾದ ದೇವರೂ ಇದ್ದಾನೆ ತಾಯಿಯಾದ ಪ್ರಕೃತಿ ಇದೆ. ಅತ್ಯಂತ ಉನ್ನತವಾದ ದೇವರು ಹೇಗೆ ಮನುಷ್ಯರಿಗೋಸ್ಕರ ಬರುತ್ತಿದ್ದಾನೋ ಹೇಳಿರುವ ಶ್ಲೋಕ. ಆದ್ದರಿಂದ ಇದು ನನಗೆ ಎಷ್ಟೋ ಇಷ್ಟವಾದ ಶ್ಲೋಕ. ಹಾಗೇ ಬೈಬಲ್ ಗ್ರಂಥದಲ್ಲಿ ಯೋಹಾನ್ ಸುವಾರ್ತೆಯಲ್ಲಿ 16ನೇ ಅಧ್ಯಾಯದಲ್ಲಿ 12, 13, 14, 15 ವಾಕ್ಯಗಳು ನನಗೆ ಇಷ್ಟವಾದವು. ಅವು ಹೀಗೆ ಇವೆ. "ನಾನು ನಿಮಗೆ ಹೇಳಬೇಕಾಗಿರುವವು ಇನ್ನೂ ಅನೇಕ ಸಂಗತಿಗಳು ಇವೆ ಆದರೆ, ಈಗ ನೀವು ಅವುಗಳನ್ನು ಸಹಿಸಲಾರಿರಿ. ಆದರೆ ಆತನು ಎಂದರೆ ಸತ್ಯಸ್ವರೂಪಿಯಾದ ಆತ್ಮ ಬಂದಾಗ ನಿಮ್ಮನ್ನು ಸತ್ಯಲೋಕದೊಳಕ್ಕೆ ನಡೆಸುತ್ತದೆ. ಆತನು ತನ್ನಷ್ಟಕ್ಕೆ ತಾನೇ ಏನೂ ಬೋಧಿಸದೆ, ಯಾವುಗಳನ್ನು ಕೇಳುವನೋ ಅವುಗಳನ್ನೇ ಬೋಧಿಸಿ ಸಂಭವಿಸುವ ಸಂಗತಿಗಳನ್ನು ನಿಮಗೆ ತಿಳಿಸುತ್ತಾನೆ. ಆತನು ನನ್ನಲ್ಲಿನವುಗಳನ್ನು ತೆಗೆದುಕೊಂಡು ನಿಮಗೆ ತಿಳಿಸುವನು, ಆದ್ದರಿಂದ ನನ್ನನ್ನು ಮಹಿಮೆಪಡಿಸುವನು. ತಂದೆಗೆ

ಉಂಟಾಗಿರುವವೆಲ್ಲವೂ ನನ್ನವು. ಆದ್ದರಿಂದ ಆತನು ನನ್ನಲ್ಲಿನವುಗಳನ್ನು ತೆಗೆದುಕೊಂಡು ನಿಮಗೆ ತಿಳಿಸುವನೆಂದು ನಿಮಗೆ ಹೇಳಿದೆನು" ಎಂದು ಇವೆ.

ಇನ್ನು ಖುರಾನ್ ಗ್ರಂಥದಲ್ಲಿಯೂ ಸಹ ನನಗೆ ಇಷ್ಟವಾದ ವಾಕ್ಯಗಳು ಇವೆ ಅವು ಯಾವುವೆಂದರೆ! ಖುರಾನ್ ಗ್ರಂಥದಲ್ಲಿ 114 ಸುರಾಗಳು (ಅಧ್ಯಾಯಗಳು) ಇವೆ. ಅದರಲ್ಲಿ 112ನೇ ಆಧ್ಯಾಯವಾದ "ಆಲ್ ಇಖ್ಲಾಸ್" ಎನ್ನುವ ಹೆಸರಿರುವ ಸುರಾದಲ್ಲಿ ನಾಲ್ಕು ವಾಕ್ಯಗಳು ನನಗೆ ಅತ್ಯಂತ ಇಷ್ಟವಾದವೆಂದು ಹೇಳುತ್ತಿದ್ದೇನೆ. ಅವು ಯಾವುವೆಂದರೆ! 1) ದೇವರು ಒಬ್ಬನೇ 2) ದೇವರು ಯಾವ ಅಕ್ಕರೆ ಇಲ್ಲದವನು 3) ಆತನು ಯಾರನ್ನು ಹುಟ್ಟಿಸಲಿಲ್ಲ, ಆತನು ಯಾರಿಗೂ ಹುಟ್ಟಲಿಲ್ಲ. 4) ಆತನಿಗೆ ಸಮಾನವಾಗಿ ಯಾರೂ ಇಲ್ಲ.

ಇಲ್ಲಿ ಕೆಲವರಿಗೆ ನನ್ನ ಮೇಲೆ ಸ್ವಲ್ಪ ಅನುಮಾನ ಬಂದು ಹೀಗೆ ಪ್ರಶ್ನಿಸಬಹುದು. "ನೀವು ಇಂದೂ (ಹಿಂದೂ) ಸಮಾಜದಲ್ಲಿ ಹುಟ್ಟಿದವರು ಅಲ್ಲವೆ! ನಿಮಗೆ ವೇಮನಯೋಗಿ ಪದ್ಯ ಇಷ್ಟವಾಗಿದೆಯೆಂದು ಅಂದರೂ, ಭಗವದ್ಗೀತೆಯಲ್ಲಿನ ಶ್ಲೋಕ ಇಷ್ಟವಾಗಿದೆಯೆಂದರೂ ಯಾರಾದರೂ ಒಪ್ಪಿಕೊಳ್ಳಬಹುದು. ಅಲ್ಲಿಗೆ ನಿಲ್ಲದೆ ಬೈಬಲ್‌ನಲ್ಲಿನ ನಾಲ್ಕು ವಾಕ್ಯಗಳು, ಖುರಾನ್‌ನಲ್ಲಿನ ನಾಲ್ಕು ವಾಕ್ಯಗಳು ಇಷ್ಟವಾಗಿವೆಯೆಂದು ಹೇಳುವುದೇನು? ನೀವು ಕ್ರೈಸ್ತವರನ್ನು, ಮಹಮ್ಮದೀಯರನ್ನು ಸಮರ್ಥಿಸುತ್ತಿದ್ದೀರಾ" ಎಂದು ಕೇಳಬಹುದು. ಅದಕ್ಕೆ ನನ್ನ ಸಮಾಧಾನವೇನೆಂದರೆ! ನಾನು ಇಂದೂ ಸಮಾಜದಲ್ಲಿ ಹುಟ್ಟಿದ್ದೇನೆನ್ನದೆ ಇಂದೂ ಧರ್ಮದಲ್ಲೇ ಹುಟ್ಟಿದ್ದೇನೆಂದು ಹೇಳುತ್ತಿದ್ದೇನೆ. ಇಂದೂ ಧರ್ಮದಲ್ಲಿ ಹುಟ್ಟಿದ್ದೇನೆ, ಇಂದೂ ಧರ್ಮವನ್ನೇ ದೊಡ್ಡದಾಗಿ ಭಾವಿಸಿದ್ದೇನೆ, ಇಂದೂ ಧರ್ಮವನ್ನೇ ಇತರರಿಗೂ ಬೋಧಿಸುತ್ತಿದ್ದೇನೆ, ಆದ್ದರಿಂದ ನಾನು ಸ್ವಚ್ಛವಾದ ಇಂದೂ ಎಂದು ಗಟ್ಟಿಯಾಗಿ ಹೇಳುತ್ತಿದ್ದೇನೆ. ಇಂದೂ ಧರ್ಮ ದೇವರನ್ನು ಬಿಟ್ಟು ಯಾರನ್ನಾಗಲಿ, ಯಾವ ವಿಷಯವನ್ನಾಗಲೀ ಬೋಧಿಸದು. ಆದ್ದರಿಂದ ಭೂಮಿ ಮೇಲೆ ಎಲ್ಲಾದರೂ ದೇವರನ್ನು ಕುರಿತಿರುವ ಬೋಧನೆ ಇದೆ ಎಂದರೆ ಅದು ಸ್ವಚ್ಛವಾದ ಇಂದೂ ಬೋಧನೆ ಎಂದು ತಿಳಿಯಬೇಕು.

ದೇವರಿಗೆ ಸಂಬಂಧಿಸಿದ ಜ್ಞಾನ ಯಾವ ಮತದಲ್ಲಿದ್ದರೂ, ದೇವರ ಜ್ಞಾನ ಯಾವ ಗ್ರಂಥದಲ್ಲಿದ್ದರೂ, ಅದು ಭಗವದ್ಗೀತೆ ಆಗಬಹುದು, ಬೈಬಲ್ ಆಗಬಹುದು, ಖುರಾನ್ ಗ್ರಂಥವಾಗಬಹುದು. ಅದರಲ್ಲಿ ಇಂದೂ ಜ್ಞಾನವಿದೆಯೆಂದು ತಿಳಿಯಬೇಕು. ಇಂದೂ ಜ್ಞಾನ ಎಂದರೆ ದೈವಜ್ಞಾನವೆಂದು ನೆನಪಲ್ಲಿಟ್ಟುಕೊಳ್ಳಬೇಕು. ಇಂದೂಜ್ಞಾನ ಕ್ರೈಸ್ತವರಲ್ಲಿ, ಮುಸ್ಲೀಮ್‌ರಲ್ಲಿ ಅವರ ಗ್ರಂಥಗಳಲ್ಲಿ ಇದೆ. ಭೂಮಿ ಮೇಲೆ ಯಾವ ಮತವೂ ಇಲ್ಲದ ದಿನ ದೇವರು ತನ್ನ ಜ್ಞಾನವನ್ನು ತಿಳಿಸಿದ್ದಾನೆ. ದೇವರು ತಿಳಿಸಿದ ಮೊಟ್ಟಮೊದಲ ಜ್ಞಾನವೊಂದರ ಹೆಸರೇ ಇಂದೂಜ್ಞಾನ. ಮೊಟ್ಟಮೊದಲು ಸೂರ್ಯನಿಂದ ಭೂಮಿ ಮೇಲೆಗೆ ಬಂದಿರುವ ದೈವಜ್ಞಾನ ಪ್ರಪಂಚ ವ್ಯಾಪ್ತವಾಗಿ ಇತ್ತು. ನಂತರ ಮಾಯೆ ಪ್ರಭಾವದಿಂದ ಮನುಷ್ಯರ ತಲೆಯಲ್ಲಿನ ಗುಣಗಳಿಂದ ದೈವಜ್ಞಾನ ಒಬ್ಬರ ನಂತರ ಇನ್ನೊಬ್ಬರಿಗೆ ಸೇರುವ ಸಮಯದಲ್ಲಿ ಅಜ್ಞಾನವಾಗಿ ಬದಲಾಗಿಹೋಗಿದೆ. ಮನುಷ್ಯರಲ್ಲಿ ಪರಂಪರೆಯಾಗಿ ಬರಬೇಕಾದ ಜ್ಞಾನ ಭಾವ ಬದಲಾವಣೆಯಿಂದ ಅಧರ್ಮವಾಗಿ ಬದಲಾವಣೆಯಾಗಿದೆ. ಹಾಗೆ ಅಧರ್ಮಗಳಾಗಿ ಬದಲಾಗಿರುವ ತನ್ನ ಜ್ಞಾನವನ್ನು ಪುನಃ ದೇವರು ಬೇರೆಬೇರೆ ದೇಶಗಳಲ್ಲಿ, ಬೇರೆಬೇರೆ ಕಾಲಗಳಲ್ಲಿ, ಬೇರೆಬೇರೆ ವ್ಯಕ್ತಿಗಳಾಗಿ ಕಾಣಿಸಿ ಬೇರೆಬೇರೆ ಭಾಷೆಗಳಲ್ಲಿ ಹೇಳುವುದರಿಂದ ಕೇಳಿರುವ ಮನುಷ್ಯರು, ತಾವು ಕೇಳಿರುವುದನ್ನು ಬೇರೆ ಬೇರೆ ಮತಗಳಾಗಿ ಹೇಳಿಕೊಳ್ಳುವುದು ನಡೆದಿದೆ. ಈ ವಿಧವಾಗಿ ಐದು ಸಾವಿರ ವರ್ಷಗಳ ಪೂರ್ವದಲ್ಲಿ ಇಲ್ಲದ ಮತಗಳು ನಂತರ ಕಾಲದಲ್ಲಿ ಹುಟ್ಟಿಬಂದಿವೆ. ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಕ್ರೈಸ್ತವ ಮತ ಹುಟ್ಟಿಬಂದಾಗ, ಹದಿನಾಲ್ಕು ನೂರು ವರ್ಷಗಳ ಪೂರ್ವದಲ್ಲಿ ಮುಸ್ಲೀಮ್ ಮತ ಹುಟ್ಟಿದೆ. ಮನುಷ್ಯರು ಕೆಲವರು ಕ್ರೈಸ್ತವರಾಗಿ, ಕೆಲವರು ಮುಸ್ಲೀಮ್‌ರಾಗಿ ಬದಲಾಗಿ ಉಳಿದವರು ತಾವು ಹಿಂದುಗಳೆಂದು ಹೇಳಿಕೊಳ್ಳುವುದು ನಡೆದಿದೆ. ವಾಸ್ತವಕ್ಕೆ 'ಹಿಂದೂ' ಎನ್ನುವ ಹೆಸರು ಭೂಮಿ ಮೇಲೆ ಮುಸ್ಲೀಮ್ ಮತ ಬರುವುದಕ್ಕೆ ಮುಂಚೆಯೇ ಹದಿನಾಲ್ಕು ನೂರು ವರ್ಷಗಳ ಪೂರ್ವವೂ ಸಹ ಇಲ್ಲ. ಚರಿತ್ರೆಯನ್ನು ತಿರುಗಿಸಿ ನೋಡಿದರೆ ಸಾವಿರ ವರ್ಷಗಳ ಕಾಲದಲ್ಲಿ "ಇಂದೂ" ಎನ್ನುವ ಪದ ಸ್ವಲ್ಪ

"ಹಿಂದೂ" ಶಬ್ದವಾಗಿ ಬದಲಾಗಿದೆ. ಕಾಲಕ್ರಮದಲ್ಲಿ ಎಷ್ಟೋ ಪದಗಳಲ್ಲಿ ಶಬ್ದ ಬದಲಾವಣೆ ನಡೆದು ಬದಲಾದಹಾಗೆ, ಇಂದೂ ಎಂದು ಕರೆಯುವುದರಲ್ಲಿ "ಹಿಂದೂ" ಎಂದು ಕರೆಯುವುದು ನಡೆದಿದೆ. ಸ್ವರ "ಇ" ಯಿಂದ ಹೇಳಬೇಕಾದ ಶಬ್ಧವನ್ನು ವ್ಯಂಜನ "ಹಿ" ಯಿಂದ ಹೇಳುವುದು ನಡೆದಿದೆ. ಸ್ವಲ್ಪ ಶಬ್ದ ಬದಲಾವಣೆ ಆಗಿರುವುದರಿಂದ ಅದನ್ನು ಯಾರೂ ಗುರುತಿಸದೆ ಹೋಗಿದ್ದಾರೆ. ನಂತರ ಕಾಲದಲ್ಲಿ ಬರೆಯುವುದಕ್ಕೆ ಬರುವವರೆಲ್ಲರೂ "ಹಿ" ಎನ್ನುವ ಅಕ್ಷರದೊಂದಿಗೆ "ಹಿಂದೂ" ಎನ್ನುವ ಪದವನ್ನು ಬರೆಯುವುದು ಪ್ರಾರಂಭಮಾಡಿದ್ದಾರೆ. ಪೂರ್ವದಲ್ಲಿ ಓದು ಬರುವವರು ಕೇವಲ ಹತ್ತರಷ್ಟು ಜನ ಮಾತ್ರವೇ ಇರುತ್ತಿದ್ದರು. ಅದರಲ್ಲಿ ಯಾರೋ ಒಬ್ಬನು ತಪ್ಪಾಗಿ ಹಿಂದೂ ಎನ್ನುವ ಪದವನ್ನು ಬರೆಯುವುದರಿಂದ, ನಂತರ ಕಾಲದಲ್ಲಿ ಹಾಗೆ ಅಭ್ಯಾಸವಾಗಿ ಇಂದಿಗೆ ಇಂದೂಗಳು ಪೂರ್ತಿಯಾಗಿ ಹಿಂದೂಗಳಾಗಿ ಬದಲಾಗಿದ್ದಾರೆ. ಅದಕ್ಕೆ ಜೊತೆಯಾಗಿ ಕೆಲವರು ಸ್ವಾರ್ಥರು ಉಳಿದ ಮತಗಳೊಂದಿಗೆ ತಮ್ಮದು ಒಂದು ಮತವಾಗಿ ಹೇಳಿಕೊಂಡಿದ್ದಾರೆ. ವಾಸ್ತವಕ್ಕೆ ಹಿಂದೂಮತವೆನ್ನುವ ಹೆಸರು ಇಸ್ಲಾಮ್ ಮತ ಬಂದನಂತರವೇ ಬಂದಿದೆಯೆಂದು ಹೇಳಬಹುದು.

ಐದುಸಾವಿರ ವರ್ಷಗಳ ಪೂರ್ವ ಅಂದರೆ ಕಲಿಯುಗ ಪ್ರಾರಂಭದಲ್ಲಿ ಭೂಮಿ ಮೇಲೆ ಯಾವ ಮತಗಳು ಇಲ್ಲ. ಯಾವ ಮತವಾದರೂ ಐದುಸಾವಿರ ವರ್ಷಗಳ ನಂತರ ಬಂದಿರುವವೇ. ದ್ವಾಪರಯುಗದ ಕೊನೆಯಲ್ಲಿ ಭಗವಂತನಾಗಿ ಬಂದಿರುವ ಕೃಷ್ಣನು ದೈವಜ್ಞಾನವನ್ನು "ಭಗವದ್ಗೀತೆ" ಎನ್ನುವ ಗ್ರಂಥರೂಪದಲ್ಲಿ ಬೋಧಿಸಿದ್ದಾನೆ. ಆಗ ಮನುಷ್ಯನಲ್ಲಿರುವ ಅಜ್ಞಾನವನ್ನು ಒಂದು ಕಡೆ ಹೇಳುತ್ತಾ ಅದಕ್ಕೆ ಸಮಾಧಾನವಾಗಿ ಸರಿಯಾದ ಧರ್ಮವನ್ನು ಜ್ಞಾನರೂಪವಾಗಿ ಬೋಧಿಸಿದ್ದಾನೆ. ಧರ್ಮಗಳಿಗೆ ಮುಪ್ಪು ಏರ್ಪಟ್ಟು ಅಧರ್ಮಗಳು ಅಜ್ಞಾನ ರೂಪದಲ್ಲಿ ಬೆಳೆದುಹೋದಾಗ, ದೇವರು ಅವತರಿಸಿ ತನ್ನ ಜ್ಞಾನವನ್ನು ಬೋಧಿ ಸುತ್ತಾನೆಂದು ತಿಳಿಸಿದ ಕೃಷ್ಣನು, ಆ ದಿನ ತನ್ನ ಬೋಧನೆಯಲ್ಲಿ ಅಜ್ಞಾನ ಮತಗಳ ರೂಪದಲ್ಲಿ ಇದೆಯೆಂದು ಹೇಳಲಿಲ್ಲ. ಅಂದಿನ ಪರಿಸ್ಥಿತಿ ಯನ್ನನುಸರಿಸಿ

ಹೇಳಿದ ಜ್ಞಾನದಲ್ಲಿ ಮತ ಎನ್ನುವುದನ್ನು ಮನುಷ್ಯರು ಅನುಸರಿಸುತ್ತಿದ್ದಾರೆಂದಾಗಲಿ, ಇಂತಹ ಮತದಲ್ಲಿ ಅಜ್ಞಾನವಿದೆಯೆಂದಾಗಲಿ ಹೇಳಲಿಲ್ಲ, ಆ ದಿನ ಅಂದರೆ ಐದುಸಾವಿರ ವರ್ಷಗಳ ಕೆಳಗೆ ಭೂಮಿ ಮೇಲೆ ಮತಗಳ ಪ್ರಸಂಗವೇ ಇಲ್ಲ. ಆದ್ದರಿಂದ ಆ ಕಾಲದಲ್ಲಿ ಹೇಳಿರುವ ಭಗವದ್ಗೀತೆಯಲ್ಲಿ ಮತಗಳ ಪ್ರಸ್ತಾವನೆಯೇ ಬರಲಿಲ್ಲ. ಆ ದಿನ ಭಗವದ್ಗೀತೆಯಲ್ಲಿ ಮುಂಬರುವ ಪೀಳೀಗೆಗೆ ಜ್ಞಾನವನ್ನು ತಿಳಿಸುವುದಕ್ಕೆ ಜ್ಞಾನವನ್ನು ಬೋಧಿಸುವುದು ನಡೆದಿದೆ. ಆದರೇ ಭಗವಂತನು ತಿಳಿಸಿದ ಭಗವದ್ಗೀತೆಯಲ್ಲಿನ ಜ್ಞಾನವನ್ನು ಮನುಷ್ಯರು ಗ್ರಹಿಸದೆ ಇರುವುದರಿಂದ, ನಂತರ ಕಾಲದಲ್ಲಿ ಇತರ ಮತಗಳಾಗಿ ಬದಲಾಗಿ ಬೇರೆಯಾಗಿದ್ದಾರೆ. "ಮತ ಮನುಷ್ಯರ ಗುಂಪನ್ನು ಬೆಳೆಸುತ್ತದೆ" ಎನ್ನುವ ನಮ್ಮ ವಾಕ್ಯದ ಪ್ರಕಾರ ಮನುಷ್ಯರಲ್ಲಿನ ಮತಗಳು ಮನುಷ್ಯರನ್ನು ಗುಂಪುಗಳಾಗಿ, ವರ್ಗಗಳಾಗಿ ತಯಾರುಮಾಡಿವೆ. ಆದ್ದರಿಂದ ಮುಸ್ಲೀಮ್‌ರೆಲ್ಲರು ಒಂದು ವರ್ಗದವರೆಂದು, ಹಾಗೆ ಕ್ರೈಸ್ತವರೆಲ್ಲರು ಒಂದು ವರ್ಗದವರೆಂದು, ಹಾಗೇ ಹಿಂದುಗಳೆಲ್ಲರು ಒಂದು ವರ್ಗದವರೆಂದು ಭಾರತದೇಶದಲ್ಲಿ ಮೂರು ವಿಧಗಳ ಗುಂಪುಗಳಾಗಿ ಮನುಷ್ಯರು ಸೀಳಿಹೋಗಿದ್ದಾರೆ. ಒಬ್ಬ ಮುಸ್ಲೀಮ್‌ಗೆ ಅನ್ಯಾಯ ನಡೆದರೆ ಆ ಮತದವರೆಲ್ಲರೂ ತಮ್ಮ ಗುಂಪಿಗೆ ಅಥವಾ ತಮ್ಮ ಮತದವರಿಗೆಲ್ಲರಿಗೂ ಅನ್ಯಾಯ ನಡೆದಹಾಗೆ ಭಾವಿಸಿ ಅದಕ್ಕೆ ಸ್ಪಂದಿಸುತ್ತಿದ್ದಾರೆ.

ಈ ವಿಧವಾಗಿ ಮತ ಎನ್ನುವ ಉನ್ಮಾದದಲ್ಲಿ ಸಿಕ್ಕಿಕೊಂಡವರು, ಉಳಿದ ವಿಷಯಗಳಿಗಿಂತಲೂ ಮತವೊಂದರ ವಿಷಯದಲ್ಲಿ ಹೆಚ್ಚಾಗಿ ಸ್ಪಂದಿಸುವುದನ್ನು ಗಮನಿಸಿದ ಕೆಲವರು, ಅದನ್ನು ಆಸರೆಯಾಗಿ ಮಾಡಿಕೊಂಡು ತಾವು ಮನುಷ್ಯರಲ್ಲಿ, ಮತಗಳಲ್ಲಿ ಹೆಸರು ಹೊಂದಿದ ವ್ಯಕ್ತಿಗಳಾಗಿ ಇರುವುದಕ್ಕೆ, ನಾಯಕತ್ವವನ್ನು ಹೊಂದುವುದಕ್ಕೆ, ಮತ ಎನ್ನುವುದನ್ನು ಅಡ್ಡ ಇಟ್ಟುಕೊಂಡು ಪ್ರಜೆಗಳನ್ನು ರೊಚ್ಚಿಗೇಳಿಸಿ, ಮನುಷ್ಯರ ಮಧ್ಯದಲ್ಲಿ ಕಲಬೆರಕೆಗಳನ್ನುಂಟು ಮಾಡಿ, ಕಲಬೆರಕೆಗಳಿಂದ ಗುಂಪುಗಳಾಗಿ ಬೇರೆಯಾಗಿರುವ ಮನುಷ್ಯರಿಗೆ ನಾಯಕರಾಗಿ, ದೊಡ್ಡವರಾಗಿ ಪಾತ್ರವನ್ನು ಪೋಷಿಸಬೇಕೆಂದು ಪ್ರಯತ್ನಿಸುತ್ತಿರುವರು. ಅಂತಥವರು ಮತವನ್ನು ಕುರಿತು ಹೆಚ್ಚಾಗಿ ಮಾತನಾಡುತ್ತಿರುವರು. ಮತವನ್ನು

ಕುರಿತು ಮಾತನಾಡುತ್ತಾ ಪರಮತವನ್ನು ದ್ವೇಷಿಸುತ್ತಾ ನಾಯಕರಾಗಿಯೋ, ಮತಹಿರಿಯರಾಗಿಯೋ, ಸ್ವಾಮೀಜಿಗಳಾಗಿಯೋ ಇರುವುದಕ್ಕೆ ಪ್ರಯತ್ನಿಸುವವರು ಪ್ರಮಾದಕರವಾದ ಮನುಷ್ಯರೆಂದು, ಅಂತಹವರು ಅಮಾಯಕ ಪ್ರಜೆಗಳನ್ನು ಹಿಂಸೆಗೆ ಬಲಿ ಮಾಡುತ್ತಿರುವರೆಂದು ಪ್ರಜೆಗಳು ಗ್ರಹಿಸಬೇಕು. **ಮತಗಳೊಂದಿಗೆ ಮನುಷ್ಯರನ್ನು ರೊಚ್ಚಿಗೇಳಿಸಿ, ಮನುಷ್ಯರ ಮಧ್ಯೆ ಕಲಬೆರಕೆಗಳನ್ನುಂಟು ಮಾಡಿ, ಮತವನ್ನು ದೇವರ ಭಕ್ತಿಯಾಗಿ ಹೋಲಿಸುವವರು, ಎಂತಹವರಾದರೂ ದೇವರ ದೃಷ್ಠಿಯಲ್ಲಿ ಕ್ಷಮಿಸಲಾರದವರೆಂದು ತಿಳಿಯಬೇಕು**. ದೈವಜ್ಞಾನ ತಿಳಿಯದವರು ಪರಮತ ದ್ವೇಶವನ್ನು, ಸ್ವಮತ ಅಭಿಮಾನವನ್ನು ಹೊಂದಿರುವರು. ದೈವಜ್ಞಾನವಿರುವವರು ಪರಮತವನ್ನು ಸಹ ತನ್ನ ಮತವಾಗಿಯೇ ಅಭಿಮಾನಿ ಸುತ್ತಿರುವರು. ದೈವಜ್ಞಾನವಿರುವವರು ಯಾರಾದರೂ ಎಲ್ಲಾ ಮತಗಳಲ್ಲಿ ಇಂದೂ ಜ್ಞಾನವನ್ನು ನೋಡುವರು. ಎಲ್ಲಾ ಮತಗಳಲ್ಲಿ ದೈವ ಒಬ್ಬನೇ ಎಂದು, ಎಲ್ಲಾ ಮತಗಳ ಗ್ರಂಥಗಳು ಒಬ್ಬ ದೇವರನ್ನೇ ಬೋಧಿಸಿವೆಯೆಂದು ಹೇಳುತ್ತಿರು ವರು. ಆ ಪದ್ಧತಿ ಪ್ರಕಾರವೇ ನನಗೂ ಸಹ ಸ್ವಮತ ಅಭಿಮಾನವಾಗಲಿ, ಪರಮತ ದ್ವೇಷವಾಗಲಿ ಇಲ್ಲ. ಆದ್ದರಿಂದ ನಮ್ಮ ಬೋಧನೆಗಳಲ್ಲಿ ಎಲ್ಲೂ ಮತ ಪ್ರಸಕ್ತಿಯೇ ಇರುವುದಿಲ್ಲ. ತ್ರೈತ ಸಿದ್ಧಾಂತ ಎಲ್ಲಾ ಮತ ಗ್ರಂಥಗಳಲ್ಲಿ ಇರುವುದರಿಂದ ಎಲ್ಲಾ ಮೂಲ ಗ್ರಂಥಗಳು ನನಗೆ ಸಮಾನವೇ ಎಂದು ಮೊದಲೇ ಹೇಳಿದ್ದೇನೆ. ಅದರ ಪ್ರಕಾರವೇ ಎಲ್ಲಾ ಗ್ರಂಥಗಳಲ್ಲಿಯೂ ನನಗೆ ಬಹಳ ಇಷ್ಟವಾದ ವಾಕ್ಯಗಳಿವೆಯೆಂದು ಸಹ ಹೇಳಿದ್ದೇನೆ.

ನಾನು ಇಷ್ಟು ಹೇಳಿದರೂ ನಂಬದವರು ಎಲ್ಲಾ ಮತಗಳಲ್ಲಿಯೂ ಕೆಲವರಿರಬಹುದು. ಅಂತಹವರಿಗೆ ಅರ್ಥ ಆಗುವುದಕ್ಕೆ ನಾನು ಮತ್ತೊಂದು ಮಾತು ಹೇಳುತ್ತಿದ್ದೇನೆ. ಅದೇನೆಂದರೆ! ನನ್ನ ತ್ರೈತ ಸಿದ್ಧಾಂತ ಎಲ್ಲಿದೆಯೋ ಅದೆಲ್ಲವೂ ನನ್ನದೇ ಅಂದುಕೊಂಡಾಗ, ಅದನ್ನು ಕುರಿತು ಬೇರೆಯಾಗಿ ಮಾತನಾಡುವುದಾಗಲಿ, ವಿರುದ್ಧವಾಗಿ ಮಾತನಾಡುವುದಾಗಲಿ ಇರುವುದಿಲ್ಲ ವಲ್ಲ! ಆದ್ದರಿಂದ ನನ್ನ ತ್ರೈತ ಸಿದ್ಧಾಂತವಿರುವ ಎಲ್ಲಾ ಗ್ರಂಥಗಳನ್ನು ಗೌರವಿ ಸುತ್ತಿದ್ದೇನೆ, ಅವುಗಳನ್ನು ಕುರಿತು ಹೇಳುತ್ತಿದ್ದೇನೆ. ನನ್ನ ವಿಧಾನವನ್ನು ಯಾರು

ಆಚರಿಸಿದರೂ ಭಾರತದೇಶವೆಲ್ಲಾ ಪುನಃ ಜ್ಞಾನವಿರುವ ದೇಶವಾಗಿ ಬದಲಾಗ ಬಲ್ಲದು. ಆಗ ನಿಜವಾದ ಇಂದೂ ದೇಶ ಆಗಬಲ್ಲದು. ನಾನು ಇಂದೂ (ಹಿಂದೂ) ಸಮಾಜದಲ್ಲಿ ಹುಟ್ಟಿದವನಾಗಿ ಕಾಣಿಸಿದರೂ, ಉಳಿದ ಮತಗಳವರು ಅವರ ಗ್ರಂಥಗಳಲ್ಲಿ ತಿಳಿದಿರುವುದಕ್ಕಿಂತ, ಸ್ವಲ್ಪ ಹೆಚ್ಚಾಗಿಯೇ ಗ್ರಹಿಸಿದವನೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದೇನೆ. ಹಾಗೆ ಏಕೆ ಹೇಳುತ್ತಿದ್ದೇನೆಂದರೆ! ಅವರಿಗೆ ಅವರ ಗ್ರಂಥಗಳಲ್ಲಿ ತ್ರೈತಸಿದ್ಧಾಂತವಿರುವಹಾಗೆ ತಿಳಿಯದು ಅಲ್ಲವೆ! ಆದ್ದರಿಂದ ಅವರಿಗಿಂತಲೂ ಸ್ವಲ್ಪ ನಾನೇ ದೊಡ್ಡವನೆಂದು ಹೇಳುವುದು ನಡೆದಿದೆ. ಪ್ರಸ್ತುತವಿರುವ ಯಾವಮತದಲ್ಲಾದರೂ ತ್ರೈತ ಸಿದ್ಧಾಂತವೆಂದರೆ ಏನೋ ತಿಳಿಯದು. ಹಿಂದೂ ಮತದಲ್ಲಿನವರು ತ್ರೈತ ಸಿದ್ಧಾಂತವೆನ್ನುವ ಹೆಸರು ಕೇಳಿದ ಕೂಡಲೆ ತ್ರೈತವೆಂದರೆ ಕ್ರೈಸ್ತವವೆಂದು, ನನ್ನನ್ನು ಕ್ರೈಸ್ತವನೆಂದು ಅಂದುಕೊಂಡವರು ಬಹಳ ಜನ ಇದ್ದಾರೆ. ಹೆಚ್ಚಾಗಿ ತ್ರೈತ ಸಿದ್ಧಾಂತವನ್ನು ಕುರಿತು ಹೇಳಿದ ಭಗವದ್ಗೀತೆಯಿರುವ ಹಿಂದೂಗಳಿಗೇ ತ್ರೈತವನ್ನು ಕುರಿತು ಅರ್ಥವಾಗದೆ ಇರುವಾಗ, ಉಳಿದ ಮತಗಳವರಿಗೆ ಅವರ ಗ್ರಂಥಗಳಲ್ಲಿ ಹೇಳಿದ ತ್ರೈತ ತಿಳಿಯದೆಂದೇ ಹೇಳಬಹುದು.

ತ್ರೈತ ಸಿದ್ಧಾಂತ ತಿಳಿಯದ ಕಾಲದಲ್ಲಿ, ಸೃಷ್ಟ್ಯಾದಿಯಲ್ಲಿ ದೇವರು ಹೇಳಿದ ಜ್ಞಾನದಲ್ಲಿ ತ್ರೈತವಿದೆಯೆಂದು, ಅದೇ ವಿಷಯವನ್ನೇ ಐದುಸಾವಿರ ವರ್ಷಗಳ ಪೂರ್ವದಲ್ಲಿ ಹೇಳಿದ ಭಗವದ್ಗೀತೆಯಲ್ಲಿ ಸಹ ಹೇಳಿದ್ದಾನೆಂದು, ಅಷ್ಟೇ ಅಲ್ಲದೆ ಉಳಿದ ಮತ ಗ್ರಂಥಗಳಲ್ಲಿಯೂ ಸಹ ಹೇಳಿದ್ದಾರೆಂದು ನಾವು ತಿಳಿಸುತ್ತಿದ್ದೇವೆ. ಆ ವಿಷಯವನ್ನು ಉದಾಹರಣೆಯಾಗಿ ತೋರಿಸುತ್ತಾ, ಪವಿತ್ರ ಖುರಾನ್ ಗ್ರಂಥಗಳಲ್ಲಿ 50ನೇ ಸುರಾ ಆದ ಖಾಫ್ ಸುರಾದಲ್ಲಿ 21ನೇ ಆಯತ್‌ನಲ್ಲಿ ತ್ರೈತ ಸಿದ್ಧಾಂತ ಇರುವಹಾಗೆ ತೋರಿಸುವುದು ನಡೆದಿದೆ. ಹಾಗೆ ತೋರಿಸುವುದೇ ಅಲ್ಲದೆ ಖುರಾನ್‌ಗ್ರಂಥದಲ್ಲಿ ನನಗೆ ಬಹಳ ಇಷ್ಟವಾದ 112ನೇ ಸುರಾವನ್ನು ಕುರಿತು ಸಹ ಹೇಳಿದ್ದೇನೆ. ಖುರಾನ್ ಗ್ರಂಥದಲ್ಲಿ 112 ಸುರಾದಲ್ಲಿ ಇರುವ ವಾಕ್ಯವನ್ನೇ ದೊಡ್ಡದಾಗಿ ಹೇಳುವುದೇ ಅಲ್ಲದೆ ಸುರಾ 112 ಸಂಖ್ಯೆ

ಯೊಂದರ ವಿಶೇಷತೆಯನ್ನು ಸಹ ಹೀಗೆ ಹೇಳುತ್ತಿದ್ದೇನೆ ನೋಡಿ. ತ್ರೈತದಲ್ಲಿ ಮೂರು ಆತ್ಮಗಳಿವೆ. ಆ ವಿಷಯವನ್ನು ಶಾಸ್ತ್ರಬದ್ಧವಾಗಿ ಹೇಳುವುದನ್ನೇ ಸಿದ್ಧಾಂತ ಎನ್ನುತ್ತಿದ್ದೇವೆ. ತ್ರೈತ ಸಿದ್ಧಾಂತದ ಪ್ರಕಾರ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳಲ್ಲಿ ಮೊದಲ ಎರಡು ಆತ್ಮಗಳು ಜೋಡಿ ಆತ್ಮಗಳಾಗಿ ಇವೆ. ಜೀವಾತ್ಮ, ಆತ್ಮ ಎನ್ನುವ ಎರಡು ಆತ್ಮಗಳಿಗಿಂತ ಬೇರೆಯಾಗಿ ಪರಮಾತ್ಮ (ದೈವ) ಇದೆ. ಪ್ರತಿ ಮನುಷ್ಯನ ಶರೀರದಲ್ಲಿ ಜೀವಾತ್ಮನಿಗೆ ಅನುಭಂಧವಾಗಿ ಆತ್ಮ ಇರುತ್ತದೆ. ಆದ್ದರಿಂದ ಮನುಷ್ಯ ಹಸ್ತದಲ್ಲಿಯೂ ಸಹ ಕೆಳಗೆ ಎರಡು ರೇಖೆಗಳು ಸೇರಿದ್ದು ಮೇಲೆ ಬೇರೆಯಾಗಿ ಒಂದು ರೇಖೆ ಇದೆ. ಕಲೆತಿರುವ ಎರಡು ರೇಖೆಗಳನ್ನು ಜೀವಾತ್ಮ ಆತ್ಮಗಳಾಗಿ ಹೇಳಿಕೊಳ್ಳಬಹುದು. ಕೆಳಗೆ ಎರಡು ರೇಖೆಗಳಿಗು ಸಂಬಂಧವಿಲ್ಲದೆ ಮೇಲೆ ಪ್ರತ್ಯೇಕವಾಗಿರುವ ರೇಖೆಯನ್ನು ಪರಮಾತ್ಮ ಗುರುತಾಗಿ ಹೇಳಿಕೊಳ್ಳಬಹುದು. ಹಸ್ತದಲ್ಲಿ ಒಟ್ಟು ಮೂರು ರೇಖೆಗಳಿವೆ, ಹಾಗೇ ಅಲ್‌ಇಖ್ಲಾಸ್ ಎನ್ನುವ 112ನೇ ಸುರಾ ಮೂರು ಸಂಖ್ಯೆಗಳೊಂದಿಗೆ ಕೂಡಿಕೊಂಡಿದೆ. 112ನೇ ಸುರಾ ಹೆಸರು ಅಲ್ ಇಖ್ಲಾಸ್. ಇದರ ಅರ್ಥ ಪ್ರತ್ಯೇಕಿಸಿಕೊಳ್ಳುವುದು ದೇವರು ಸರ್ವಕ್ಕೂ ಪ್ರತ್ಯೇಕವಾದವನು ಆದ್ದರಿಂದ "ಪ್ರ" ಎಂದರೆ ಮುಖ್ಯವಾದ ಅಥವಾ ದೊಡ್ಡದಾದ ಎಂದು ಹೇಳಬಹುದು. ವಿಶೇಷತೆ ಇರುವ ಯಾವುದಕ್ಕಾದರೂ "ಪ್ರ" ಎನ್ನುವ ಶಬ್ದವನ್ನು ಸೇರಿಸಿ ಹೇಳಬಹುದು. ಉದಾಹರಣೆಗೆ ಪ್ರಕೃತಿ, ಪ್ರಮುಖರು, ಪ್ರಸಿದ್ಧಿ, ಪ್ರಪಂಚ, ಪ್ರಜೆಗಳು ಈ ವಿಧವಾಗಿ ಎಷ್ಟೋ ಸಂದರ್ಭಗಳಲ್ಲಿ ವಿಶೇಷತೆ ಇರುವುದನ್ನು ಕುರಿತು ಹೇಳಿದಾಗ "ಪ್ರ" ಎನ್ನುವ ಅಕ್ಷರವನ್ನು ಉಪಯೋಗಿಸುತ್ತೇವೆ. ಇಲ್ಲಿ ಏಕತೆ ಎಂದರೆ ಒಂದೇ ಅಥವಾ ಒಬ್ಬನೇ ಎನ್ನುವ ವಿಷಯಕ್ಕು ಮೊದಲು ಪ್ರ ಎನ್ನುವ ಶಬ್ಧವನ್ನು ಬಳಸುವುದರಿಂದ ಏಕತೆ (ಒಬ್ಬನು) ಎನ್ನುವುದು ಎಲ್ಲದಕ್ಕಿಂತ ದೊಡ್ಡದು, ಮುಖ್ಯವಾದದ್ದು, ಅಪರೂಪವಾದದ್ದು. ಆದ್ದರಿಂದ ಏಕತೆ ಮುಂದೆ "ಪ್ರ" ನ್ನು ಇಟ್ಟು ಪ್ರ+ಏಕತೆ = ಪ್ರತ್ಯೇಕತೆ ಎನ್ನುವ ಶಬ್ದವಾಗಿ ಹೇಳಿದ್ದಾರೆ. ಪ್ರಪಂಚದಲ್ಲಿ ಇರುವವುಗಳಲ್ಲಿ ಎಲ್ಲದಕ್ಕಿಂತ ದೇವರು ಏಕವಾದವನು ಮತ್ತು ಪ್ರತ್ಯೇಕವಾದವನು ಆದ್ದರಿಂದ 112 ಸುರಾ ಹೆಸರು ಪ್ರತ್ಯೇಕಿಸಿಕೊಳ್ಳುವುದು

ಎಂದು ಇದೆ. ದೇವರನ್ನು ಯಾವುದರೊಂದಿಗೆ ಸಮಾನವಾಗಿ ಹೋಲಿಸದೆ ಪ್ರತ್ಯೇಕಿಸಿಕೊಳ್ಳಬೇಕು. ಆದ್ದರಿಂದ ಅದೇ ಹೆಸರನ್ನೇ ಅರಬಿಕ್ ಭಾಷೆಯಲ್ಲಿ "ಅಲ್‌ಇಖ್ಲಾಸ್" ಎಂದು ಹೇಳಿದ್ದಾರೆ. ಅಲ್ ಇಖ್ಲಾಸ್ ಎಂದರೆ ಪ್ರತ್ಯೇಕತೆ ಹೊಂದಿದೆಯೆಂದು ತಿಳಿದಾಗ, ಒಟ್ಟು ಖುರಾನ್ ಗ್ರಂಥದಲ್ಲೇ 112 ಸುರಾ ಪ್ರತ್ಯೇಕವಾದ ದೇವರ ಜ್ಞಾನವನ್ನು ತಿಳಿಸಿದ ಅಧ್ಯಾಯವಾಗಿ ಲೆಕ್ಕಿಸಬಹುದು. ಅಷ್ಟೇ ಅಲ್ಲದೆ ಹೆಸರಿಗೆ ತಕ್ಕಹಾಗೆ 112 ಸುರಾದಲ್ಲಿ ಒಂದೇ ದೇವರ ಜ್ಞಾನ ನಾಲ್ಕು ವಾಕ್ಯಗಳಲ್ಲಿ ಹೇಳಲಾಗಿದೆ.

112ನೇ ಸುರಾ ಹೆಸರಲ್ಲೇ ಪ್ರತ್ಯೇಕತೆ ಇದೆ. ಅದರಲ್ಲಿನ ಜ್ಞಾನ ಅತ್ಯುನ್ನತವಾದ ನಾಲ್ಕು ವಾಕ್ಯಗಳೊಂದಿಗೆ ದೇವರನ್ನು ಕುರಿತು ಹೇಳಲಾಗಿದೆ. 112ನೇ ಸುರಾ ಹೆಸರಲ್ಲಿಯೂ, ಅದರಲ್ಲಿನ ಆಯತ್‌ಗಳಲ್ಲಿಯೂ ಸಕಲವನ್ನೂ ಸೃಷ್ಟಿಸಿರುವ ಸೃಷ್ಟಿಕರ್ತನಾದ ದೇವರನ್ನು ಕುರಿತು ಇರುವಾಗ, 112ನೇ ಸುರಾ ಸಂಖ್ಯೆಯಲ್ಲಿ ಸಹ ಪ್ರಾಮುಖ್ಯತೆ ಇದೆ. ಆ ಪ್ರಾಮುಖ್ಯತೆ ಏನೆಂದರೆ! ಮಾನವನು ಯಾವ ಜಾತಿಯವನಾದರೂ ಕಪ್ಪುಜಾತಿ ನೀಗ್ರೋ ಆದರೂ, ಬಿಳಿಜಾತಿ ಅಮೆರಿಕಾದವನಾದರೂ, ಗಿಡ್ಡಜಾತಿ ಜಪಾನ್‌ದವನಾದರೂ, ಯಾವ ಮತದವನಾದರೂ ಅರಬ್ ದೇಶದಲ್ಲಿನ ಮುಸ್ಲೀಮ್ ಆದರೂ, ಇಸ್ರಯೇಲ್‌ನಲ್ಲಿನ ಕ್ರೈಸ್ತವನಾದರೂ, ಭಾರತದೇಶದಲ್ಲಿನ ಹಿಂದೂ ಆದರೂ ಶರೀರದಿಂದಲೇ ಜೀವಿಸುತ್ತಿದ್ದಾರೆ. ಶರೀರದಲ್ಲಿ ಕೆಲಸವನ್ನು ಮಾಡುವ ಕರ್ಮೇಂದ್ರಿಯಗಳು ಐದು. ಪ್ರಪಂಚ ಜ್ಞಾನವನ್ನು ತಿಳಿಸುವ ಜ್ಞಾನೇಂದ್ರಿಯಗಳು ಐದು ಎಲ್ಲರ ಶರೀರಗಳಿಗು ಇವೆ. ಕರ್ಮೇಂದ್ರಿಯಗಳಲ್ಲಿ ಹಸ್ತ ಪ್ರಧಾನವಾದದ್ದು. ಹಾಗೇ ಜ್ಞಾನೇಂದ್ರಿಯಗಳಲ್ಲಿ ನಯನ (ಕಣ್ಣು) ಪ್ರಧಾನವಾದದ್ದು. ಈ ಹಸ್ತ, ಕಣ್ಣು ಎರಡೂ ಪ್ರಪಂಚದಲ್ಲಿನ ಮಾನವರೆಲ್ಲರಿಗೂ ಮುಖ್ಯವಾದವೇ ಎಂದು ಒಪ್ಪಿಕೊಳ್ಳದೇ ತಪ್ಪುವುದಿಲ್ಲ. ಈ ಎರಡು ಅವಯವಗಳು ಏಕೆ ಎಲ್ಲಾ ಬಾಹ್ಯೇಂದ್ರಿಯಗಳಿಗಿಂತ ಮುಖ್ಯವಾದವೆಂದು ಪ್ರಶ್ನೆ ಬಂದರೆ, ಅದಕ್ಕೆ ಈ ವಿಧವಾಗಿ ಉತ್ತರವನ್ನು ಹೇಳಬಹುದು. ಜ್ಞಾನೇಂದ್ರಿಯಗಳಲ್ಲಿ ಪ್ರಧಾನವಾದ ಕಣ್ಣಿನಲ್ಲಿಯೂ, ಕರ್ಮೇಂದ್ರಿಯಗಳಲ್ಲಿ ಮುಖ್ಯವಾದ ಹಸ್ತದಲ್ಲಿಯೂ ತ್ರೈತ




ಕಣ್ಣಿನಲ್ಲಿ ತ್ರೈತ




ಹಸ್ತದಲ್ಲಿ ತ್ರೈತ

ಸೂತ್ರ ಒಳಗೊಂಡಿದೆ. ಆದ್ದರಿಂದ ಮೇಲೆ ಕಣ್ಣು, ಕೆಳಗೆ ಹಸ್ತ ಎರಡೂ ಬಾಹ್ಯ ಶರೀರದಲ್ಲಿ ಮುಖ್ಯವಾದವೆಂದು ಹೇಳಬಹುದು. ಪಕ್ಕದ ಪುಟ ಚಿತ್ರಗಳಲ್ಲಿ ಕಣ್ಣಿನಲ್ಲಿ, ಹಸ್ತದಲ್ಲಿ ಮೂರು ಆತ್ಮಗಳ ಸಿದ್ಧಾಂತ ಹೇಗೆ ಇರುವುದು ನೋಡಬಹುದು.

ಈ ವಿಧವಾಗಿ ಪ್ರತಿ ಮನುಷ್ಯ ಶರೀರಕ್ಕೆ ಹೊರಗೆ ಕಾಣಿಸುವ ಹಸ್ತದಲ್ಲಿ ಮೂರು ರೇಖೆಗಳನ್ನು ಮೂರು ಆತ್ಮಗಳಗುರುತಾಗಿ ದೇವರಿಟ್ಟಿದ್ದಾನೆ. ಅದರಲ್ಲಿ ಎರಡು ಆತ್ಮಗಳ ತುದಿಗಳು ಕಲೆತಿದ್ದು ಜೋಡಿ ಆತ್ಮಗಳಾಗಿ ಕಾಣಿಸುತ್ತಿವೆ. ಜೋಡಿ ಆತ್ಮಗಳಾದ ಜೀವಾತ್ಮ, ಆತ್ಮಗಳು ಎರಡೂ ಒಂದು ಭಾಗವಾಗಿ ಇರುವಾಗ, ಮೂರನೆಯದಾದ ಪರಮಾತ್ಮ ಮೇಲೆ ಪ್ರತ್ಯೇಕವಾಗಿ ಇರುವಹಾಗೆ ಕಾಣಿಸುತ್ತಿದೆ. ಹಸ್ತದಲ್ಲಿ ಜೀವಾತ್ಮ, ಆತ್ಮಗಳು ಎರಡೂ ಹಸ್ತದಲ್ಲಿ ಎರಡು ರೇಖೆಗಳಾಗಿ ಒಂದರ ಪಕ್ಕದಲ್ಲಿ ಒಂದು ಕಾಣಿಸುತ್ತಾ, ಒಂದುಕೊನೆಯಲ್ಲಿ ಎರಡು ತುದಿಗಳು ಸೇರಿ ನಾವು ಜೋಡಿ ಆತ್ಮಗಳೆಂದು ಹೊರಗೆ ತಿಳಿಸಿದಹಾಗೆ, ಕಣ್ಣುಗಳು ಸಹ ಎರಡು ಆತ್ಮಗಳು ಜೋಡಿಯಾಗಿದ್ದಹಾಗೆ ತಿಳಿಯುತ್ತದೆ. ಹಾಗೇ ಎರಡು ಆತ್ಮಗಳಿಗು ಅತೀತವಾಗಿ ಮೂರನೆ ಆತ್ಮ ಇರುವಹಾಗೆ ಕಾಣಿಸುತ್ತಿದೆ. ಕಣ್ಣಿನಲ್ಲಿ ವಿಶಾಲವಾಗಿ ಬಿಳಿ ಗುಡ್ಡೆ ಇರುವಾಗ, ಅದರಲ್ಲಿ ಅದಕ್ಕಿಂತ ಸಣ್ಣದಾಗಿ ಎಳೆ ಕರಿ ಗುಡ್ಡೆ ಗುಂಡಾಗಿ ಬಾರೆಹಣ್ಣಿನ ಬೀಜದ ಗಾತ್ರದಲ್ಲಿ ಇದೆ. ಗುಂಡಾಗಿರುವ ಕರೆಗುಡ್ಡೆ ಕೆಲವರಲ್ಲಿ ಗೋಧಿಬಣ್ಣವಾಗಿ ಕೆಲವರಲ್ಲಿ ನೀಲಿಬಣ್ಣವಾಗಿ ಸಹ ಇದೆ. ಎಳೆ ಕಪ್ಪು ಬಣ್ಣದಲ್ಲಿರುವ ಗುಂಡಾಗಿರುವ ಗುಡ್ಡಿನಲ್ಲಿ ಸಾಸಿವೆಕಾಳಷ್ಟು ಸೈಜಿನ ವರೆಗು ಪೂರ್ತಿ ಕರೆ ಗುಂಡಾದ ಕಣ್ಣಪಾಪೆ ಎನ್ನುವ ಭಾಗವಿರುತ್ತದೆ. ಕರೆಗುಡ್ಡೆ ಅದರಲ್ಲಿನ ದುಂಡಾದ ಪಾಪೆ ಎರಡೂ ಎರಡು ಜೋಡಿ ಆತ್ಮಗಳಿಗೆ ಗುರುತಾಗಿವೆ. ಸಣ್ಣ ಕರೆ ಕಣ್ಣಪಾಪೆಯನ್ನು ಜೀವಾತ್ಮನಾಗಿ, ಕಪ್ಪನೆಯ ದೊಡ್ಡಗುಡ್ಡೆಯನ್ನು ಆತ್ಮನಾಗಿ ಲೆಕ್ಕಿಸಿದಾಗ, ಪೂರ್ತಿ ವಿಶಾಲವಾಗಿ ಪೂರ್ತಿ ಬಿಳಿಯಾಗಿರುವ ಕಣ್ಣನ್ನು ಪರಮಾತ್ಮನಾಗಿ ಗುರುತಿಸಬಹುದು. ಹಸ್ತದಲ್ಲಿ ಎರಡು ಜೋಡು ಆತ್ಮಗಳೆನ್ನುವದಕ್ಕೆ ಎರಡು ಆತ್ಮಗಳ ತುದಿಗಳು ಒಂದಾಗಿ ಕಲೆತಿವೆ. ಅದೇ ವಿಧವಾಗಿ ಕಣ್ಣಿನಲ್ಲಿ ಕರೆಗುಡ್ಡು, ಅದರಲ್ಲಿ ಪೂರ್ತಿ ಕಪ್ಪದಾಗಿರುವ ಸಣ್ಣ

ಗುಡ್ಡೆ ಎರಡೂ ಒಂದೇ ವಿಧವಾಗಿ ಆಕೃತಿ ಬಣ್ಣ ಹೊಂದಿರುವುದರಿಂದ, ಆ ಎರಡೂ ಆತ್ಮ ಜೀವಾತ್ಮಗಳಾಗಿ ಗುರುತು ಹೊಂದಿವೆ. ಈ ವಿಧವಾಗಿ ಹಸ್ತದಲ್ಲಿಯೂ, ಕಣ್ಣಿನಲ್ಲಿಯೂ ತ್ರೈತ ಸಿದ್ಧಾಂತವನ್ನು ದೇವರು ಪ್ರತಿ ಮನುಷ್ಯನಿಗೂ ಜೋಡಿಸಿದ್ದಾನೆ.

ಈಗ ಅಸಲು ವಿಷಯಕ್ಕೆ ಬರೋಣ. ಸಂಖ್ಯೆಯಲ್ಲಿ ದೊಡ್ಡದು 9 ಮಾತ್ರವೇ. ಉಳಿದಿರುವವೆಲ್ಲಾ ಅದಕ್ಕಿಂತ ಸಣ್ಣವೇ. ಎಲ್ಲದಕ್ಕಿಂತ ದೊಡ್ಡ (ಬ್ರಹ್ಮ) ಆದ ದೇವರನ್ನು ಸಂಖ್ಯೆಗಳಲ್ಲಿ '9' ಸಂಖ್ಯೆಯಾಗಿ ಗುರುತಿಸಬಹುದು. ಹಾಗೇ ಆತ್ಮನನ್ನು '6' ಸಂಖ್ಯೆಯಾಗಿ, ಜೀವಾತ್ಮನನ್ನು '3' ಸಂಖ್ಯೆಯಾಗಿ ಹೇಳಬಹುದೆಂದು ನಮ್ಮ ರಚನೆಗಳಲ್ಲಿ **"ಸೃಷ್ಟಿಕರ್ತ ಕೋಡ್"** ಎನ್ನುವ ಸಣ್ಣ ಗ್ರಂಥದಲ್ಲಿ ವಿವರವಾಗಿ ಹೇಳಿದ್ದೇವೆ. ಹಾಗೇ ಮತ್ತೊಂದು ಗ್ರಂಥವಾದ **"ಜನನ ಮರಣ ಸಿದ್ಧಾಂತ"** ಅನ್ನುವ ಗ್ರಂಥದಲ್ಲಿ ಜೀವಾತ್ಮ ಆತ್ಮದೊಂದಿಗೆ ಸೇರಿದಾಗ ಆತ್ಮವೊಂದರ ರೂಪ ಬದಲಾಗಿ ಪರಮಾತ್ಮನೊಳಗೆ ಸೇರಿಹೋಗುವನೆಂದು ಹೇಳಿದ್ದೇವೆ. ಜೀವಾತ್ಮ ಆತ್ಮ ಸೇರಿದರೆ ದೈವವಾಗಿ ಬದಲಾಗುವರೆಂದು ಹೇಳುವುದಕ್ಕೆ ಸಂಖ್ಯೆಗಳಲ್ಲಿನ 3+6=9 ಎಂದು ಬರೆದಿದ್ದಾರೆ. ಅದೇ ಸೂತ್ರವನ್ನು ಮತ್ತೊಂದು ವಿಧವಾಗಿ ಸಹ ಹೇಳಬಹುದು. ಅದು ಹೇಗೆಂದರೆ! ಜೀವಾತ್ಮ, ಆತ್ಮ ಸೇರಿದರೆ ಪರಮಾತ್ಮ ಆಗುತ್ತದೆಂದು ಹೇಳುವ ಸೂತ್ರದ ಪ್ರಕಾರ 1+1=2 ಎಂದು ಸಹ ಹೇಳಬಹುದು. ಮೊದಲು ಹೇಳಿದ ವಿಧಾನದಲ್ಲಿ ಮೂರು ಎನ್ನುವ ಜೀವಾತ್ಮ, ಆರು ಎನ್ನುವ ಆತ್ಮ ಸೇರಿದಾಗ, ಒಂಬತ್ತು ಎನ್ನುವ ಪರಮಾತ್ಮ ಆಗುತ್ತಿದೆಯೆಂದು ಹೇಳಿದಹಾಗೆ, ಒಂದು ನ್ನುವ ಜೀವಾತ್ಮ ಮತ್ತೊಂದು ಎನ್ನುವ ಆತ್ಮ ಸೇರಿದಾಗ ಒಟ್ಟು ಎರಡು ಎನ್ನುವ ಪರಮಾತ್ಮ ಆಗುತ್ತದೆಂದು ಹೇಳಬಹುದು. ಅದೇ ಅಂಕೆಗಳನ್ನೇ ಮಧ್ಯದಲ್ಲಿ ಪ್ಲಸ್, ಈಜಿಕೋಲ್ಟ್‌ಗಳನ್ನು ತೆಗೆದುಹಾಕಿ ಬರೆದರೆ 112 ಆಗುತ್ತದೆ. ಜೀವಾತ್ಮನಾದ ಮನುಷ್ಯನ ಒಳಗೆ ತನಗೆ ಜೊತೆಯಾಗಿ ಇರುವ ಆತ್ಮನನ್ನು ತಿಳಿದುಕೊಂಡು, ಪರಮಾತ್ಮನನ್ನು ಸೇರಬೇಕೆನ್ನುವ ಭಾವನೆಯನ್ನು ಸೂಚನೆಯಾಗಿ ತೋರಿಸುವುದಕ್ಕೆ 112ನ್ನು ತೋರಿಸಬಹುದು. 112 ಎನ್ನುವ ಸಂಖ್ಯೆಯೊಳಗೆ ಎಷ್ಟು ದೊಡ್ಡ ಭಾವ ಒಳಗೊಂಡಿದೆಯೋ ಈಗ ಅರ್ಥವಾಗಿದೆಯಾ! ಜೀವಾತ್ಮ

ಆತ್ಮ ಸೇರಿದರೆ ಪರಮಾತ್ಮ ಆಗುತ್ತದೆಂದು ತ್ರೈತ ಸಿದ್ಧಾಂತದಲ್ಲಿನ ಮೂರು ಆತ್ಮಗಳನ್ನು 112 ತೋರಿಸುತ್ತಿದೆ. ಆದ್ದರಿಂದ ಖುರಾನ್ ಗ್ರಂಥದಲ್ಲಿ ಸಹ 112 ಸುರಾದಲ್ಲಿರುವ ಸಮಾಚಾರ ಪೂರ್ತಿಯಾಗಿ ದೇವರನ್ನು ಕುರಿತು ತಿಳಿಸಿರುವುದೇ ಎಂದು ತಿಳಿಯಬೇಕು.

ಸೃಷ್ಠ್ಯಾದಿಯಲ್ಲಿ ತ್ರೈತವಾಗಿ ವಿಭಜನೆಯಾಗಿರುವ ದೇವರು ತನ್ನ ಜ್ಞಾನವನ್ನು ಭೂಮಿ ಮೇಲೆ ತಿಳಿಸಿದಾಗ, ತ್ರೈತವಾಗಿರುವ ಜೀವಾತ್ಮ, ಆತ್ಮ, ಪರಮಾತ್ಮರನ್ನು ಕುರಿತು ತನ್ನ ಗ್ರಂಥಗಳಲ್ಲಿ ತಿಳಿಸಿದ್ದಾನೆ. ಅಷ್ಟೇ ಅಲ್ಲದೆ ತನ್ನ ವಿಧಾನವನ್ನು ಯಾರೂ ಮರೆತುಹೋಗದಿರುವುದಕ್ಕೆ ಯುಗಗಳೊಂದರ ಹೆಸರುಗಳನ್ನು ತ್ರೈತಾಯೋಗ ಎಂದೂ, ದ್ವಾಪರಯೋಗವೆಂದೂ ಹೆಸರು ಇಟ್ಟು ಇರಿಸಿದ್ದಾನೆ. ಮೂರನೆಯವನಾಗಿರುವ ದೇವರೊಳಗೆ ಸೇರಿಹೋಗೆಂದು ಹೇಳುತ್ತಾ ದ್ವಾಪರಯೋಗ, ತ್ರೈತಾಯೋಗ ಎಂದು ಹೇಳುವುದು ನಡೆದಿದೆ. ಕಾಲಕ್ರಮದಲ್ಲಿ ತ್ರೈತಾ ಎನ್ನುವ ಪದ ತ್ರೇತಾ ಆಗಿದೆ. ಹಾಗೇ ಯೋಗ ಎನ್ನುವ ಪದ ಯುಗ ಎನ್ನುವ ಪದವಾಗಿ ಬದಲಾಗಿದೆ. ಪೂರ್ವವಿರುವ ದ್ವಾಪರ ಯೋಗಕ್ಕೂ, ತ್ರೈತಾಯೋಗಕ್ಕೂ ಅರ್ಥ ಮೂರನೆಯವನೊಳಗೆ ಸೇರಿಹೋಗೆಂದು ಹೇಳುವುದೇ. 'ಯೋಗ' ಎಂದರೆ ಸೇರುವಿಕೆ ಎಂದು, "ವಿಯೋಗ" ಎಂದರೆ ಬೇರೆಯಾಗುವುದೆಂದು ಅರ್ಥ. ದೇವರಿಂದ ವಿಯೋಗದಲ್ಲಿರುವ ಮನುಷ್ಯ ಎರಡಕ್ಕಿಂತಲೂ ಬೇರೆಯಾಗಿರುವ ಮೂರನೆ ಆತ್ಮವಾಗಿರುವ ದೇವರೊಳಗೆ ಸೇರಿಹೋಗೆಂದು ಹೇಳುವುದನ್ನು ದ್ವಾಪರಯೋಗ ಎಂದು ಅಂದಿದ್ದಾರೆ. ತ್ರೈತಾ ಯೋಗವನ್ನು ಹೊಂದಬೇಕೆಂದರೂ ಅಥವಾ ದ್ವಾಪರಯೋಗವನ್ನು ಹೊಂದಬೇಕೆಂದರೂ ಮೊದಲು ತ್ರೈತವೆಂದರೆ ಏನೋ, ದ್ವಾಪರವೆಂದರೆ ಏನೋ ತಿಳಿಯಬೇಕು. ಮೂರು ಆತ್ಮಗಳನ್ನು ಕುರಿತು ತಿಳಿಯದವನು ತಾನು ಜೀವಾತ್ಮನೆಂದು, ತನಗಿಂತಲೂ ಬೇರೆಯಾಗಿ ಆತ್ಮ ಪರಮಾತ್ಮಗಳು ಇವೆಯೆಂದು, ಪರಮಾತ್ಮನನ್ನು ಸೇರುವುದಕ್ಕೆ ಆತ್ಮನನ್ನು ತಿಳಿಯಬೇಕೆಂದು ಗ್ರಹಿಸಲಾರನು. ಮೂರು ಆತ್ಮಗಳ ಜ್ಞಾನವನ್ನು ಗ್ರಹಿಸದವರೆಗು ಜೀವಾತ್ಮ ದೇವರನ್ನು ಸೇರಲಾರನು.

ಜ್ಞಾನವೆಂದರೆ ಏನೋ ಸ್ವಲ್ಪಮಟ್ಟಿಗೆ ತಿಳಿದವರಿಗೇ ಮೂರು ಆತ್ಮಗಳ ವಿವರ ತಿಳಿಯದೆ ಹೋಗಿದೆ. ದೇವರು ತ್ರೈತಸಿದ್ಧಾಂತವನ್ನು ಕುರಿತು ಭಗವದ್ಗೀತೆ, ಬೈಬಲ್, ಖುರಾನ್‌ಗಳಲ್ಲಿ ಹೇಳಿದರೂ ಅದನ್ನು ಕುರಿತು ಏನೂ ತಿಳಿಯದ ವರಿದ್ದಾರೆ. ಜ್ಞಾನಿಗಳೆಂದುಕೊಂಡವರಿಗೆ ಮೂರು ಆತ್ಮಗಳನ್ನು ಕುರಿತು ತಿಳಿಯದಿರುವಾಗ, ಸರ್ವಸಾಧಾರಣ ಮನುಷ್ಯನಿಗೆ ಮೂರು ಆತ್ಮಗಳನ್ನು ಕುರಿತು ತಿಳಿಯುತ್ತದಾ ಎಂದು ಪ್ರಶ್ನೆ ಬರಬಹುದು. ಅದಕ್ಕೆ ಸಮಾಧಾನ ಈ ವಿಧವಾಗಿ ಇದೆ. ಸಾಧಾರಣ ಮನುಷ್ಯನಿಗೆ ಸಹ ತ್ರೈತ ಸಿದ್ಧಾಂತ ತಿಳಿಯುವುದಕ್ಕೆ ಹೊರಗಿನ ವಿಷಯಗಳಲ್ಲಿಯೂ ಸಹ ಅನೇಕ ಕಡೆ ಬಾಹ್ಯವಾಗಿ ಮೂರು ಆತ್ಮಗಳ ವಿಧಾನವನ್ನು ದೇವರು ಎಲ್ಲರಿಗೂ ತಿಳಿಯುವ ಹಾಗೆ ಇಟ್ಟಿದ್ದಾನೆ. ಅದು ಹೇಗೆಂದರೆ! ಉದಾಹರಣೆಗೆ ಒಂದು ವಿಷಯವನ್ನು ನೋಡೋಣ. ಈ ಕಾಲದಲ್ಲಿ ಪ್ರತಿಯೊಂದು ಮನೆಯಲ್ಲೂ ಕರೆಂಟ್ ಕನೆಕ್ಷನ್ ಇರುತ್ತದೆ. ಕರೆಂಟಿರುವ ಪ್ರತಿಯೊಂದು ಮನೆಯಲ್ಲೂ ಸ್ವಿಚ್‌ಬೋರ್ಡು ಇರುತ್ತದೆ. ಆ ಬೋರ್ಡಿನಲ್ಲಿ ಮೂರು ರಂಧ್ರಗಳ ಪ್ಲೆಗ್ ಸಾಕೆಟ್ ಇರುತ್ತದೆ. ಆ ರಂಧ್ರಗಳಲ್ಲಿ ಮೂರು ಪಿನ್ನುಗಳ ಪ್ಲಗ್‌ನ್ನು ಇಟ್ಟು ಕರೆಂಟನ್ನು ಬಳಸಿಕೊಳ್ಳಬಹುದು. ಇದು ಎಲ್ಲರಿಗು ತಿಳಿದಿರುವುದೇ. ಸ್ವಿಚ್ ಬೋರ್ಡಿಗಿರುವ ಮೂರು ರಂಧ್ರಗಳ ಸಾಕೆಟ್ಟನ್ನು ನೋಡಿದರೆ, ಎರಡು ರಂಧ್ರಗಳು ಬಲ ಎಡವಾಗಿ ಸಮಾನವಾಗಿ ಇರುತ್ತದೆ. ಆ ಎರಡು ರಂಧ್ರಗಳಿಗು ಮೇಲೆ ಸಮಾನದೂರದಲ್ಲಿ ಮಧ್ಯೆದಲ್ಲಿ ಮತ್ತೊಂದು ರಂಧ್ರ ಇರುತ್ತದೆ. ಮೇಲಿರುವ ರಂಧ್ರ ಕೆಳಗಿರುವ ಎರಡು ರಂಧ್ರಗಳಿಗಿಂತಲೂ ದೊಡ್ಡ ರಂಧ್ರವಾಗಿರುತ್ತದೆ. ಪ್ಲಗ್ ಸಾಕೆಟ್ಟನ್ನು, ಪ್ಲಗ್ ಪಿನ್‌ಗಳನ್ನು ನಂತರ ಪುಟದಲ್ಲಿ ನೋಡಬಹುದು.

ಪರ ಆತ್ಮ ಶಕ್ತಿಯನ್ನು ಹೋಲಿರುವುದು ಕರೆಂಟು ಶಕ್ತಿ. ಆದ್ದರಿಂದ ಕರೆಂಟು ತ್ರೈತವಾಗಿಯೇ (ಮೂರಾಗಿಯೆ) ಕಾಣಿಸುತ್ತಿದೆ. ಸಾಕೆಟ್ ರಂಧ್ರಗಳಲ್ಲಿ ಕೆಳಗಿರುವ ಎರಡು ರಂಧ್ರಗಳಲ್ಲಿ ಬಲಗಡೆಗಿರುವ ರಂಧ್ರದಲ್ಲಿ ಧನಧೃವ (ಪಾಜಿಟಿವ್) ಇರುತ್ತದೆ. ಎಡಭಾಗದಲ್ಲಿರುವ ರಂಧ್ರದಲ್ಲಿ ಋಣಧೃವ (ನೆಗಿಟಿವ್)






ಇರುತ್ತದೆ. ಕೆಳಗಿರುವ ಎರಡು ರಂಧ್ರಗಳಿಗೂ ಸಮಾನ ದೂರದಲ್ಲಿ ಮೇಲಿರುವ ದೊಡ್ಡ ರಂಧ್ರ ಭೂಮಿಯೊಂದಿಗೆ ಸಂಬಂಧವಿರುತ್ತದೆ, ಅದನ್ನೇ ಎರ್ತ್ ಎನ್ನುತ್ತಾರೆ. ಈ ಮೂರು ಮೇಲಕ್ಕೆ ಕಾಣಿಸುವ ಬೋರ್ಡುನಲ್ಲಿರುವ ಸಾಕೆಟ್ ರಂಧ್ರಗಳು. ಈಗ ಇವುಗಳಲ್ಲಿ ಕೆಳಗಿರುವ ಸಣ್ಣ ಎರಡು ರಂಧ್ರಗಳಲ್ಲಿ ಬಲಗಡೆ ಪಾಜಿಟಿವ್ ಆಗಿರುವುದನ್ನು ಆತ್ಮನಾಗಿಯೂ, ಎಡಗಡೆ ನೆಗಟಿವ್ ಆಗಿ ಇರುವುದನ್ನು ಜೀವಾತ್ಮನಾಗಿ, ಈ ಎರಡು ರಂಧ್ರಗಳಿಗಿಂತಲೂ ದೊಡ್ಡದು ಮೇಲಿರುವುದಾದ ಭೂಮಿ (ಎರ್ತ್) ಎನ್ನುವುದು ಪರಮಾತ್ಮನಾಗಿ ಹೋಲಿಸಿ ಹೇಳಬಹುದು. ಮೂರು ಆತ್ಮಗಳ ಹೋಲಿಕೆಗೆ ಕರೆಂಟು ಬೋರ್ಡಿಗಿರುವ ಮೂರು ರಂಧ್ರಗಳಾಗಲಿ, ಮೂರು ಪ್ಲಗ್‌ಪಿನ್ನುಗಳಿಗಾಗಲಿ ಚೆನ್ನಾಗಿ ಸರಿಹೋ ಗುತ್ತದೆ. ಈ ವಿಧವಾಗಿ ಸಾಧಾರಣ ಮನುಷ್ಯರಿಗು ಸಹ ಮೂರು ಆತ್ಮಗಳ ವಿವರ ತಿಳಿಯುವಹಾಗೆ, ಅವರು ಸಹ ಚೆನ್ನಾಗಿ ಅರ್ಥ ಮಾಡಿಕೊಳ್ಳುವ ಹಾಗೆ ದೇವರಿಟ್ಟಿದ್ದಾನೆ. ಅಷ್ಟೇ ಅಲ್ಲದೆ ಇನ್ನೂ ಅನೇಕ ವಿಷಯಗಳಲ್ಲಿ ಅನೇಕ ಸಂದರ್ಭಗಳಲ್ಲಿ ದೇವರೊಂದರ ತ್ರೈತಸಿದ್ಧಾಂತ ಅರ್ಥವಾಗುವಹಾಗೆಸಿದ್ದಾನೆ. ಈಗ ಮರಕ್ಕೆ ಕಾದಿರುವ ಒಂದು ಹಣ್ಣನ್ನು ಉದಾಹರಣೆಯಾಗಿ ತೆಗೆದುಕೊಂಡು ನೋಡೋಣ. ಮಾವಿನ ಹಣ್ಣನ್ನು ತೆಗೆದುಕೊಂಡು ನೋಡಿದರೆ ಅದರಲ್ಲಿ

ಕಾಯಿಗೆ ಮೇಲೆ ಸಿಪ್ಪೆ ಒಂದು ಭಾಗವಾದಾಗ, ಒಳಗಿನ ಸಿಹಿಯಾದ ಕಂಡ ಎಲ್ಲವೂ ಒಂದು ಭಾಗವಾಗಿದೆ. ಇನ್ನು ಉಳಿದಿರುವುದು ಒಳಗಿನ ಬೀಜ ಮಾತ್ರವೇ. ಹಣ್ಣಿನಲ್ಲಿಯೂ ಸಹ ಸಿಪ್ಪೆ, ಕಂಡ, ಬೀಜ ಎಂಬ ಮೂರು ಭಾಗಗಳು ಕಾಣಿಸುತ್ತಿವೆ. ಹಣ್ಣಿನಲ್ಲಿ ತಿನ್ನುವುದಕ್ಕೆ ಕೆಲಸಕ್ಕೆ ಬರುವುದಿಲ್ಲವೆಂದು ಭಾವಿಸಿ ತೆಗೆದುಹಾಕುವ ಸಿಪ್ಪೆಯನ್ನು ಜೀವಾತ್ಮನಾಗಿ, ಶಕ್ತಿ ಕೊಡುವ ಆಹಾರವಾಗಿರುವ ಒಳಗಿನ ಕಂಡವನ್ನು ಆತ್ಮನಾಗಿ, ಎಷ್ಟು ದಿನವಿಟ್ಟರೂ ಕೆಟ್ಟುಹೋಗದ ಬೀಜವನ್ನು ಪರಮಾತ್ಮನಿಗೆ ಹೋಲಿಸಿಕೊಳ್ಳಬಹುದು. ಹೋಲಿಸಿಕೊಳ್ಳುವುದೇ ಅಲ್ಲ ಆ ವಿಧವಾಗಿ ಕಾಣಿಸುವಹಾಗೆ ದೇವರು ಮಾಡಿ ಇಟ್ಟಿದ್ದಾನೆ. ಹೀಗೆ ಸಾಮಾನ್ಯ ಮಾನವನು ಸಹಿತ ಅರ್ಥ ಮಾಡಿಕೊಳ್ಳುವುದಕ್ಕೆ ಹೊರಗಿನ ಪ್ರಪಂಚದಲ್ಲಿ ತ್ರೈತವನ್ನು ಇಟ್ಟಿದ್ದರೂ, ಅದರಮೇಲೆ ಧ್ಯಾಸ ಬಾರದೇ ಹೋದರೆ ಏನೂ ತಿಳಿಯದೇ ಹೋಗುತ್ತದೆ. ಹಾಗಲ್ಲದೆ ಆಧ್ಯಾತ್ಮಿಕ ವಿದ್ಯೆಯಲ್ಲೇ ತ್ರೈತ ತಿಳಿಯುವಹಾಗೆ, ಹೊರಗೆ ಕಾಣಿಸುವಹಾಗೆ ಪೂರ್ವದಿಂದಲೇ ದೇವರು ಇಟ್ಟಿರುವುದು ನಡೆದಿದೆ. ಆಧ್ಯಾತ್ಮಿಕ ಜ್ಞಾನ ಎನ್ನುವ ವಿಧಾನದಲ್ಲಿ ಮೊಟ್ಟ ಮೊದಲು ಕೃತಯುಗದಲ್ಲೇ (ಕೃತ್‌ಯುಗದಲ್ಲೇ) ದೇವರು ಪುರುಷನೆಂದು ತಿಳಿಯುವಹಾಗೆ ದೈವವನ್ನು ಲಿಂಗಾಕೃತಿಯಲ್ಲಿ ತೋರಿಸುವುದು ನಡೆದಿದೆ. ಪುರುಷಾಕೃತಿಯಾದ ಲಿಂಗಾಕಾರದಲ್ಲಿರುವ ದೇವರು ಮೂರು ಭಾಗಗಳಾಗಿ ಕ್ಷರನು, ಅಕ್ಷರನು, ಪುರುಷೋತ್ತಮನು ಎನ್ನುವ ಪುರುಷರಾಗಿದ್ದಾರೆಂದು ತಿಳಿಯುವುದಕ್ಕೆ ಲಿಂಗದ ಮೇಲೆ ಎಲ್ಲರಿಗೂ ಕಾಣಿಸುವ ಹಾಗೆ ಮೂರು ಬಿಳಿ ವಿಭೂತಿ ರೇಖೆಗಳನ್ನು ಇಡುವುದು ನಡೆದಿದೆ. ಮೂರು ರೇಖೆಗಳು ಮೂರು ಆತ್ಮಗಳ ವಿಧಾನವನ್ನು ತಿಳಿಸುವುದು ಆದ್ದರಿಂದ ಅವನ್ನು ಬಿಳಿ ಬಣ್ಣದಲ್ಲಿರುವ ಹಾಗೆ, ಕಲ್ಮಷ ಇಲ್ಲದ ಬಿಳಿ ವರ್ಣವಾಗಿ ಕಾಣಿಸುವಹಾಗೆ ವಿಭೂತಿ ರೇಖೆಗಳನ್ನು ಇಡುವುದು ನಡೆದಿದೆ.

ಕೃತ್ ಯುಗದಲ್ಲಿ ಆ ವಿಧವಾಗಿ ಮೊದಲು ವಿಭೂತಿರೇಖೆಗಳನ್ನು ಈಶ್ವರ ಲಿಂಗದ ಮೇಲೆ ಇಟ್ಟು ತೋರಿಸುವುದು ನಡೆದಿದೆ. ನಂತರ ಈ

ಮೂರು ಆತ್ಮಗಳು ಮನುಷ್ಯನಲ್ಲೇ ಇವೆಯೆಂದು ಪ್ರತಿ ಮನುಷ್ಯ ತಿಳಿಯುವುದಕ್ಕೆ ಮಾನವಾಕೃತಿಯಾದ ಪ್ರತಿಮೆಯನ್ನು ತಯಾರುಮಾಡಿ, ಆ ಪ್ರತಿಮೆಗೆ ಮೂರು ನಾಮಗಳನ್ನಿಡುವುದು ನಡೆದಿದೆ. ಮೂರು ನಾಮಗಳನ್ನು ಮೂರು ಆತ್ಮಗಳಾಗಿ ಹೋಲಿಸಿ ತೋರಿಸುವುದೇ ಅಲ್ಲದೇ ಅದರಲ್ಲಿ ಒಂದು ದೈವ (ಪರಮಾತ್ಮ), ಎರಡನೆಯದು ಆತ್ಮ, ಮೂರನೆಯದು ಜೀವಾತ್ಮ ಎಂದು ತಿಳಿಯುವಹಾಗೆ, ದೈವವಾಗಿರುವ ಮಧ್ಯ ರೇಖೆಯನ್ನು ಪ್ರತ್ಯೇಕವಾಗಿ ಕಾಣಿಸುವ ಹಾಗೆ ಅದಕ್ಕೆ ಕೆಂಪು ಬಣ್ಣವನ್ನು ತಿದ್ದುವುದು ನಡೆದಿದೆ. ಉಳಿದ ಎರಡು ರೇಖೆಗಳನ್ನು ಆತ್ಮ ಜೀವಾತ್ಮಗಳಾದ ಜೋಡು ಆತ್ಮಗಳೆಂದು ತಿಳಿಯುವುದಕ್ಕೆ ಬಿಳಿ ಬಣ್ಣದಿಂದ ಇಡುವುದು ನಡೆದಿದೆ. ಹೀಗೆ ತ್ರಿ ನಾಮಗಳು ಒಂದು ಕೆಂಪಾಗಿ, ಎರಡು ಬಿಳಿಯಾಗಿ ಇರುವಂತೆ ಇಡುವುದು ನಡೆದಿದೆ. ಇದೇ ವಿಧವಾಗಿ ಈಶ್ವರ ಲಿಂಗದ ಮೇಲೆ ಮೂರು ವಿಭೂತಿ ರೇಖೆಗಳಲ್ಲಿ ಮಧ್ಯೆ ಇರುವ ರೇಖೆಗೆ ಕೆಂಪು ಕುಂಕುಮ ಬೊಟ್ಟನ್ನಿಟ್ಟು ಮೇಲೆ ಕೆಳಗೆ ಇರುವ ಆತ್ಮಗಳಿಗಿಂತ ಮಧ್ಯದಲ್ಲಿರುವ ಆತ್ಮ ಪ್ರತ್ಯೇಕವಾದದ್ದೆಂದು, ಅದೇ ಆತ್ಮಕ್ಕೆ ಗುರುತೆಂದು ತಿಳಿಯುವಹಾಗೆ ಮಾಡುವುದು ನಡೆದಿದೆ. ಈ ವಿಧವಾಗಿ ತ್ರೈತ ಸಿದ್ಧಾಂತ ಶರೀರದಲ್ಲಿ ಕಣ್ಣು, ಹಸ್ತಗಳಲ್ಲಿಯೂ, ಆಧ್ಯಾತ್ಮಿಕದಲ್ಲಿ ಮೂರು ವಿಭೂತಿರೇಖೆಗಳು, ಮೂರು ನಾಮಗಳಲ್ಲಿಯೂ, ಹೊರಗಿನ ಪ್ರಪಂಚದಲ್ಲಿ ಹಣ್ಣಿನೊಳಗೂ, ಕರೆಂಟ್ ಪ್ಲಗ್‌ನೊಳಗೂ, ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಕ್ಷರ, ಅಕ್ಷರ, ಪುರುಷೋತ್ತಮರಾಗಿಯೂ, ಖುರಾನ್ ಗ್ರಂಥದಲ್ಲಿ ಖಾಫ್ ಎನ್ನುವ 50ನೇ ಸುರಾದಲ್ಲೂ 21ನೇ ಆಯತ್‌ನಲ್ಲಿ ನೀನು, ನಿನ್ನಿಂದೆ ಬರುವವನು, ಸಾಕ್ಷಿ ಹೇಳುವವನು ಎನ್ನುವ ಮೂವರಾಗಿ ಹೇಳಲಾಗಿದೆ. ಆದರೂ ಮೂರು ಮತಗಳಲ್ಲಿ ಯಾವ ಮನುಷ್ಯನಿಗೂ ತ್ರೈತ ಸಿದ್ಧಾಂತವನ್ನು ಕುರಿತು ತಿಳಿಯದೇ ಹೋಗುವುದು ವಿಚಿತ್ರ.

ಮೂರು ಆತ್ಮಗಳೆಂದಾಗಲಿ, ಮೂವರು ಪುರುಷರೆಂದಾಗಲಿ ಯಾವುದೂ ತಿಳಿಯದ ಮನುಷ್ಯ, "ನಾನು ದೇವರು ಹೇಳಿದ ಜ್ಞಾನವನ್ನೆಲ್ಲಾ

ತಿಳಿದುಕೊಂಡಿದ್ದೇನೆ, ನಾನು ದೈವ ಜ್ಞಾನಿ ಎಂದುಕೊಳ್ಳುವುದು ತಪ್ಪಲ್ಲವೆ! ಮೂರು ಆತ್ಮಗಳ ವಿಷಯವನ್ನು ಪಕ್ಕಕ್ಕಿಟ್ಟು ದೈವ ಜ್ಞಾನದಲ್ಲಿ ಮೂರನೆಯ ಆತ್ಮನಾದ ಪರಮಾತ್ಮನನ್ನಲ್ಲದೆ, ಜೋಡು ಆತ್ಮಗಳೆಂದು ಹೆಸರುವಾಸಿಯಾಗಿರುವ ಜೀವಾತ್ಮ ಆತ್ಮಗಳ ವಿಷಯವನ್ನು ಸಹ ತಿಳಿಯದವನು ಆತ್ಮ ಜ್ಞಾನಿ ಆಗುತ್ತಾನಾ? **ಮೂರು ಆತ್ಮಗಳ ತ್ರೈತ ಸಿದ್ಧಾಂತ ತಿಳಿಯದವನು ದೈವಜ್ಞಾನಿ ಆಗಲಾರನು. ಹಾಗೆಯೇ ಎರಡು ಜೋಡು ಆತ್ಮಗಳ ವಿವರ ತಿಳಿಯದವನು ಆತ್ಮ ಜ್ಞಾನಿ ಆಗಲಾರನು. ಕನಿಷ್ಟ ಜೀವಾತ್ಮ ವಿಷಯ ತಿಳಿಯದವನು ಕನಿಷ್ಟ ಜ್ಞಾನಿಯೂ ಸಹ ಆಗಲಾರನು.** ಆದ್ದರಿಂದ ಮನುಷ್ಯ ದೈವಜ್ಞಾನಿ, ಆತ್ಮಜ್ಞಾನಿ ಆಗಬೇಕೆಂದರೆ ತ್ರೈತ ಸಿದ್ಧಾಂತವನ್ನು ತಿಳಿದುಕೊಳ್ಳಬೇಕಾಗಿದ್ದೇ. ಇದು ದೇವರಿಗೆ ಸಂಬಂಧಿಸಿದ ಜ್ಞಾನ, ಆದ್ದರಿಂದ ಎಲ್ಲಾ ಮತದವರಿಗೂ ತ್ರೈತ ಸಿದ್ಧಾಂತವೇ ಮಾರ್ಗ.

ಬಹಳ ಜನರಿಗೆ ಜೋಡು ಆತ್ಮಗಳೆಂದು ನಾವು ಹೇಳುವ ಮಾತೇ ಹೊಸದಾಗಿ ಇರುತ್ತದೆ. ಏಕೆಂದರೆ ಅವರಿಗೆ ಜೀವಾತ್ಮವಾದ ತಾನಾಗಲಿ, ತನ್ನ ಪಕ್ಕದಲ್ಲೇ ತನ್ನನ್ನು ಯಾವಾಗಲೂ ಅಂಟಿಕೊಂಡಿರುವ ಆತ್ಮವಾಗಲಿ ಯಾವ ಮಾತ್ರ ತಿಳಿಯದವರಾಗಿದ್ದಾರೆ. ಭಗವದ್ಗೀತೆಯಲ್ಲಿ ಅನೇಕ ಕಡೆ ಆತ್ಮ ಪ್ರಸ್ಥಾವನೆ ಇದ್ದರೂ, ಪ್ರತ್ಯೇಕಿಸಿ ಆತ್ಮ ಸಂಯಮಯೋಗದಲ್ಲಿ ಆತ್ಮವನ್ನು ಕುರಿತು ಹೇಳಿದ್ದರೂ, ಆತ್ಮ ಎಂದರೆ ಏನೊ ತಿಳಿಯದವರು ಕೆಲವರಿರುವಾಗ, ಆತ್ಮನೇ ಪರಮಾತ್ಮನಾಗಿ (ದೇವರಾಗಿ) ಲೆಕ್ಕಿಸುವವರು ಕೆಲವರಿದ್ದರೆ. ಆತ್ಮಗಿಂತಲೂ ಪರವಾಗಿರುವುದು ದೈವ ಎಂದು ತಿಳಿಯುವಹಾಗೆ ಪರ+ಆತ್ಮ=ಪರಮಾತ್ಮ ಎಂದು ಇರುವಾಗ, ಆತ್ಮನನ್ನು ಪರಮಾತ್ಮ ಎಂದುಕೊಳ್ಳುವುದು ತಪ್ಪಲ್ಲವೆ! ಯಾವಾಗಲೂ ಪಕ್ಕದಲ್ಲೇ ಇರುವ ಎರಡನೆ ಆತ್ಮವನ್ನು ತಿಳಿಯದವರು ಆತ್ಮಜ್ಞಾನಿ ಆಗಲಾರನು ಎಂದು ನಾನು ಹೇಳುತ್ತಿರುವಾಗ, ನನಗೆ ಬಹಳ ಪರಿಚಯವಿರುವ ಇಸ್ಲಾಮ್ ಧರ್ಮ ತಿಳಿದ ವ್ಯಕ್ತಿ “ನೀವು ಹೇಳುವ ಎರಡನೆಯ ಆತ್ಮ ನಮ್ಮ ಗ್ರಂಥಗಳಲ್ಲಿ ಎಲ್ಲೂ ಇಲ್ಲವೇ! ನಮ್ಮ ಗ್ರಂಥವನ್ನು ನೀವು ದೈವಗ್ರಂಥವೆಂದು ನಂಬುತ್ತಿರುವಾಗ ದೇವರು ಈ ವಿಷಯವನ್ನು ಹೇಳಲಿಲ್ಲವೆಂದೂ, ದೇವರು ಸಹ ಈ ವಿಷಯವನ್ನು

ಮರೆತು ಹೋಗಿದ್ದಾನೆಂದು, ದೇವರಿಗೂ ಸಹ ಈ ವಿಷಯ ತಿಳಿಯದೆಂದು ನೀವು ಹೇಳಬಲ್ಲಿರಾ? ಎಂದು ಕೇಳಿದ್ದಾನೆ. ಆತನು ಖುರಾನ್ ಗ್ರಂಥವನ್ನು ಚೆನ್ನಾಗಿ ಓದಿರುವ ವ್ಯಕ್ತಿಯಾಗಿದ್ದು ಹಾಗೆ ನನ್ನನ್ನು ತಿರುಗಿ ಕೇಳುವುದು ಸ್ವಲ್ಪ ಆಶ್ಚರ್ಯವೆನಿಸಿತು. ತಕ್ಷಣವೆ ಆತನ ಮಾತಿಗೆ ಈ ವಿಧವಾಗಿ ಸಮಾಧಾನವನ್ನು ಹೇಳುವುದು ನಡೆದಿದೆ. ದೇವರು ಪ್ರಪಂಚವೆಲ್ಲಕ್ಕೂ ಒಬ್ಬನೇ ಆಗಿರುವಾಗ, ಪ್ರಪಂಚದಲ್ಲಿನ ಪ್ರಜೆಗಳೆಲ್ಲರನ್ನು ತಾನೇ ಸೃಷ್ಠಿಸಿರುವಾಗ ದೇವರು ಎಲ್ಲರನ್ನೂ ಸಮಾನವಾಗಿ ನೋಡುವನು, ದೇವರು ಎಲ್ಲರಿಗೂ ಎಲ್ಲ ಮತಗಳವರಿಗೂ ಸಮಾನವೇ. ಅಂತಹದರಲ್ಲಿ ದೇವರ ಜ್ಞಾನ ದೇವರು ಹೇಳಿದ ಯಾವ ಗ್ರಂಥದಲ್ಲಾದರೂ ಒಂದಾಗಿಯೇ ಇರುತ್ತದೆ. ಇಲ್ಲಿಯವರೆಗು ನಾನು ಹೇಳಿರುವುದು ನಿಮ್ಮ ಮತದೊಳಗಿನದು, ನಮ್ಮ ಮತದೊಳಗಿನದಲ್ಲ ಎಂದು ನೀನೇಕೆ ಅಂದುಕೊಳ್ಳಬೇಕು? ಎಲ್ಲಾ ಮತಗಳನ್ನು ಸೃಷ್ಠಿಸಿರುವುದು ಒಬ್ಬ ದೇವರೇ. ಆ ಒಬ್ಬ ದೇವರೇ ಎಲ್ಲಾ ಮತಗಳ ಮೂಲ ಗ್ರಂಥಗಳಲ್ಲಿ ತನ್ನ ಜ್ಞಾನವನ್ನು ತುಂಬಿ ಕೊಟ್ಟಿದ್ದಾನೆ. ಹಾಗಿರುವಾಗ ದೇವರ ಜ್ಞಾನ ಭಗವದ್ಗೀತೆ ಯಲ್ಲಿರುವುದೇ ಬೈಬಲ್‌ನಲ್ಲೂ ಇದೆ, ಖುರಾನ್‌ನಲ್ಲೂ ಇದೆ ಎಂದು ಏಕೆ ಅಂದುಕೊಳ್ಳಬಾರದು. ನಾವು ಕುರುಡರಾಗಿ ಅಂದುಕೊಳ್ಳುವುದೇ ಅಲ್ಲದೆ ದೇವರು ಪ್ರತ್ಯಕ್ಷವಾಗಿ ಖುರಾನ್ ಗ್ರಂಥದಲ್ಲಿ ಖಾಫ್ ಎನ್ನುವ 50ನೇ ಸುರಾದಲ್ಲಿ 18ನೇ ಆಯತ್‌ನಲ್ಲಿ ಜಿಬ್ರಯೇಲ್ ದೂತನಿಂದ ಹೀಗೆ ಹೇಳಿಸಿದ್ದಾನೆ. "(ಮನುಷ್ಯ) ಬಾಯಿಂದ ಒಂದು ಮಾತು ಬರುವುದೇ ಆಲಸ್ಯ, ಆತನ ಹತ್ತಿರ ಒಬ್ಬ ಪರ್ಯವೇಕ್ಷಕನು (ಅದನ್ನು ನಮೋದು ಮಾಡುವುದಕ್ಕೆ) ಸಿದ್ಧವಾಗಿರುತ್ತಾನೆ." ನೋಡಿದಿರಾ ಈ ವಾಕ್ಯದಲ್ಲಿ ನಿನ್ನ ಹತ್ತಿರ ಒಬ್ಬ ಪರ್ಯವೇಕ್ಷಕನು ಅಂದರೆ ನಿನ್ನನ್ನು ಕಾವಲು ಕಾಯುವವನು ಒಬ್ಬನಿದ್ದಾನೆಂದೇ ಅಲ್ಲವೆ. ಆ ಪರ್ಯವೇಕ್ಷಕನೇ ನಿನ್ನ ಜೊತೆ ಯಾವಾಗಲೂ ಇರುವ ಆತ್ಮ ಎಂದು ನೀನು ಏಕೆ ಅಂದುಕೊಳ್ಳ ಬಾರದು? ಅಷ್ಟೇ ಅಲ್ಲದೆ ಅದೇ ಸುರಾದಲ್ಲಿ (ಅದೇ ಅಧ್ಯಾಯದಲ್ಲಿ) 23ನೇ ವಾಕ್ಯ (ಆಯತ್) ಹೀಗೆ ಇದೆ ನೋಡಿ. "ಇಗೊ (ಈತನ ಕರ್ಮಗಳ ಪತ್ರ)

ನನ್ನ ಹತ್ತಿರ ಸಿದ್ಧವಾಗಿ ಇದೆ ಎಂದು ಆತನ ಸಹವಾಸಿ ಎನ್ನುತ್ತಾನೆ.” ಈ ವಾಕ್ಯದಲ್ಲಿ ಆತನ ಸಹವಾಸಿ ಎಂದು ಹೇಳಿರುವವನೇ ಪ್ರತಿ ಜೀವಾತ್ಮನಿಗೂ ಜೊತೆಯಾಗಿ ವಾಸಿಸುವ ಆತ್ಮ ಎಂದು ತಿಳಿಯಬೇಕು. ಪ್ರತಿ ಮನುಷ್ಯನ ಶರೀರದಲ್ಲೂ ಜೀವಾತ್ಮನಿಗೆ ಸಹವಾಸಿಯಾಗಿ ಇರುವವನು ಆತ್ಮ. ವಾಸಿ ಎಂದರೆ ನಿವಾಸಿಸುವವನು. ಸಹವಾಸಿ ಎಂದರೆ ನಿನ್ನೊಂದಿಗೆ ಸಮಾನವಾಗಿ ನಿವಾಸಿ ಸುವವನೆಂದು ಅರ್ಥ. ಇಲ್ಲಿ ಸಹವಾಸಿ ಎಂದು ಹೇಳಲ್ಪಟ್ಟಿರುವವನೇ ನಿನ್ನೊಂದಿಗೆ ನಿನ್ನ ಶರೀರದಲ್ಲೇ ಇರುವ ಆತ್ಮ ಎಂದು ತಿಳಿಯಬೇಕು. ನೀನು ಮೊದಲನೆ ಆತ್ಮ (ಜೀವಾತ್ಮ) ಆಗಿರುವಾಗ, ನಿನ್ನ ಸಹವಾಸಿ ಆದ ಆತ್ಮವೇ ನಿನ್ನ ಶರೀರದಲ್ಲಿನ ಎರಡನೆ ಆತ್ಮವೆಂದು ನೆನಪಲ್ಲಿಟ್ಟುಕೊಳ್ಳಬೇಕು.

ಶರೀರದೊಳಗೆ ದ್ವೈತವಾಗಿ (ಎರಡಾಗಿ) ರುವ ಜೀವಾತ್ಮ ಆತ್ಮಗಳನ್ನು ತಿಳಿಯದವನು ಎಲ್ಲಾ ಮತಗಳಲ್ಲಿಯೂ ಇದ್ದಾರೆ. ಬೈಬಲ್‌ನಲ್ಲಿ ನಿನ್ನ ಪಕ್ಕದವ ನೆಂದು ಆತ್ಮನನ್ನು ಕುರಿತು ಹೇಳಿರುವುದಾದರೆ, ಅದನ್ನೇ ಖುರಾನ್‌ನಲ್ಲಿ ಸಹವಾಸಿ ಎಂದು ಹೇಳಿದ್ದಾರೆ. ಖುರಾನ್‌ನಲ್ಲಿ 50ನೇ ಸುರಾದಲ್ಲಿಯೇ 18,23 ಆಯತ್ ಗಳಲ್ಲೇ ಅಲ್ಲದೇ, 27ನೇ ಆಯತ್‌ನಲ್ಲಿ ಸಹ ಅಕ್ಷರನಾದ (ನಾಶವಿಲ್ಲದ ವನಾದ) ಆತ್ಮನನ್ನು ಕುರಿತು ಹೀಗೆ ಹೇಳಿದ್ದಾರೆ. “ನಮ್ಮ ಪ್ರಭೂ! ನಾನೀತನನ್ನು ಅಡ್ಡದಾರಿ ಹಿಡಿಸಲಿಲ್ಲ. ಈತನೇ ಸ್ವತಃವಾಗಿ ಬಹುದೂರದ ಅಪಮಾರ್ಗದಲ್ಲಿ ಬಿದ್ದಿದ್ದಾನೆಂದು ಆತನ ಸಹವಾಸಿ ಎನ್ನುತ್ತಾನೆ.” ಮನುಷ್ಯ ಹುಟ್ಟಿದಾಗಿನಿಂದ ಕೊನೆಯ ಮರಣದವರೆಗು ಶರೀರಕ್ಕೆ ಚೈತನ್ಯವನ್ನು ಕೊಟ್ಟು ನಡೆಸುವವನು ಆತ್ಮ ಎನ್ನುವ ಸಹವಾಸಿಯೇ. ಸಹವಾಸಿ ಅಥವಾ ನೆರೆಯವ ಎನ್ನುವ ಆತ್ಮ ಮನುಷ್ಯನಲ್ಲಿನ ಜೀವಾತ್ಮನನ್ನು ಜ್ಞಾನ ವಿಷಯದಲ್ಲಿ ಸ್ವತಂತ್ರವಾಗಿ ವ್ಯವಹರಿಸುವಹಾಗೆ ಮಾಡುತ್ತದೆ. ಜೀವಾತ್ಮನಿಗೆ ಒಂದು ಜ್ಞಾನ ವಿಷಯದಲ್ಲಿ ಮಾತ್ರ ಸ್ವತಂತ್ರತೆ ಇದೆ. ಜೀವಾತ್ಮನ ಶ್ರದ್ಧೆಯನ್ನು ಅನುಸರಿಸಿ ಅವನಿಗೆ ಜ್ಞಾನ ಲಭಿಸುತ್ತದೆ. ಅದರಲ್ಲಿ ಸಹವಾಸಿಯಾದ ಆತ್ಮವೊಂದರ ಪ್ರೇರಣ ಏನೂ ಇರುವುದಿಲ್ಲ. ಆದ್ದರಿಂದ ಆತ್ಮ ಜೀವಾತ್ಮನನ್ನು ಕುರಿತು “ಈತನೇ ಸ್ವತಃವಾಗಿ ಬಹುದೂರದ ಅಪಮಾರ್ಗದಲ್ಲಿ ಬಿದ್ದಿದ್ದಾನೆ”

ಎಂದು ಹೇಳುತ್ತಿದ್ದಾನೆ. ಮನುಷ್ಯನ (ಜೀವಾತ್ಮ) ಶ್ರದ್ಧೆಯನ್ನನುಸರಿಸಿ ಜ್ಞಾನ ಲಭಿಸುತ್ತದೆನ್ನುವುದಕ್ಕೆ ಸಾಕ್ಷಿಯಾಗಿ ಇದೇ ಸುರಾದಲ್ಲೇ 37ನೇ ಆಯತ್‌ನಲ್ಲಿ ಹೀಗೆ ಇದೆ ನೋಡಿರಿ. "ಶ್ರದ್ಧೆಯಿಂದ ಆಲಂಗಿಸಿ, ಸಾವಧಾನವಾಗಿ ನಡೆದುಕೊಳ್ಳುವ ಪ್ರತಿ ವ್ಯಕ್ತಿಗೂ ಇದರಲ್ಲಿ ಹಿತಬೋಧನೆ ಇದೆ." ಇಲ್ಲಿರುವ ವಾಕ್ಯವನ್ನನುಸರಿಸಿ ಮನುಷ್ಯ ಶ್ರದ್ಧೆ ಹೊಂದಿ ಜಾಗ್ರತೆಯಿಂದ ತಿಳಿದುಕೊಂಡರೆ, ಎಂತಹ ಜ್ಞಾನವನ್ನಾದರೂ ಯಾವ ಗ್ರಂಥದಿಂದಾದರೂ ಗ್ರಹಿಸಬಹುದೆಂದು ತಿಳಿಯುತ್ತಿದೆ. ಒಂದು ದೈವ ಜ್ಞಾನ ವಿಷಯಗಳಲ್ಲೇ ಜೀವಾತ್ಮನಿಗೆ ಸ್ವತಂತ್ರತೆ ಇದೆ. ಉಳಿದ ಯಾವ ವಿಷಯದಲ್ಲಾದರೂ ಸಹವಾಸಿಯಾಗಿರುವ ಆತ್ಮವೇ ಪ್ರತಿಯೊಬ್ಬನನ್ನು ನಡೆಸುತ್ತಿದೆ. ಆದ್ದರಿಂದ ಇದೇ ಸುರಾದಲ್ಲಿ 21ನೇ ವಾಕ್ಯದಲ್ಲಿ **"ಪ್ರತಿ ವ್ಯಕ್ತಿ ತನ್ನಹಿಂದೆ ತನ್ನನ್ನು ನಡೆಸುವವನೊಬ್ಬನು (ತನ್ನನ್ನು ಓಡಿಸುವವನೊಬ್ಬನು) ತನಗೆ ಸಾಕ್ಷಿಯನ್ನು ಕೊಡುವವನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ"** ಎಂದು ಹೇಳಿದ್ದಾರೆ. ತನ್ನನ್ನು ನಡೆಸುವವನು ತನ್ನ ಹಿಂದೆ ಬರುವವನು ಆತ್ಮ ಆಗಿರುವಾಗ, ತನ್ನಲ್ಲಿ ಯಾವಾಗಲೂ ಸಾಕ್ಷಿಯಾಗಿ ಇದ್ದು ಏನೂ ಮಾಡದೆ ಇರುವವನು ಪರಮಾತ್ಮ ಎಂದು ತಿಳಿಯಬೇಕು. ಆದರೆ ಈ ವಾಕ್ಯಕ್ಕೆ ತನ್ನನ್ನು ನಡೆಸುವವನೆಂದು, ತನ್ನನ್ನು ಓಡಿಸುವವನೆಂದು, ತನ್ನನ್ನು ತೆಗೆದುಕೊಂಡು ಬರುವವನೆಂದು ಉಳಿದ ಖುರಾನ್ ಗ್ರಂಥಗಳಲ್ಲಿ ಬರೆದರೂ, ಅವು ಎಲ್ಲವೂ ತನ್ನ ಹಿಂದೆ ಇರುವವನೆಂದು, ತನ್ನನ್ನು ನಿತ್ಯವೂ ನಡೆಸುವ ಸಹವಾಸಿ ಎಂದೇ ತಿಳಿಸುತ್ತವೆ.

ಎಲ್ಲಾ ಮೂಲ ಗ್ರಂಥಗಳಲ್ಲಿಯೂ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ತ್ರೈತವನ್ನೇ ತಿಳಿಸಿದ್ದರೂ ಇಸ್ಲಾಮ್‌ದಲ್ಲಿನ ಮುಸ್ಲೀಮರಿಗೆ ದೇವರು ಒಬ್ಬನೇ ಅರ್ಥವಾಗಿದ್ದಾನೆ, ಉಳಿದ ಆತ್ಮ, ಜೀವಾತ್ಮಗಳ ವಿಷಯ ಏನೂ ತಿಳಿಯಲಿಲ್ಲ. ಕ್ರೈಸ್ತವದೊಳಗೆ ಹೋಗಿ ನೋಡಿದರೆ ತಂದೆ, ಕುಮಾರನು, ಪರಿಶುದ್ಧ ಆತ್ಮಯೆಂದು ಅದನ್ನೇ ತ್ರಿತ್ವವೆಂದು ಅವರು ಹೇಳಿದರೂ ಅವರಿಗೆ ತ್ರಿತ್ವವಾಗಲೀ, ದಿತ್ವವಾಗಲೀ ಏನೂ ಅರ್ಥವಾಗಲಿಲ್ಲವೆಂದೇ ಹೇಳಬಹುದು. ತ್ರಿತ್ವವೆಂದು, ಟ್ರಿನಿಟೀ ಎಂದು

ಕ್ರೈಸ್ತವರು ಹೇಳುತ್ತಿದ್ದರೂ ಅದರಲ್ಲಿ ತ್ರಿತ್ವವಿಲ್ಲ. ಕುಮಾರನು, ತಂದೆ ಬೇರೆ ಬೇರೆಯಾದರೂ, ತಂದೆ ಎನ್ನುವವನು ಪರಿಶುದ್ಧಾತ್ಮ ಎನ್ನುವವನು ಇಬ್ಬರೂ ಒಂದೇ ಆಗುತ್ತಾರೆ. ದೇವರಾದ ಪರಿಶುದ್ಧಾತ್ಮನೇ ತಂದೆ ಎಂದು ಅಲ್ಲಿ ಹೇಳಲಾಗುತ್ತಿದೆ. ತಂದೆ, ಪರಿಶುದ್ಧಾತ್ಮ ಒಂದೇ ದೇವರು ಆಗುವುದರಿಂದ ಎರಡರನ್ನೇ ಮೂರನೆಯದಾದ ಪರಮಾತ್ಮನಾಗಿ ಲೆಕ್ಕಿಸಬೇಕು. ತಂದೆ ಯಿಂದ ಅಥವಾ ಪರಿಶುದ್ಧಾತ್ಮನಿಂದ ಬಂದು ಹುಟ್ಟಿದವನು ಕುಮಾರನಾಗುತ್ತಾನೆ. ತಂದೆ (ದೇವರ) ಅಂಶದಿಂದ ಹುಟ್ಟಿದವನು ಕುಮಾರನು. ಕುಮಾರನು ಕಣ್ಣಿಗೆ ಕಾಣಿಸುವ ಶರೀರ ಹೊಂದಿರುವನು. ತಂದೆ ಅಥವಾ ಪರಿಶುದ್ಧಾತ್ಮ ಕಣ್ಣಿಗೆ ಕಾಣಿಸುವವನಲ್ಲ. ತಂದೆ ಜ್ಞಾನವನ್ನು ತನ್ನ ತುಂಬಾ ತುಂಬಿಸಿಕೊಂಡು ಹುಟ್ಟುವವನು ಕುಮಾರನು, ಆತನೇ ಯೇಸುಪ್ರಭು. ಯೇಸು, ಕುಮಾರನಾದಾಗ ದೇವರು ತಂದೆಯಾಗಿದ್ದಾನೆ. ನಮಗೂ ಸಹ ದೇವರು ತಂದೆಯೇ ಆದರೂ ನಾವು ನಮ್ಮ ತಂದೆಯಾಗಿ ದೇವರನ್ನು ಹೇಳದೆ ಭೌತಿಕ ತಂದೆಯನ್ನು ಹೇಳುತ್ತಿದ್ದೇವೆ. ದೇವರನ್ನೇ ತನ್ನ ತಂದೆಯಾಗಿ ಯಾವ ಮನುಷ್ಯ ಭಾವಿಸುತ್ತಿಲ್ಲ. ಒಂದು ವೇಳೆ ಹೇಳಿದರೂ ಅದು ಜ್ಞಾನದ ಪ್ರಕಾರವೇ ಎಂದು ಕಾಣಿಸುವ ಮನುಷ್ಯನನ್ನೇ ತಂದೆ ಎಂದು ಹೇಳುವುದು ನಡೆಯುತ್ತಿದೆ. ವಾಸ್ತವಕ್ಕೆ ಎಲ್ಲಾ ವಿಧಗಳಲ್ಲಿ ನೋಡಿದರೆ ಏಸುಪ್ರಭು ಒಬ್ಬನೇ ತನ್ನ ನಿಜವಾದ ತಂದೆಯಾದ ದೇವರನ್ನು ಕುರಿತು ಹೇಳಿದ್ದಾನೆ. ಆದ್ದರಿಂದ ಎಂತಹ ಜ್ಞಾನಿಯಾದರೂ ಸ್ವಲ್ಪ ತಿಳಿಯದೆ ಆತ್ಮನನ್ನು ಪರಮಾತ್ಮನನ್ನು ಬೇರೆಯಾಗಿ ಗುರುತಿಸದೆ ಹೋಗುತ್ತಿದ್ದಾನೆ. ಕ್ರೈಸ್ತವರಿಗು ಸಹ ದೇವರಾದ ಯೆಹೋವಾ ಇದ್ದಾನೆನ್ನುವ ನಂಬಿಕೆ ಬಿಟ್ಟರೆ ತ್ರೈತ ಸಿದ್ಧಾಂತದ ಪ್ರಕಾರ ಮೂರು ಆತ್ಮಗಳಿವೆಯೆಂದು ತಿಳಿಯದು.

ಇನ್ನು ಹಿಂದೂಗಳನ್ನು ನೋಡುವುದಾದರೆ ಬಹಳ ಜನರಿಗೆ ಭಗವದ್ಗೀತೆ ವಿಷಯವೇ ತಿಳಿಯದು. ಅವರು ವೇದಗಳನ್ನೇ ದೊಡ್ಡದಾಗಿ ಹೇಳಿಕೊಳ್ಳುತ್ತಾ ಭಗವದ್ಗೀತೆಯನ್ನು ಮರೆತುಹೋಗಿದ್ದಾರೆ. ವೇದಗಳನ್ನು ಗ್ರಂಥರೂಪದಲ್ಲಿ ಬರೆದ ವ್ಯಾಸನೇ ಕೊನೆಯಲ್ಲಿ ವ್ಯಥೆಪಟ್ಟು, ತಾನು ತಿಳಿಯದೆ ಮಾಡಿದ ತಪ್ಪಿಗೆ ಚಿಂತಿಸಿ

ಭಗವಂತನು ಹೇಳಿದ ಭಗವದ್ಗೀತೆಯನ್ನು ಬರೆದು ತೃಪ್ತಿಹೊಂದಿದರೆ, ಆ ವಿಷಯ ತಿಳಿಯದ ಹಿಂದೂಗಳು ಭಗವದ್ಗೀತೆಗಿಂತಲು ವೇದಗಳೇ ದೊಡ್ಡವೆಂದು ಕೊಂಡು ಗೀತೆಯನ್ನು ಬಿಟ್ಟು ವೇದಗಳನ್ನು ಆಶ್ರಯಿಸಿದ್ದಾರೆ. ಆದ್ದರಿಂದ ಬಹಳ ಜನರಿಗೆ ಗೀತೆಯಲ್ಲಿನ ತ್ರೈತ ಸಿದ್ಧಾಂತ ತಿಳಿಯದೆ ಹೋಗಿದೆ. ಕೆಲವರು ಭಗವದ್ಗೀತೆಯನ್ನು ಸಹ ಓದಿದವರಿದ್ದಾರೆ. ಆದರೆ ಶ್ರದ್ಧಾಲೋಪದಿಂದ ಗೀತೆಯಲ್ಲಿನ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿರುವ ತ್ರೈತಸಿದ್ಧಾಂತವನ್ನು ಗ್ರಹಿಸಲಾರದೆ ಇದ್ದಾರೆ. ಆದರೂ ಕೆಲವರಿಗೆ ಜೀವಾತ್ಮ ದೇವರು ಎನ್ನುವ ವಿಧಾನ ಸ್ವಲ್ಪ ಅರ್ಥವಾಗಿದೆ ಆದರೆ, ಮಧ್ಯದಲ್ಲಿನ ಆತ್ಮ ಎಂದರೆ ಏನೋ ತಿಳಿಯದೆ ಹೋಗಿದೆ. ಕ್ರೈಸ್ತವರಿಗೂ, ಮುಸ್ಲೀಮರಿಗೂ ಅವರ ಮತಗಳಲ್ಲಿ ಅವರವರ ದೇವರು ಬೇರೆಬೇರೆ ಎನ್ನುವ ಹಾಗೆ ಅರ್ಥವಾಗಿದೆ. ಕ್ರೈಸ್ತವರು, ಮುಸ್ಲೀಮ್ ದೇವರು ಅಲ್ಲಾಹ್ ಬೇರೆಯೆಂದು ಭಾವಿಸುತ್ತಿರುವರು. ಹಾಗೇ ಮುಸ್ಲೀಮ್‌ರು ಕ್ರೈಸ್ತವರ ದೇವರು ಯೆಹೋವಾ ಬೇರೆಯೆಂದು ಭಾವಿ ಸುತ್ತಿರುವರು. ಹೇಳುವ ಬೋಧನೆಗಳಲ್ಲಿ ವಿಶ್ವವೆಲ್ಲದಕ್ಕೂ ದೇವರು ಒಬ್ಬನೇ ಎನ್ನುವ ವಾಸ್ತವವನ್ನೇ ಹೇಳುತ್ತಾ, ಆ ದೇವರು ನಮ್ಮ ದೇವರು ಮಾತ್ರವೇ, ಅವರ ದೇವರು ಅಲ್ಲವೆನ್ನುವ ಭೇದಭಾವ ಹೊಂದಿರುವರು. ಯಾವುದೇನಾದರೂ ಅವರವರ ಮತಗಳಲ್ಲಿ ದೇವರೊಬ್ಬನಿದ್ದಾನೆಂದು ತಿಳಿದಿದ್ದಾರೆ. ಆದರೇ ಎರಡನೆ ಆತ್ಮದ ವಿಷಯವಾಗಲಿ, ಮೊದಲಿಗೆ ತಾನೊಬ್ಬ ಜೀವಾತ್ಮನೆಂದಾಗಲಿ ತಿಳಿಯದೆ ದೇವರನ್ನು ಪ್ರಾರ್ಥನೆ ಮಾಡುತ್ತಿದ್ದಾನೆ. ಹೀಗೆ ಕ್ರೈಸ್ತವ, ಇಸ್ಲಾಮ್ ಮತಗಳಲ್ಲಿ ದೈವದಲ್ಲಿ ಭಾಗವಾದ ಜೀವಾತ್ಮ ವಿಷಯವನ್ನಾಗಲಿ, ಆತ್ಮ ವಿಷಯವನ್ನಾಗಲಿ ತಿಳಿಯದೆ ದೇವರ ವಿಷಯವನ್ನು ಮಾತ್ರ ಹೇಳುತ್ತಿರುವರು. ಮತ್ತು ಕೆಲವು ಮತಗಳಲ್ಲಿ ಜೀವಾತ್ಮನನ್ನು ಮಾತ್ರ ಹೇಳಿಕೊಳ್ಳುತ್ತಾ ದೇವರೇ ಇಲ್ಲ ಎನ್ನುತ್ತಿದ್ದಾರೆ. ಒಂದು ಹಿಂದೂಮತದಲ್ಲಿ ಮಾತ್ರ ಜೀವಾತ್ಮನು ದೇವರು ಎಂದು ಕೆಲವರನ್ನುತ್ತಿದ್ದಾರೆ. ಆದರೆ ಯಾವ ಮತದಲ್ಲಾಗಲಿ ಜೀವಾತ್ಮನಿಗು ದೇವರಿಗು ಮಧ್ಯದಲ್ಲಿ ಆತ್ಮ ಒಂದಿದೆಯೆಂದು ಯಾರೂ ಗ್ರಹಿಸಲಿಲ್ಲ. ಆತ್ಮ ವಿಷಯವಾಗಲಿ,

ಅದರ ವಿವರವಾಗಲಿ, ಅದರ ಜ್ಞಾನವಾಗಲಿ ತಿಳಿಯದಿದ್ದರೂ, ಎಲ್ಲರ ಬಾಯಲ್ಲಿಯೂ ಆತ್ಮ ಎನ್ನುವ ಶಬ್ದ ಕರೆಯಲಾಗುತ್ತಿದೆ. ಆತ್ಮಹತ್ಯೆ ಎಂದಾಗಲಿ, ಆತ್ಮ ದ್ರೋಹ ಎಂದಾಗಲಿ, ಆತ್ಮಜ್ಞಾನ ಎಂದಾಗಲಿ, ಆತ್ಮಕ್ಷೋಭೆ ಎಂದಾಗಲಿ, ಆತ್ಮ ಬಲ ಎಂದಾಗಲಿ ಎಷ್ಟೋ ವಿಧಗಳಲ್ಲಿ ಆತ್ಮ ಎನ್ನುವ ಪದ ಮನುಷ್ಯನಿಂದ ಹೇಳುತ್ತಿದ್ದರೂ ಆತ್ಮ ಎಂದರೆ ಏನೊ, ಎಲ್ಲಿರುತ್ತದೊ, ಏನು ಮಾಡುತ್ತಿರುತ್ತದೊ, ಯಾರಿಗೂ ತಿಳಿದಿಲ್ಲ. ಆದ್ದರಿಂದ ಹಿಂದೂಗಳು ಆತ್ಮ ಪರಮಾತ್ಮರನ್ನು ಎರಡನ್ನು ತಿಳಿಯಬೇಕಾಗಿರುವಾಗ, ಉಳಿದ ಮತಸ್ಥರೆಲ್ಲರೂ ಮೂರು ಆತ್ಮಗಳನ್ನು ಕುರಿತು ತಿಳಿಯಬೇಕಾಗಿದೆ. ಯಾವ ಮತಸ್ಥರಾದರೂ ನಿಮ್ಮ ತ್ರೈತ ಸಿದ್ಧಾಂತ ನಮಗೇಕೆ ಎನ್ನದೇ, ದೇವರು ಎಲ್ಲಾ ಮತಗಳ ಗ್ರಂಥಗಳಲ್ಲಿಯೂ ಮೂರು ಆತ್ಮಗಳನ್ನು ಕುರಿತಿರುವ ತ್ರೈತ ಸಿದ್ಧಾಂತವನ್ನು ತಿಳಿಸಿದ್ದಾನೆ. ಆದ್ದರಿಂದ ಯಾರಾಗಲಿ ಇದು ನಿಮ್ಮ ಜ್ಞಾನ ಎನ್ನುವದಕ್ಕೆ ಅವಕಾಶವಿಲ್ಲ.

ಐದು ಸಾವಿರ ವರ್ಷಗಳ ಪೂರ್ವದ ಮನುಷ್ಯರಲ್ಲಿ ಮತಗಳ ಪ್ರಸಕ್ತಿಯೇ ಇಲ್ಲ. ದೇವರ ಜ್ಞಾನವನ್ನು ಕುರಿತಿರುವ ಶ್ರದ್ಧೆಯಿಂದ ಇದ್ದರೂ ಹೆಚ್ಚಾಗಿ ಆರಾಧನೆಗಳಿಗೆ ಅಭ್ಯಾಸವಾಗಿರುತ್ತಿದ್ದರು. ದೇವರು ಸೃಷ್ಟ್ಯಾದಿಯಲ್ಲಿ ಹೇಳಿದ ಜ್ಞಾನ ಮನುಷ್ಯರಿಗೆ ತಿಳಿಯದೆ ಹೋಗಿದೆ. ಕೆಲವರು ಜ್ಞಾನಿಗಳೆನಿಸಿಕೊಂಡವರು ಸಹ ದೈವಧರ್ಮಗಳನ್ನು ಬಿಟ್ಟು ಅಧರ್ಮಗಳ ಜ್ಞಾನವನ್ನೇ ಬೋಧಿಸುತ್ತಿರುವು ದರಿಂದ, ಆರಾಧನೆಗಳು ಹೆಚ್ಚಾಗಿ ಜ್ಞಾನ ಕಡಿಮೆಯಾಗಿದೆ. ಆ ನೇತೃತ್ವದಲ್ಲಿ ಧ್ಯಾನ, ದಾನ, ವೇದಾಧ್ಯಯನ, ಯಜ್ಞಗಳನ್ನು ಮಾಡುವುದು ಹೆಚ್ಚಾಗಿದೆ. ಅಂತಹ ಪರಿಸ್ಥಿತಿಯಲ್ಲಿ ದೇವರು ತನ್ನ ಧರ್ಮಗಳನ್ನು ತಿಳಿಸುವ ನಿಮಿತ್ತ ಒಬ್ಬ ಮನುಷ್ಯನಾಗಿ ಅವತರಿಸಿ, ಅಸಲಾದ ಜ್ಞಾನವನ್ನು ಹೇಳಿಹೋಗಿದ್ದಾನೆ. ಆದರೂ ಅದು ಮನುಷ್ಯರಲ್ಲಿ ಬೇಗ ಹರಡದೆ ಹೋಗಿದೆ. ಆದ್ದರಿಂದ ಆಗಿನಿಂದ ಇಲ್ಲಿಯವರೆಗು ದೇವರು ಮನುಷ್ಯನಾಗಿ ಬಂದು ಹೇಳಿದ ಜ್ಞಾನವೊಂದರ ವಿವರ ಮನುಷ್ಯರಿಗೆ ತಿಳಿದಿಲ್ಲವೆಂದೇ ಹೇಳಬಹುದು. ದೇವರು ಭಗವಂತನಾಗಿ ದ್ವಾಪರಯುಗದ ಕೊನೆಯಲ್ಲಿ ಅವತರಿಸಿ ತನ್ನ ಜ್ಞಾನವನ್ನು ಹೇಳಿಹೋದಾಗ,

ನಂತರ ಸ್ವಲ್ಪ ಕಾಲಕ್ಕೆ ದೇವರ ಜ್ಞಾನ ಭೂಮಿ ಮೇಲೆ ಪ್ರಜೆಗಳಲ್ಲಿ ಹರಡದೆ ಮತಗಳೆನ್ನುವವು ಹುಟ್ಟಿಬಂದಿವೆ. ವಿದೇಶಗಳಲ್ಲಿ ಕ್ರೈಸ್ತ ಮತ ಅಭಿವೃದ್ಧಿ ಆದಾಗ, ಭಾರತದೇಶ ಅದರ ಸುತ್ತಾ ಪಕ್ಕದಲ್ಲಿರುವ ದೇಶಗಳೆಲ್ಲವುಗಳಲ್ಲಿ ಭೌದ್ಧಮತ ವ್ಯಾಪಿಸುವ ಹಾಗೆ ಮಾಡಿದೆ. ಬೌದ್ಧಮತ ಭಾರತದೇಶದಲ್ಲೇ ಹುಟ್ಟಿರುವುದರಿಂದ, ಅಶೋಕ ಚಕ್ರವರ್ತಿ ಸಹ ಅದನ್ನು ಅವಲಂಭಿಸುವುದರಿಂದ, ಅತನನ್ನು ನೋಡಿ ಬಹಳ ಜನ ಬೌದ್ಧಮತಸ್ಥರಾಗಿ ಬದಲಾಗಿದ್ದಾರೆ. ಸ್ವತಃ ಅಶೋಕ ಚಕ್ರವರ್ತಿ ಮತ್ತು ಆತನ ಮಗಳು ಹೆಚ್ಚಾಗಿ ಬೌದ್ಧಮತವನ್ನು ಪ್ರಚಾರ ಮಾಡುವುದರಿಂದ, ಎರಡು ಸಾವಿರ ವರ್ಷಗಳ ಪೂರ್ವ ಬೌದ್ಧಮತ ಹೆಚ್ಚಾಗಿ ಪ್ರಚಾರವಾಗಿ ಅದರೊಳಗೆ ಬಹಳಜನ ಹೋಗುವುದು ನಡೆದಿದೆ.

ಅಂತಹ ಸಮಯದಲ್ಲಿ ಬೌದ್ಧಮತ ಎಂದು ಒಂದು ಮತದ ಹೆಸರು ಹೇಳುವವರು ಬಂದಾಗ, ಅಲ್ಲಿಯವರೆಗು ಇರುವ ಇಂದೂಗಳು ನಾವು ಇಂದೂಗಳೆಂದು ಹೇಳಿಕೊಳ್ಳಬೇಕಾಗಿದೆ. ಹಾಗೆ ಹೇಳಿಕೊಳ್ಳುವುದರಲ್ಲಿ ನಮ್ಮದು ಇಂದೂ ಮತವೆಂದು ಹೇಳಿಕೊಳ್ಳುವುದು ನಡೆದಿದೆ. ಸ್ವಲ್ಪ ಕಾಲಕ್ಕೆ ಇಂದೂ ಮತ ಸ್ವಲ್ಪ ಹಿಂದೂಮತವಾಗಿ ಬದಲಾಗಿದೆ. ಸ್ವಲ್ಪ ಮಟ್ಟಿನ ಶಬ್ದ ಭೇದವನ್ನು ಯಾರೂ ಗ್ರಹಿಸದೆ ಎಲ್ಲರೂ ನಾವು ಹಿಂದೂಗಳೆಂದು ಹೇಳಿಕೊಳ್ಳು ವುದು ನಡೆದಿದೆ. ಪಕ್ಕದಲ್ಲಿ ಬೌದ್ಧಮತ ಬೆಳೆಯುವುದರಿಂದ ಅಲ್ಲಿಯವರೆಗಿರುವ ಹಿಂದೂಗಳು ಒಬ್ಬೊಬ್ಬರು ಬೌದ್ಧಮತವನ್ನು ಸ್ವೀಕರಿಸುವುದರಿಂದ, ಹಿಂದೂ ಮತ ಕ್ಷೀಣಿಸುವುದಕ್ಕೆ ಆರಂಭವಾಗಿದೆ, ಅಂತಹ ಸಮಯದಲ್ಲಿ ಕೇರಳ ರಾಷ್ಟ್ರದಲ್ಲಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಶಂಕರಾಚಾರ್ಯರು ಹಿಂದೂಮತದಲ್ಲಿ ಅದ್ವೈತ ಸಿದ್ಧಾಂತವನ್ನು ಸ್ಥಾಪಿಸಿ, ಹಿಂದೂಮತ ಬೌದ್ಧಮತದಿಂದ ಕ್ಷೀಣಿಸದಂತೆ ನೋಡಿದ್ದಾರೆ. ಅಲ್ಲಿಗೆ ಬೌದ್ಧಮತ ವ್ಯಾಪ್ತಿ ಹೊಂದದೆ ನಿಲ್ಲಬೇಕಾಗಿ ಬಂದಿತು. ನಂತರ ಸ್ವಲ್ಪಕಾಲಕ್ಕೆ ತಮಿಳನಾಡು ರಾಷ್ಟ್ರದಲ್ಲಿ ಬ್ರಾಹ್ಮಣ ಕುಲದಲ್ಲಿ ರಾಮಾನುಜಾ ಚಾರ್ಯರು ಹುಟ್ಟಿ, ಅದ್ವೈತದಲ್ಲಿ ಸ್ವಲ್ಪ ವಿಶಿಷ್ಟತೆ ಹೊಂದಿದ ವಿಶಿಷ್ಠಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿ, ಶಂಕರಾಚಾರ್ಯರವರಿಗೆ ಸ್ವಲ್ಪ ವಿಭಿನ್ನವಾಗಿ

ಬೋಧಿಸಲು ಪ್ರಾರಂಭಿಸಿದರು. ಅಂತಹ ಸಮಯದಲ್ಲಿ ಹಿಂದೂಮತದಲ್ಲೇ ಅದ್ವೈತವನ್ನು ಅನುಸರಿಸುವವರಿಗೆ, ವಿಶಿಷ್ಠಾದ್ವೈತವನ್ನು ಅನುಸರಿಸುವವರಿಗೆ ದೊಡ್ಡದಾಗಿ ಘರ್ಷಣೆಗಳು ಸಹ ನಡೆದಿವೆ. ಒಬ್ಬರ ಮೇಲೆ ಮತ್ತೊಬ್ಬರು ದಾಳಿ ಮಾಡಿಕೊಳ್ಳುವುದು, ಸಾಯಿಸಿಕೊಳ್ಳುವುದು ಸಹ ನಡೆದಿದೆ. ಅಂತಹ ಸಮಯದಲ್ಲಿ ಕರ್ನಾಟಕ ರಾಷ್ಟ್ರದಲ್ಲಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಮಧ್ವಾ ಚಾರ್ಯರು ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವುದು ನಡೆದಿದೆ. ಆಗಿನಿಂದ ಅದ್ವೈತ, ವಿಶಿಷ್ಟಾದ್ವೈತಗಳಲ್ಲಿ ಇಲ್ಲದವರು ಕೆಲವರು ದ್ವೈತವನ್ನು ಅನುಸರಿಸುವುದು ನಡೆದಿದೆ. ಈ ವಿಧವಾಗಿ ಹಿಂದೂಮತದಲ್ಲಿ ಅದ್ವೈತರು ಕೆಲವರು, ದ್ವೈತರು ಕೆಲವರು, ವಿಶಿಷ್ಟಾದ್ವೈತರು ಕೆಲವರು ತಯಾರಾದಾಗ, ಉಳಿದವರೆಲ್ಲರೂ ನಾವು ಹಿಂದೂಗಳೆಂದು ಹೇಳಿಕೊಳ್ಳುತ್ತಿದ್ದರು.

ಅಂತಹ ಸಮಯದಲ್ಲಿ ಒಂದು ಕಡೆ ಇಸ್ಲಾಮ್‌ರವರು ಭಾರತದೇಶದಲ್ಲಿ ಪ್ರವೇಶಿಸಿ ತಮ್ಮ ಧರ್ಮವನ್ನು ಪ್ರಚಾರ ಮಾಡಿದ್ದಾರೆ. ನಂತರ ಮತ್ತೊಂದು ಕಡೆ ಕ್ರೈಸ್ತವರು ಭಾರತದೇಶದಲ್ಲಿ ಪ್ರವೇಶಿಸಿ ತಮ್ಮ ಕ್ರೈಸ್ತವವನ್ನು ಪ್ರಚಾರ ಮಾಡಿದ್ದಾರೆ. ಆ ಎರಡೂ ಎರಡು ಮತಗಳಾಗಿ ಪ್ರಚಾರವಾಗುವುದರಿಂದ ಭಾರತದೇಶದಲ್ಲಿ ಉಳಿದ ಹಿಂದೂಗಳು ಇತರ ಮತಗಳಕಡೆ ಆಕರ್ಷಿತರಾಗುವುದು ನಡೆದಿದೆ. ಎಷ್ಟುಕಾಲವಿದ್ದರೂ ತಮ್ಮ ಹಿಂದೂಮತದಲ್ಲಿ ಜ್ಞಾನ ತಿಳಿಯಲಿಲ್ಲವೆಂದು, ಬ್ರಾಹ್ಮಣರ ಹತ್ತಿರ ಶೂದ್ರರೆಂದು, ಅಂಟಬಾರದವರೆಂದು ಅನ್ನಿಸಿಕೊಳ್ಳುವುದಕ್ಕಿಂತ ಇತರ ಮತಗಳೊಳಗೆ ಹೋಗಿ, ಆ ಮತದಲ್ಲಿ ಎಲ್ಲರೊಂದಿಗೆ ಸಮಾನವಾಗಿ ಇರಬಹುದೆಂದು ಬಹಳ ಜನ ಹಿಂದೂಗಳು ಕ್ರೈಸ್ತವರಾಗಿ ಬದಲಾಗುವುದು ನಡೆದಿದೆ. ಕೆಲವರು ಮಾತ್ರ ಇಸ್ಲಾಮ್‌ದಲ್ಲಿ ಸೇರಿಹೋದರೆ, ಬಹಳ ಜನ ಕ್ರೈಸ್ತವರಾಗಿ ಬದಲಾಗಿದ್ದಾರೆ. ಅದರಿಂದ ಈದಿನ ಹಿಂದೂಮತ ಭಾರತದೇಶದಲ್ಲಿ ಸ್ವಲ್ಪ ಕ್ಷೀಣಿಸಿಹೋಗಿದೆಯೆಂದು ಹೇಳಬಹುದು. ಈಗ ಮತ್ತೊಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! "ಕ್ರೈಸ್ತವ, ಇಸ್ಲಾಮ್ ಭಾರತ ದೇಶದೊಳಗೆ ಪ್ರವೇಶಿಸದಮೊದಲೇ ಬೌದ್ಧಮತ ಪ್ರಚಾರ ಮಾಡಲಾಗಿದೆ. ಬೌದ್ಧಮತದಿಂದ

ಹಿಂದೂಮತ ಕ್ಷೀಣಿಸಿ ಹೋಗುತ್ತದೆನ್ನುವ ಉದ್ದೇಶ್ಯದಿಂದ ಆದಿಶಂಕರಾ ಚಾರ್ಯರು ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿ ಪ್ರಚಾರ ಮಾಡಿದ್ದಾನೆ. ನಂತರ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರಾಮಾನುಜಾಚಾರ್ಯರು ಪ್ರಚಾರ ಮಾಡಿದ್ದಾರೆ. ಹಾಗೇ ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾರೆ. ಈ ವಿಧವಾಗಿ ಮೂವರು ಆಚಾರ್ಯರು ಹಿಂದೂಮತವನ್ನು ಉದ್ಧರಿಸಬೇಕೆಂದು ನೋಡಿದರೂ ಕೊನೆಗೆ ಹಿಂದೂಮತ ಏಕೆ ಕ್ಷೀಣಿಸುತ್ತಿದೆ ಯೆಂದು, ಇತರ ಮತಗಳು ಬೆಳೆಯುವುದಕ್ಕೆ ಕಾರಣವೇನು" ಎಂದು ಕೇಳಬಹುದು.

ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ. ಆದಿಶಂಕರಾಚಾರ್ಯ ರಾಗಲಿ, ರಾಮಾನುಜಾಚಾರ್ಯರಾಗಲಿ, ಮಧ್ವಾಚಾರ್ಯರಾಗಲಿ ಮೂವರೂ ದಕ್ಷಿಣ ದೇಶದವರೇ. ಇವರು ಮೂವರೂ ದ್ರಾವಿಡ ಬ್ರಾಹ್ಮಣರೇ. ಮೊದಲು ಇವರ ಉದ್ದೇಶ ಒಳ್ಳೆಯದೇ ಆದರೂ, ನಂತರ ಇವರ ಸಿದ್ಧಾಂತಗಳು ರಾಜಕೀಯಪಾರ್ಟಿಗಳ ಹಾಗೆ ಬದಲಾಗಿ, ತನಗೆ ತಾನೇ ಹಿರಿಯನೆಂದು ಹೇಳುವ ಸ್ಥಿತಿಗೆ ಬಂದಿದ್ದಾರೆ. ಆ ವಿಧವಾಗಿ ಇವರನ್ನು ಬದಲಾಯಿಸಿದವರು ಆರ್ಯ ಬ್ರಾಹ್ಮಣರು. ಆರ್ಯ ಬ್ರಾಹ್ಮಣರ ಪ್ರಭಾವ ಇವರಮೇಲೆ ಬೀಳುವುದರಿಂದ ಇವರು ಅಸಲಾದ ಇಂದೂ ಧರ್ಮಗಳನ್ನು ಮರೆತುಹೋಗಿದ್ದಾರೆ. ಭಗವದ್ಗೀತೆ ಯನ್ನು ಎಲ್ಲೂ ಹೇಳದೇ ವೇದಗಳನ್ನೇ ಹೇಳುತ್ತಾ ಬಂದಿದ್ದಾರೆ. ಪೂರ್ತಿ ಲೋಪ ಅಲ್ಲಿಂದ ಪ್ರಾರಂಭವಾಗಿದೆ. ಮೊದಲು ದಕ್ಷಿಣ ಭಾರತದೇಶ ದವರು ಸಂಪೂರ್ಣ ಇಂದೂ ಜ್ಞಾನವನ್ನು (ದೈವಜ್ಞಾನವನ್ನು) ತಿಳಿದವರಾಗಿದ್ದಾಗ, ನಂತರ ಆರ್ಯ ಬ್ರಾಹ್ಮಣರ ಗಾಳಿ ತಾಕಿ ಅವರು ತಪ್ಪು ದಾರಿಯಲ್ಲಿ ನಡೆಯು ವುದು ಪ್ರಾರಂಭಿಸಿದ್ದಾರೆ. ಕೊನೆಗೆ ಭಗವದ್ಗೀತೆಯಲ್ಲಿ ದೇವರು ಹೇಳಿದ ಜ್ಞಾನ ತಿಳಿಯದೆ ಹೋಗಿ, ಮನುಷ್ಯರು ಹೇಳಿದ ವೇದಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿ ಕೊಂಡು ಅದರ ಪ್ರಕಾರ ನಡೆಯುವುದನ್ನು ಪ್ರಾರಂಭಿಸಿದ್ದಾರೆ. ಉತ್ತರ ಭಾರತದೇಶದಲ್ಲಿನ ಸಂಸ್ಕೃತ ಭಾಷೆಗೆ ಅಭ್ಯಾಸವಾಗಿ ವೇದಗಳನ್ನೇ ಹೇಳುತ್ತಾ,

ತಮ್ಮ ಸಿದ್ಧಾಂತಗಳನ್ನು ಪ್ರತ್ಯೇಕ ಸಮಾಜವಾಗಿ ಹೇಳಿಕೊಳ್ಳುತ್ತಾ, ಅದ್ವೈತರೆಂದು, ವಿಶಿಷ್ಟಾದ್ವೈತರೆಂದು, ದ್ವೈತರೆಂದು ಹೇಳಿಕೊಳ್ಳುವುದು ನಡೆದಿದೆ. ತಮ್ಮ ಸಿದ್ಧಾಂತಗಳಿಗೆ ತಕ್ಕಹಾಗೆ ಅದ್ವೈತರು ವಿಭೂದಿ ಧಾರಣ ಮಾಡಿಕೊಂಡರೆ, ವಿಶಿಷ್ಟಾದ್ವೈತರು ಮೂರು ನಾಮಗಳನ್ನು ಇಟ್ಟುಕೊಂಡರೆ, ದ್ವೈತರು ವಿಶಿಷ್ಟಾದ್ವೈತರಿಗಿಂತ ಸ್ವಲ್ಪ ಬೇರೆಯಾಗಿರುವ ಮೂರು ನಾಮಗಳನ್ನು ಇಟ್ಟುಕೊಳ್ಳುವುದು ನಡೆದಿದೆ. ಅದ್ವೈತರಿಗೆ ಪೂರ್ತಿಯಾಗಿ ಬಿಳಿ ವಿಭೂತಿರೇಖೆಗಳನ್ನು ತಲೆ ಹಣೆಯ ಭಾಗದಲ್ಲಿ ಅಡ್ಡವಾಗಿ ಧರಿಸಿದಾಗ, ವಿಶಿಷ್ಟಾದ್ವೈತರು, ದ್ವೈತರು ಇಬ್ಬರೂ ಮೂರು ನಾಮಗಳನ್ನೇ ಬೇರೆ ಬೇರೆ ಬಣ್ಣಗಳಲ್ಲಿ ಹಣೆಯ ಭಾಗದಲ್ಲಿ ಧರಿಸಿದ್ದಾರೆ. ಆ ವಿಧವಾಗಿ ಧರಿಸುವುದರಿಂದ ಆಯಾ ಸಿದ್ಧಾಂತಕರ್ತರು ಸಿದ್ಧಾಂತಗಳೊಂದಿಗೆ ನಾಮಗಳನ್ನು ಸಹ ಕಂಡುಹಿಡಿದಿದ್ದಾರೆಂದು ಕೆಲವರನ್ನುತ್ತಿದ್ದಾರೆ.

ಚರಿತ್ರೆಯಲ್ಲಿ ಏನು ನಡೆದಿದೆಯೆಂದು ತಿಳಿಯದಿರುವಾಗ ಆದಿ ಶಂಕರಾಚಾರ್ಯನೇ ವಿಭೂತಿ ನಾಮಗಳನ್ನು ತನ್ನ ಅದ್ವೈತಕ್ಕಾಗಿ ತಯಾರಿಸಿದ್ದಾನೆಂದು ತಪ್ಪಾಗಿ ಅಂದುಕೊಳ್ಳುವುದು ನಡೆದಿದೆ. ವಾಸ್ತವಕ್ಕೆ ಮೂರು ವಿಭೂತಿ ರೇಖೆಗಳಲ್ಲಾಗಲಿ, ಮೂರು ನಾಮಗಳಲ್ಲಾಗಲಿ ಈ ದಿನವಿರುವ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳಿಗೆ ಸಂಬಂಧವಿಲ್ಲ. ಆ ಸಿದ್ಧಾಂತ ಕರ್ತರು ತಮ್ಮ ಚಿಹ್ನೆಗಳಾಗಿ ಇಟ್ಟುಕೊಂಡ ನಾಮಗಳನ್ನು ಅವರು ಕಂಡುಹಿಡಿದಿಲ್ಲ. ಕೃತ್‌ಯುಗದಲ್ಲೇ ದ್ವೈತ ಜ್ಞಾನವನ್ನು ತಿಳಿದ ಕೆಲವರು ಪ್ರಜೆಗಳೆಲ್ಲರಿಗು ಜ್ಞಾನ ತಿಳಿಸುವ ನಿಮಿತ್ತ, ತ್ರೈತ ಸಿದ್ಧಾಂತವನ್ನು ನಿರಾಕಾರ ದೇವರಲ್ಲಿಯೂ, ಸಾಕಾರ ಭಗವಂತನಲ್ಲಿಯೂ ತೋರಿಸುವುದಕ್ಕೆ ಅಡ್ಡನಾಮಗಳನ್ನು, ನಿಲುವು (ಉದ್ದ) ನಾಮಗಳನ್ನು ಇಟ್ಟು ತೋರಿಸಿದ್ದಾರೆ. ಸೃಷ್ಟ್ಯಾದಿಯಲ್ಲಿ ದೇವರು ತನ್ನ ಜ್ಞಾನವನ್ನು ಬೋಧಿಸಿದಾಗಲೇ ತ್ರೈತ ಸಿದ್ಧಾಂತವನ್ನು ಬೋಧಿಸಿದ್ದಾನೆ. ಆದಿಯಲ್ಲಿ ದೇವರು ಬೋಧಿಸಿದ ಜ್ಞಾನವನ್ನು ಕೆಲವರು ಜ್ಞಾನಿಗಳು ಇತರರಿಗೆ ಮಾತುಗಳ ರೂಪದಲ್ಲೇ ಅಲ್ಲದೆ ದೃಶ್ಯ ರೂಪದಲ್ಲೂ ಸಹ ಬೋಧಿಸಿದ್ದಾರೆ. ಹಾಗೆ ದೇವರನ್ನು ದೃಶ್ಯ ರೂಪದಲ್ಲಿ ತಿಳಿಸುತ್ತಾ ದೇವರಿಗೆ ಆಕಾರವೂ ಇಲ್ಲ, ಹೆಸರೂ ಇಲ್ಲ, ಕೆಲಸವೂ

ಇಲ್ಲ ಎನ್ನುವ ಸೂತ್ರವನ್ನು ತೋರಿಸುವುದಕ್ಕೆ ಮೂಗು, ಮುಖ ಇಲ್ಲದ ಗುಂಡಾಗಿರುವ ಕಲ್ಲನ್ನು ದೇವರಾಗಿ ತೋರಿಸುವುದು ನಡೆದಿದೆ. ದೇವರು ಪುರುಷನು ಆದ್ದರಿಂದ ಮೂಗು ಮುಖ ಎನ್ನುವ ಆಕಾರವಿಲ್ಲದ ಕಲ್ಲನ್ನು ಲಿಂಗ ಎಂದು ಕರೆಯುವುದು ನಡೆದಿದೆ. ಲಿಂಗ ಎನ್ನುವ ಪದ ಪುರುಷನನ್ನು ಸೂಚಿಸುತ್ತದೆ. ಆದ್ದರಿಂದ ದೇವರ ಗುರುತಿಗಾಗಿ ಇಟ್ಟಿರುವ ಕಲ್ಲಿಗೆ 'ಲಿಂಗ' ಎಂದು ಹೆಸರಿಡುವುದು ನಡೆದಿದೆ. ದೇವರು ವಿಶ್ವವೆಲ್ಲದಕ್ಕೂ ಅಧಿಪತಿ ಆದ್ದರಿಂದ ಆತನನ್ನು ಅಧಿಪತಿ ಅನ್ನುವ ಅರ್ಥವನ್ನುಕೊಡುವ ಪದವಾದ **"ಈಶ್ವರ"** ಎನ್ನುವ ಶಬ್ದದೊಂದಿಗೆ ಕರೆಯುವುದು ನಡೆದಿದೆ. ಈಶ್ವರ ಎನ್ನುವ ಪದ ಹೆಸರಲ್ಲ ಅರ್ಥವನ್ನು ತಿಳಿಸುವ ಪದವೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈ ವಿಧವಾಗಿ ಇಟ್ಟಿರುವ ಈಶ್ವರ ಲಿಂಗಕ್ಕೆ ರೂಪವೂ ಇಲ್ಲ, ಹೆಸರೂ ಇಲ್ಲ. ಹಾಗೇ ಒಂದು ಕಡೆ ಇರುವ ಲಿಂಗರೂಪವಾದ ಕಲ್ಲು ಕದಲುವುದಿಲ್ಲ ಮೆದಲುವುದಿಲ್ಲ, ಆದ್ದರಿಂದ ಕ್ರಿಯೆ ಇಲ್ಲದವನು ದೇವರು ಎಂದು ಹೇಳುವುದಕ್ಕೆ ಅವಕಾಶವಿದೆ. ಒಟ್ಟಿನಲ್ಲಿ ದೇವರಿಗಿರುವ ರೂಪ, ನಾಮ, ಕ್ರಿಯೆಗಳು ಇಲ್ಲದವನೆನ್ನುವ ಸೂತ್ರ ಲಿಂಗದಲ್ಲಿ ದೃಶ್ಯರೂಪವಾಗಿ ತಿಳಿಯುತ್ತಿದೆ. ದೇವರು ಮೂರು ಭಾಗಗಳಾಗಿ ಇದ್ದಾನೆಂದು ತ್ರೈತ ಸಿದ್ಧಾಂತವನ್ನು ತಿಳಿಸುವ ನಿಮಿತ್ತ ಲಿಂಗದ ಮೇಲೆ ಮೂರು ವಿಭೂತಿರೇಖೆಗಳನ್ನು ಅಡ್ಡವಾಗಿ ಇಡುವುದು ನಡೆದಿದೆ. ಮೂರು ವಿಭೂತಿರೇಖೆಗಳನ್ನು ಮೂರು ಆತ್ಮಗಳಾಗಿ ತಿಳಿಸುತ್ತಾ ಆ ದಿನ ಮೂರು ರೇಖೆಗಳನ್ನು ಲಿಂಗದ ಮೇಲೆ ಇಡುವುದು ನಡೆದಿದೆ. ಮೂರು ಆತ್ಮಗಳನ್ನು ಮೂರು ಬಿಳಿಯ ವಿಭೂತಿರೇಖೆಗಳನ್ನು ತೋರಿಸುವುದೇ ಅಲ್ಲದೆ, ಅದರಲ್ಲಿ ಮುಖ್ಯವಾದ ಆತ್ಮವಾಗಿ ಒಂದನ್ನು ಗುರುತಿಸುತ್ತಾ ಮಧ್ಯದಲ್ಲಿರುವ ರೇಖೆ ಮೇಲೆ ಕೆಂಪು ಕುಂಕುಮ ಬೊಟ್ಟನ್ನಿಡುವುದು ನಡೆದಿದೆ. (ಲಿಂಗಾಕಾರ ವೊಂದರ ಸಂಪೂರ್ಣ ಸಮಾಚಾರ ನಮ್ಮ ರಚನೆಗಳಲ್ಲಿ **"ದೇವಾಲಯ ರಹಸ್ಯಗಳು"** ಎಂಬ ಗ್ರಂಥದಲ್ಲಿ ಲಭಿಸುತ್ತದೆ.) ಈ ವಿಧವಾಗಿ ಪೂರ್ವದಲ್ಲಿ ಕೃತ್‌ಯುಗದಲ್ಲೇ ವಿಭೂತಿ ರೇಖೆಗಳು ನಿರ್ಮಿಸಲ್ಪಟ್ಟಿವೆ. ಮೂರು ಯುಗಗಳ

ನಂತರ ಬಂದಿರುವ ಕಲಿಯುಗದಲ್ಲಿ ಅದ್ವೈತರಿಗೆ ವಿಭೂತಿ ರೇಖೆಗಳನ್ನು ತಮ್ಮ ಅದ್ವೈತಕ್ಕೆ ಗುರುತಾಗಿ ಬಳಸಿಕೊಂಡಿದ್ದಾರೆ. ಅಷ್ಟೇ ಆಗಲಿ ಅದ್ವೈತರಿಗು ವಿಭೂತಿ ರೇಖೆಗಳಿಗು ಯಾವ ಮಾತ್ರ ಸಂಬಂಧವಿಲ್ಲ. ಮೂರು ವಿಭೂತಿ ರೇಖೆಗಳು ಮೂರು ಆತ್ಮಗಳ ವಿವರವನ್ನು ತಿಳಿಸುವ ತ್ರೈತ ಸಿದ್ಧಾಂತಕ್ಕೆ ನಿರೂಪಣೆ ಯಾಗಿ ಇವೆಯೆಂದು ತಿಳಿಯಬೇಕು.

ಇನ್ನು ಮೂರು ನಿಲುವು (ಉದ್ಧ) ನಾಮಗಳ ವಿಷಯಕ್ಕೆ ಬಂದರೆ ದೇವರು ನಿರಾಕಾರನೇ ಅಲ್ಲ, ಆತನು ತನ್ನ ಜ್ಞಾನವನ್ನು ಬೋಧಿಸುವುದಕ್ಕೆ ಯಾವಾಗಲೋ ಒಂದು ಸಲ ಸಾಕಾರ ರೂಪದಲ್ಲಿ ಭಗವಂತನಾಗಿ ಬರುವನೆಂದು, ಹಾಗೆ ಬಂದಾಗ ಆತನು ತನ್ನ ಜ್ಞಾನವನ್ನು ಬೋಧಿಸುವುದೇ ಅಲ್ಲದೆ, ತಾನು ಮೂರು ಆತ್ಮಗಳಾಗಿ ವಿಭಜನೆಯಾಗಿದ್ದೇನೆಂದು ತಿಳಿಸುವ ನಿಮಿತ್ತ ಮೂರು ನಾಮಗಳನ್ನು ಧರಿಸುವನೆಂದು, ಮನುಷ್ಯನನ್ನು ಹೋಲುವ ಪ್ರತಿಮೆ ಆಕಾರವನ್ನು ತಯಾರು ಮಾಡಿ, ಆ ಪ್ರತಿಮೆಗೆ ನಿಲುವು ನಾಮವನ್ನು ಇಟ್ಟಿದ್ದಾರೆ. ದೇವರೇ ಭಗವದ್ಗೀತೆಯಲ್ಲಿ ಮನುಷ್ಯರಲ್ಲಿ ಧರ್ಮಗಳಿಗೆ ಮುಪ್ಪು ಏರ್ಪಟ್ಟು, ಅಧರ್ಮಗಳು ಅಭಿವೃದ್ಧಿ ಆದಾಗ ನಾನು ಅವತರಿಸಿ ಜ್ಞಾನವನ್ನು ತಿಳಿಸುತ್ತೇನೆಂದು, ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ 5, 6, 7, 8 ಶ್ಲೋಕಗಳಲ್ಲಿ ಹೇಳಿದ್ದಾರೆ. ಇದೇ ವಿಷಯ ದೇವರು ಸೃಷ್ಟಿ ಆದಿಯಲ್ಲೇ ಹೇಳಿದ್ದಾನೆ. ಆದ್ದರಿಂದ ಕೃತ್‌ಯುಗ ದಲ್ಲೇ ಕೆಲವರು ಚೆನ್ನಾಗಿ ಜ್ಞಾನವನ್ನು ತಿಳಿದವರು ಮೊದಲು ನಿರಾಕಾರ ದೇವರ ರೂಪವಾದ ಈಶ್ವರ ಲಿಂಗವನ್ನು ತಯಾರಿಸಿ ತೋರಿಸಿದ್ದಾರೆ. ಲಿಂಗದ ಮೇಲೆ ತ್ರೈತ ಸಿದ್ಧಾಂತ ತಿಳಿಯುವಹಾಗೆ ಮೂರು ವಿಭೂತಿರೇಖೆಗಳನ್ನಿಟ್ಟಿದ್ದಾರೆ. ನಿರಾಕಾರ ರೂಪವನ್ನು ಸೂಚಿಸುವ ಈಶ್ವರಲಿಂಗವನ್ನು ಇಡುವುದೇ ಅಲ್ಲದೇ, ಸಾಕಾರ ಭಗವಂತನ ರೂಪವನ್ನು ಸಹ ಪ್ರತಿಮೆ ರೂಪದಲ್ಲಿ ಇಟ್ಟಿದ್ದಾರೆ. ಹಾಗೆ ಮನುಷ್ಯ ಆಕಾರದ ಪ್ರತಿಮೆಯನ್ನು ಇಡುವುದರಿಂದ ದೇವರು ಮನುಷ್ಯನಹಾಗೇ ಬಂದು ತನ್ನ ಧರ್ಮಗಳನ್ನು ತಿಳಿಸುತ್ತಾನೆಂದು ಎಲ್ಲರಿಗೂ ತಿಳಿಯುವಹಾಗೆ ಮಾಡಿದ್ದಾರೆ. ದೇವರು ಸಾಕಾರದಲ್ಲಿ ಬಂದಾಗ ತನ್ನ

ವಿಧಾನವೆಲ್ಲವೂ ಮೂರು ಆತ್ಮಗಳಾಗಿ ಇದೆಯೆಂದು ತಿಳಿಸುವುದಕ್ಕೆ, ತಲೆ ಹಣೆಯ ಭಾಗದಲ್ಲಿ ಮೂರು ಉದ್ದ ನಾಮಗಳನ್ನು ಧರಿಸಿ ತೋರಿಸುವನೆಂದು, ಜ್ಞಾನಿಗಳಾದವರು ಪ್ರತಿಮೆಗೆ ಮೂರು ನಿಲುವ ನಾಮಗಳನ್ನಿಟ್ಟಿದ್ದಾರೆ. ಯಾರನ್ನು ನೋಡಿದರು ಮುಖದಕಡೆನೇ ನೋಡುತ್ತೇವೆ, ಆದ್ದರಿಂದ ಮುಖದ ಮೇಲೆ ನಾಮಗಳು ಇಡುವುದರಿಂದ ದೇವರ ತ್ರೈತ ಸಿದ್ಧಾಂತ ಎಲ್ಲರಿಗೂ ಸುಲಭವಾಗಿ ತಿಳಿಯುತ್ತದೆಂದು ಆ ದಿನದ ಜ್ಞಾನಿಗಳ ಭಾವ.

ಈ ವಿಧವಾಗಿ ಕೃತ್‌ಯುಗದಲ್ಲೇ ದೊಡ್ಡ ಜ್ಞಾನಿಗಳಾದವರು ದೇವರೊಂದರ ನಿರಾಕಾರವನ್ನೂ, ಸಾಕಾರವನ್ನೂ ತಯಾರಿಸಿ, ಅವುಗಳನ್ನು ನೋಡಿದವರೆಲ್ಲಾ ದೈವಜ್ಞಾನವನ್ನು ತಿಳಿಯಬಲ್ಲರೆಂದು ಆಸೆ ಪಟ್ಟಿದ್ದಾರೆ. ಆದರೇ ಒಳ್ಳೆಯದರಲ್ಲೇ ಕೆಟ್ಟದ್ದು ನಡೆದಿದೆ ಎನ್ನುವಂತೆ ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತ ಕರ್ತರು ಬಂದ ನಂತರ ನಿರಾಕಾರ ಈಶ್ವರ ಲಿಂಗ ಅದ್ವೈತ ದೇವರಾಗಿ, ಲಿಂಗದ ಮೇಲೆ ವಿಭೂತಿ ಗುರುತುಗಳು ಅದ್ವೈತ ಅಡ್ಡನಾಮಗಳಾಗಿ (ವಿಭೂತಿ ರೇಖೆಗಳಾಗಿ) ಅದ್ವೈತರು ಹೇಳಿಕೊಳ್ಳುವುದು ನಡೆದಿದೆ. ಅದೇ ವಿಧವಾಗಿ ಸಾಕಾರ ರೂಪವನ್ನೂ, ಅದರಮೇಲೆ ಮೂರು ನಾಮಗಳನ್ನೂ ವಿಶಿಷ್ಠಾದ್ವೈತರು ತಮ್ಮ ದೇವರಾಗಿ, ನಾಮಗಳು ತಮ್ಮ ಸಾಂಪ್ರದಾಯದ ಗುರುತುಗಳಾಗಿ ಹೇಳಿಕೊಳ್ಳುವುದು ನಡೆದಿದೆ. ಈ ವಿಧವಾಗಿ ಹಿಂದೂ ಮತವನ್ನು ಉದ್ಧರಿಸುವುದಕ್ಕೆ ಬಂದ ಸಿದ್ಧಾಂತಕರ್ತರೆ ತಪ್ಪು ಹೆಜ್ಜೆಗಳನ್ನು ಹಾಕಿ ಒಬ್ಬರು ವಿಭೂತಿರೇಖೆಗಳನ್ನೂ, ಮತ್ತೊಬ್ಬರು ಮೂರು ನಾಮಗಳನ್ನು ತಮ್ಮ ಸಿದ್ಧಾಂತ ಗುರುತುಗಳಾಗಿ ಹೇಳಿಕೊಳ್ಳುವುದರಿಂದ ಮೊದಲ ಜ್ಞಾನಿಗಳ ಭಾವ ಗಾಳಿಯೊಳಗೆ ಬೆರೆತುಹೋಗಿ, ಅವುಗಳಲ್ಲಿ ತ್ರೈತ ಸಿದ್ಧಾಂತ ಒಳಗೊಂಡಿದೆನ್ನುವ ರಹಸ್ಯ ತಿಳಿಯದೆ ಹೋಗಿದೆ. ಎಷ್ಟೋ ದೊಡ್ಡ ಉದ್ದೇಶದಿಂದ ಇಟ್ಟಿರುವ ವಿಭೂತಿರೇಖೆಗಳು, ತ್ರಿ ನಾಮಗಳ ಭಾವ ಯಾರಿಗೂ ತಿಳಿಯದೆ ಹೋಗಿದೆ. ನಿರಾಕಾರ, ಸಾಕಾರ ಚಿಹ್ನೆಗಳಾಗಿರುವ ವಿಭೂತಿರೇಖೆಗಳು, ಮೂರು ನಾಮಗಳು ಅದ್ವೈತರಿಗಾಗಲಿ, ವಿಶಿಷ್ಟಾದ್ವೈತರಿಗಾಗಲಿ ಯಾವ ಮಾತ್ರ ಸಂಬಂಧ ಇಲ್ಲದವು. ಆದರೂ ಅವು ಈದಿನ ಅದ್ವೈತ,

ವಿಶಿಷ್ಟಾದ್ವೈತ ಚಿಹ್ನೆಗಳಾಗಿ ಬದಲಾಗಿವೆ. ವಿಶಿಷ್ಟಾದ್ವೈತ ನಂತರ ಹುಟ್ಟಿಬಂದಿರುವುದು ದ್ವೈತ. ದ್ವೈತ ಸಿದ್ಧಾಂತವನ್ನು ಮಧ್ವಾಚಾರ್ಯರವರು ಕರ್ನಾಟಕ ರಾಷ್ಟ್ರದಿಂದ ಪ್ರಚಾರ ಮಾಡುವುದು ನಡೆದಿದೆ. ಆಗ ಅದ್ವೈತರಿಗೂ, ವಿಶಿಷ್ಠಾದ್ವೈತರಿಗೂ ವಿಭೂತಿರೇಖೆಗಳು, ಮೂರು ನಾಮಗಳ ಚಿಹ್ನೆಗಳಿರುವಹಾಗೆ ತಮಗೂ ಒಂದು ಚಿಹ್ನೆ ಅವಶ್ಯವಾಗಿದೆ. ಕೃತಯುಗದಿಂದ ಇರುವ ವಿಭೂತಿ ರೇಖೆಗಳನ್ನು, ಮೂರು ನಾಮಗಳನ್ನೂ ಅದ್ವೈತರು, ವಿಶಿಷ್ಠಾದ್ವೈತರು ಬಳಸಿಕೊಳ್ಳುವುದು ನಡೆದಿದೆ. ಪೂರ್ವದಿಂದ ಇರುವವು ಎರಡು ಚಿಹ್ನಗಳೇ, ಆ ಎರಡು ಚಿಹ್ನೆಗಳನ್ನು ಮೊದಲೇ ಇಬ್ಬರು ಸಿದ್ಧಾಂತ ಕರ್ತರು ಬಳಸಿ ಕೊಂಡಿದ್ದಾರೆ. ತಮಗಂತೂ ಏನೂ ಉಳಿಯಲಿಲ್ಲ. ಆಗ ದ್ವೈತ ಸಿದ್ಧಾಂತ ಕರ್ತನಾದ ಮಧ್ವಾಚಾರ್ಯರು ಸ್ವಲ್ಪ ಆಲೋಚಿಸಿ, ತನ್ನ ಯೋಚನೆಗೆ ಬಂದಹಾಗೆ ವಿಶಿಷ್ಟಾದ್ವೈತರು ಬಳಸಿಕೊಂಡ ಮೂರು ನಾಮಗಳನ್ನೇ ಸ್ವಲ್ಪ ಬದಲಾವಣೆ ಮಾಡಿ ಬಳಸಿಕೊಳ್ಳಬೇಕೆಂದುಕೊಂಡಿದ್ದಾನೆ. ಅಂದುಕೊಂಡಹಾಗೆ ಮೂರು ಉದ್ದ ನಾಮಗಳನ್ನು ಸ್ವಲ್ಪದವರೆಗು ಬಣ್ಣ, ರೂಪಗಳಲ್ಲಿ ಬದಲಾವಣೆಗಳನ್ನು ಮಾಡಿ ಬಣ್ಣ, ರೂಪ ಬದಲಾದ ನಾಮವನ್ನೇ ತಮ್ಮ ದ್ವೈತ ಚಿಹ್ನೆಯಾಗಿ ಬಳಸಿಕೊಂಡಿದ್ದಾರೆ. ಮೂರು ಸಿದ್ಧಾಂತಗಳಿಗೆ ಚಿಹ್ನೆಗಳಾಗಿರುವ ವಿಭೂತಿ ರೇಖೆಗಳನ್ನೂ, ಮೂರು ನಾಮಗಳನ್ನೂ ನಂತರ ಪುಟದಲ್ಲಿ ಚಿತ್ರಗಳನ್ನು ನೋಡಬಹುದು.

ಹಿಂದಿನ ಪುಟದಲ್ಲಿರುವ ಚಿತ್ರಗಳಲ್ಲಿ ಅದ್ವೈತರ ವಿಭೂತಿರೇಖೆಗಳು, ವಿಶಿಷ್ಟಾದ್ವೈತರ ಉದ್ದ ನಾಮಗಳನ್ನು ನೋಡಿದ್ದೀರಲ್ಲವೆ! ಹಾಗೇ ಉದ್ದ ನಾಮದಲ್ಲಿ ಸ್ವಲ್ಪ ಬದಲಾವಣೆ ಮಾಡಿರುವ ನಾಮ ಮಧ್ವರಿಗೆ (ದ್ವೈತರಿಗೆ) ಇದೆ. ಉದ್ದ (ನಿಲುವ) ನಾಮಗಳು ಎರಡೂ ಒಂದೇ ಸೂತ್ರವನ್ನು ಸೂಚಿಸುತ್ತಿವೆ. ವಿಶಿಷ್ಟಾದ್ವೈತರಿಗೆ ದ್ವೈತರಿಗೆ ನಾಮವೊಂದರ ಆಕಾರದಲ್ಲಿ ಸ್ವಲ್ಪ ವ್ಯತ್ಯಾಸವನ್ನು ಮೇಲಿನ ಚಿತ್ರದಲ್ಲಿ ಗಮನಿಸಬಹುದು. ಆತ್ಮ ಜೀವಾತ್ಮಗಳಾಗಿ ಗುರುತಿಸಿದ ಎರಡು ಕಡೆಯ




ಅದ್ವೈತರ ಅಡ್ಡ ವಿಭೂತಿರೇಖೆಗಳು




ವಿಶಿಷ್ಟಾದ್ವೈತರ ನಿಲುವು ನಾಮ




ದ್ವೈತರ ನಿಲುವು ನಾಮ

ನಾಮಗಳು ಕೆಳಗೆ 90 ಡಿಗ್ರೀ ಕೋನವನ್ನು ಹೊಂದಿರುವ ನಾಮಗಳು ವಿಶಿಷ್ಟಾದ್ವೈತರವು. ಎರಡು ನಾಮಗಳು ಬಿಳಿ ಬಣ್ಣ ಹೊಂದಿದ್ದು ಮಧ್ಯದಲ್ಲಿರುವ ನಾಮ ಮಾತ್ರ ಕೆಂಪುಬಣ್ಣದೊಂದಿಗೆ ಗುರುತಿಸಲಾಗಿರುತ್ತದೆ. ಅದೇ ವಿಧವಾಗಿ ಬಣ್ಣಗಳಲ್ಲಿ ವ್ಯತ್ಯಾಸವಿಲ್ಲದಿದ್ದರೂ ಎರಡು ಬಿಳಿನಾಮಗಳು ಕೆಳಗೆ ಪಕ್ಕದಲ್ಲಿ ಕೋನಗಳು ಮೂಲೆಯಲ್ಲಿಲ್ಲದೆ ದುಂಡಾದ ಆಕಾರವನ್ನು ಹೊಂದಿರುತ್ತದೆ. ಹಾಗೆ ಕೆಳಗಡೆ ದುಂಡಾಗಿರುವ ನಾಮವನ್ನು ದ್ವೈತರು ತಮ್ಮ ಗುರುತಾಗಿ ಇಟ್ಟುಕೊಳ್ಳುತ್ತಿರುವರು. ಅದ್ವೈತರೇನೋ ಅಡ್ಡವಾಗಿ ಮೂರು ವಿಭೂತಿರೇಖೆಗಳನ್ನು ಇಟ್ಟುಕೊಳ್ಳುವರು. ವಿಶಿಷ್ಟಾದ್ವೈತರಿಗೂ ದ್ವೈತರಿಗೂ ಸ್ವಲ್ಪ ವ್ಯತ್ಯಾಸದೊಂದಿಗೆ ನಾಮ ಒಂದೇ ಎಂದು, ಅದ್ವೈತರಿಗೆ ಪೈಪೋಟಿ ಇಲ್ಲದೇ ವಿಭೂತಿರೇಖೆಗಳು ಮಾತ್ರ ಇವೆಯೆಂದು ಅರ್ಥವಾಗುತ್ತಿದೆ. ಆದರೇ ಇಲ್ಲಿ ಸ್ವಲ್ಪ ಗಮನಿಸಬೇಕಾದ ವಿಷಯ ಒಂದಿದೆ. ಅದ್ವೈತರ ಮೂರು ವಿಭೂತಿರೇಖೆಗಳನ್ನು ಅಡ್ಡವಾಗಿ ಇಡುವುದರಿಂದ ಕೆಳಗಿನದು ಒಂದು ರೇಖೆ, ಮೇಲಿನದು ಒಂದು ರೇಖೆ, ಮಧ್ಯದಲ್ಲಿನದು ಒಂದು ರೇಖೆಯಾಗಿ ಬಿಡಿಬಿಡಿಯಾಗಿ ಹೇಳಲಾಗುತ್ತಿವೆ. ಮೂರು ವಿಭೂತಿ ರೇಖೆಗಳು ಮೂರು ಆತ್ಮಗಳಿಗೆ ಗುರುತಾಗಿ ಇರುವುದರಿಂದ ಎಲ್ಲದಕ್ಕಿಂತ ಕೆಳಗಿನ ರೇಖೆಯನ್ನು ಜೀವಾತ್ಮನಾಗಿಯೂ, ಮಧ್ಯರೇಖೆಯನ್ನು ಆತ್ಮನಾಗಿಯೂ, ಮೇಲಿನ ರೇಖೆಯನ್ನು ಪರಮಾತ್ಮನಾಗಿಯೂ ಹೇಳಬೇಕಾಗಿ ಬಂದಿದೆ. ಪರಮಾತ್ಮ ಎರಡು ಆತ್ಮಗಳಿಗಿಂತ ದೊಡ್ಡದಾಗಿರುವುದರಿಂದ ವಿಭೂತಿರೇಖೆಗಳಲ್ಲಿ ಸಹ ಕೆಳಗಿನ ರೇಖೆಗಳಗಿಂತ ಮೇಲಿರುವ ರೇಖೆಯನ್ನೇ ಪರಮಾತ್ಮನಿಗೆ ಗುರುತಾಗಿ ಹೇಳಬೇಕಾಗಿಬಂದಿದೆ. ಇನ್ನು ಮಧ್ಯೆ ರೇಖೆಯನ್ನು ಆತ್ಮವಾಗಿಯೂ, ಕೆಳಗಿನ ರೇಖೆಯನ್ನು ಜೀವಾತ್ಮವಾಗಿಯೂ ಹೋಲಿಸುವುದು ಕ್ರಮಬದ್ಧವಾದದ್ದು. ಕೆಳಗಿನ ಎರಡು ರೇಖೆಗಳು ಜೀವಾತ್ಮ, ಆತ್ಮ ಆದಾಗ, ಮೇಲಿನ ರೇಖೆ ಪರಮಾತ್ಮ ಅನ್ನುವುದಕ್ಕೆ ನಮ್ಮ ಹಸ್ತದಲ್ಲಿಯೂ ಸಹ ಅದೇ ವಿಧವಾಗಿ ಪರಮಾತ್ಮ ರೇಖೆ ಮೇಲೆ ಕೆಳಗೆ ಜೋಡು ಆತ್ಮಗಳು ಇರುವಹಾಗೆ ಕಾಣಿಸುತ್ತಿವೆ. ನಮ್ಮ ಹಸ್ತದಲ್ಲಿ ಸಹ ಕೆಳಗೆ ಎರಡು ರೇಖೆಗಳು ಜೀವಾತ್ಮ ಆತ್ಮಗಳಾಗಿ, ಮೇಲಿರುವ ರೇಖೆ ಪರಮಾತ್ಮವಾಗಿ ಲೆಕ್ಕಿಸಿದಹಾಗೆ ತಿಳಿದುಕೊಂಡಿದ್ದೇವಲ್ಲವೆ! ಅದೇ ವಿಧವಾಗಿ

ಮೂರು ವಿಭೂತಿ ರೇಖೆಗಳಿವೆಯೆಂದು ಅರ್ಥವಾಗುತ್ತಿದೆ. ಮೂರು ವಿಭೂತಿ ರೇಖೆಗಳಲ್ಲಿ ಪರಮಾತ್ಮನಿಗೆ ಚಿಹ್ನೆಯಾಗಿರುವ ಮೇಲಿನ ರೇಖೆಯನ್ನು ಬಿಟ್ಟು ಜೀವಾತ್ಮನಿಗೆ ಚಿಹ್ನೆಯಾಗಿರುವ ಕೆಳಗಿನ ರೇಖೆಯನ್ನು ಬಿಟ್ಟು ಆತ್ಮಕ್ಕೆ ಚಿಹ್ನೆ ಯಾಗಿರುವ ಮಧ್ಯೆರೇಖೆಗೆ ಮಧ್ಯದಲ್ಲಿ ಕೆಂಪು ಗುರುತನ್ನು ಇಡುವುದು ನಡೆದಿದೆ. ಹಾಗೆ ಮಧ್ಯೆರೇಖೆಗೆ ಕೆಂಪು ಗುರುತನ್ನು ಇಡುವುದು ಪೂರ್ವದ ಕೃತ್‌ಯುಗದಲ್ಲೇ ನಡೆದಿದೆ. ಆ ದಿನ ಆತ್ಮ ಜ್ಞಾನವನ್ನು ಸಂಪೂರ್ಣವಾಗಿ ತಿಳಿದ ಯೋಗಿಗಳು, ಆ ವಿಧವಾಗಿ ಆಧ್ಯಾತ್ಮಿಕ ಅರ್ಥದಿಂದ ಮಧ್ಯ ರೇಖೆಗೆ ಕೆಂಪು ಗುರುತನ್ನು ಇಡುವುದು ನಡೆದಿದೆ.

ಇಲ್ಲಿ ಕೆಲವರಿಗೆ ಒಂದು ಸಂಶಯ ಬರಬಹುದು. ಆಧ್ಯಾತ್ಮಿಕದಲ್ಲಿ ಯಾವ ಭಾವದಿಂದ ಮಧ್ಯರೇಖೆಗೆ ಕೆಂಪು ಗುರುತನ್ನು ಇಡುತ್ತಿದ್ದಾರೆಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ಪ್ರತಿ ಮನುಷ್ಯ ಮೇಲಕ್ಕೆ ಯಾವ ಶರೀರವನ್ನು ಧರಿಸಿದ್ದರೂ, ಒಳಗೆ ಮಾತ್ರ ಆತನು ಜೀವಾತ್ಮನಾಗಿಯೇ ಇದ್ದಾನೆ. ಶರೀರವೇ ತಾನೆಂದುಕೊಂಡ ಮನುಷ್ಯ, ತಾನು ಕೇವಲ ಶರೀರದಲ್ಲಿ ಒಂದು ಭಾಗವಾಗಿರುವ ಜೀವಾತ್ಮ ಎಂದು, ಶರೀರ ತಾನಲ್ಲವೆಂದು ತಿಳಿದಿಲ್ಲ. ಶರೀರದಲ್ಲಿ ಒಂದು ಕಡೆ ಸ್ವಲ್ಪ ಭಾಗವಾಗಿರುವ ಜೀವಾತ್ಮನಿಗೆ ಆತ್ಮಜ್ಞಾನ ಇಲ್ಲದಿರುವುದರಿಂದ ಶರೀರ ಬೇರೆ, ತಾನು ಬೇರೆಯೆಂದು, ಶರೀರದಲ್ಲಿ ತನ್ನನ್ನು ನಡೆಸುವ ಆತ್ಮ ಶರೀರವೆಲ್ಲದಕ್ಕು ಅಧಿಪತಿಯಾಗಿ ಇದ್ದೂ ಶರೀರವೆಲ್ಲಾ ವ್ಯಾಪಿಸಿದೆಯೆಂದು ತಿಳಿದಿಲ್ಲ. ಆತ್ಮ ಎನ್ನುವುದು ಶರೀರವೆಲ್ಲಾ ಇದ್ದು ಜೀವಾತ್ಮನಿಗೆ ಸಹವಾಸಿಯಾಗಿ ಅಥವಾ ಜೋಡಿ ಆತ್ಮವಾಗಿ ಇದೆಯೆಂದು ಸಹ ಜೀವಾತ್ಮನಿಗೆ ತಿಳಿಯದು. ಶರೀರದಲ್ಲಿ ಒಂದು ಕಡೆ ರವೆಯಷ್ಟು ಇರುವವನು ಜೀವಾತ್ಮನಾದಾಗ, ಶರೀರವೆಲ್ಲಾ ವ್ಯಾಪಿಸಿ ಇರುವವನು ಆತ್ಮನಾದಾಗ, ಶರೀರದ ಒಳಗೂ, ಶರೀರದ ಹೊರಗೂ ಎಲ್ಲಾ ವ್ಯಾಪಿಸಿರುವವನು ಪರಮಾತ್ಮ. ಜೀವಾತ್ಮ ದೇವರಾದ ಪರಮಾತ್ಮನನ್ನು ತಿಳಿಯಬೇಕೆಂದರೆ ಮೊದಲನೆಯದಾಗಿ ತನ್ನ ಶರೀರದಲ್ಲಿ ಎಲ್ಲಾ ತುಂಬಿಕೊಂಡಿದ್ದು ತನಗೆ ಜೊತೆಯಾಗಿ ಪಕ್ಕದವನಂತೆ ಇರುವ ಆತ್ಮನನ್ನು

ಕುರಿತು ತಿಳಿಯಬೇಕು. ಮೂರು ಆತ್ಮಗಳಲ್ಲಿ ದೊಡ್ಡದು ಪರಮಾತ್ಮನೇ ಆದರೂ ಅದನ್ನು ತಿಳಿಯುವುದಕ್ಕೆ ಮೊದಲು ಆತ್ಮನನ್ನು ತಿಳಿಯಬೇಕು. ಆತ್ಮನನ್ನು ತಿಳಿಯಬೇಕೆಂದರೆ ಆತ್ಮಜ್ಞಾನ ಅವಶ್ಯ. ಪ್ರತಿ ಮನುಷ್ಯನಿಗೂ ಆತ್ಮಜ್ಞಾನ ಅವಶ್ಯವೆಂದು, ಆತ್ಮನನ್ನು ತಿಳಿಯುವುದು ಮುಖ್ಯವೆಂದು ಅರ್ಥವಾಗುವುದಕ್ಕೆ ವಿಭೂತಿರೇಖೆಗಳಲ್ಲಿ ಆತ್ಮಕ್ಕೆ ಚಿಹ್ನೆಯಾಗಿರುವ ಎರಡನೆ ರೇಖೆಗೆ ಕೆಂಪು ಗುರುತನ್ನಿಟ್ಟಿದ್ದಾರೆ. ಮಧ್ಯೆರೇಖೆಗೆ ಕೆಂಪು ಬೊಟ್ಟನ್ನು ಇಡುವುದರಿಂದ ಅದಕ್ಕೆ ಏನೋ ವಿಶೇಷತೆ ಇರುವಹಾಗೆ ಅರ್ಥವಾಗಬಲ್ಲದು. ಆ ವಿಶೇಷತೆ ಏನು ಎಂದು ಕೇಳಿ ತಿಳಿದುಕೊಂಡರೆ, ಎರಡನೆ ಆತ್ಮನನ್ನು ಮೊದಲು ತಿಳಿದುಕೊಳ್ಳಿರೆಂದು ತಿಳಿಯಬಲ್ಲದು. ಈ ವಿಧವಾಗಿ ದೃಶ್ಯ ರೂಪದಲ್ಲಿ ಆತ್ಮ ಜ್ಞಾನವನ್ನು ತಿಳಿದುಕೊಂಡ ನಂತರ ಪರಮಾತ್ಮ ತಿಳಿಯುವನೆನ್ನುವ ಸಂದೇಶವನ್ನು ನಮ್ಮ ಹಿರಿಯರಾದ ಪೂರ್ವದ ಜ್ಞಾನಿಗಳು ಮೂರು ವಿಭೂತಿರೇಖೆಗಳಲ್ಲಿ ಮಧ್ಯದಕ್ಕೆ ಕೆಂಪು ಗುರುತನ್ನಿಟ್ಟು ತೋರಿಸಿದ್ದಾರೆ.

ವಿಶಿಷ್ಠಾದ್ವೈತರು ದ್ವೈತರು ಇಬ್ಬರೂ ಒಂದೇ ನಾಮವನ್ನು ತಮ್ಮ ಸಿದ್ಧಾಂತಗಳಿಗೆ ಗುರುತಾಗಿ ಇಟ್ಟುಕೊಂಡಿದ್ದಾರೆ. ಎರಡು ವಿಧಗಳ ನಾಮಗಳಿರು ವವರು ತಿರುಪತಿ ತಿರುಮಲದಲ್ಲಿ ಹೆಚ್ಚಾಗಿ ಕಾಣಿಸುತ್ತಿರುವರು. ಮಂತ್ರಾಲಯ ರಾಘವೇಂದ್ರಸ್ವಾಮಿ ದ್ವೈತ ಸಿದ್ಧಾಂತಕ್ಕೆ ಸೇರಿದವನಾದ್ದರಿಂದ ಅಲ್ಲಿಯವರು ಸಹ ದುಂಡಾಗಿರುವ ನಾಮಗಳನ್ನು ಧರಿಸುತ್ತಿರುವರು. ವಾಸ್ತವಕ್ಕೆ ನಾಮಗಳು ಸಿದ್ಧಾಂತಕರ್ತರಿಗೆ ಸಂಬಂಧಿಸಿರುವವಲ್ಲ. ನಾಮಗಳು ಕೃತ ಯುಗದಲ್ಲೇ ತ್ರೈತ ಸಿದ್ಧಾಂತವನ್ನು ತಿಳಿಸುವುದಕ್ಕೋಸ್ಕರ ತಯಾರು ಮಾಡಲಾಗಿವೆ. ಕಲಿಯುಗದಲ್ಲಿ ಸಿದ್ಧಾಂತಕರ್ತರು ದೈವಜ್ಞಾನಕ್ಕೆ ಸಂಬಂಧಿಸಿದ ನಾಮಗಳನ್ನು ಕಬ್ಜಾ ಮಾಡಿ ಬಳಸಿಕೊಂಡಿದ್ದಾರೆ. ವಾಸ್ತವಕ್ಕೆ ಮೊದಲ ಯುಗಗಳಲ್ಲಿ ಅದ್ವೈತ, ವಿಶಿಷ್ಠಾದ್ವೈತ, ದ್ವೈತ ಸಿದ್ಧಾಂತಗಳು ಇಲ್ಲದ ಕಾಲದಲ್ಲಿ ಸಹ ವಿಭೂತಿ ರೇಖೆಗಳು, ನಿಲುವು ನಾಮಗಳು ಇವೆ. ಪೂರ್ವ ದೈವಜ್ಞಾನದ ಪ್ರಕಾರ ತ್ರೈತ ಸಿದ್ಧಾಂತವನ್ನು ಬಹಿರ್ಗತವಾಗಿ ತಿಳಿಸುವುದಕ್ಕೆ ಮೂರು ನಾಮಗಳನ್ನು ಜ್ಞಾನಿಗಳಿಡುವುದು

ನಡೆದಿದೆ. ನಿಲುವು ನಾಮಗಳಲ್ಲಿ ಜೊತೆಯಾಗಿ ಕಲೆತಿರುವ ಜೀವಾತ್ಮ ಆತ್ಮಗಳನ್ನು ಎರಡರನ್ನು ಒಂದೇ ಬಿಳಿಯ ಬಣ್ಣವಿರುವ ಎರಡು ನಾಮಗಳಾಗಿ ಇಡುವುದು ನಡೆದಿದೆ. ನಮ್ಮ ಹಸ್ತದಲ್ಲಿ ಮೂರು ರೇಖೆಗಳಲ್ಲಿ ಕೆಳಗಿನ ರೇಖೆಗಳು ಎರಡೂ ಒಂದರ ಪಕ್ಕ ಒಂದರೊಂದಿಗೆ ಒಂದು ಸೇರಿಕೊಂಡಿವೆ. ಅದೇ ವಿಧವಾಗಿ ಶರೀರದಲ್ಲಿ ಜೀವಾತ್ಮ, ಆತ್ಮ ಎರಡೂ ಜೋಡಿ ಆತ್ಮಗಳಾಗಿ ಇವೆ. ಅದೇ ವಿಧಾನವನ್ನು ತಿಳಿಸುವುದಕ್ಕೆ ಮೂರು ನಾಮಗಳಲ್ಲಿ ಎರಡು ನಾಮಗಳನ್ನು ಒಂದು ಕಡೆ ಸೇರಿಸಿ ಇಟ್ಟು ತೋರಿಸುವುದು ನಡೆದಿದೆ. ಕೆಳಗಿನ ಭಾಗದಲ್ಲಿ ಎರಡು ನಾಮಗಳನ್ನು ಸೇರಿಸಿಡುವುದೇ ಅಲ್ಲದೆ ಆ ಎರಡು ನಾಮಗಳನ್ನು ಬಿಳಿಯ ಬಣ್ಣದೊಂದಿಗೆ ತೋರಿಸುವುದು ನಡೆದಿದೆ. ಮಧ್ಯದಲ್ಲಿರುವ ನಾಮವನ್ನು ಕೆಂಪು ಬಣ್ಣದಿಂದ ತೋರಿಸುವುದೆ ಅಲ್ಲದೆ ಬಿಳಿಯಾಗಿರುವ ಎರಡು ನಾಮಗಳೊಂದಿಗೆ ಸಂಬಂಧವಿಲ್ಲದೇ ಸ್ವಲ್ಪ ಮೇಲಿನ ಭಾಗಕ್ಕೆ ಇಟ್ಟು ತೋರಿಸುವುದು ನಡೆದಿದೆ. ಕೆಂಪು ಬಣ್ಣದೊಂದಿಗೆ ತೋರಿಸುವುದೇ ಅಲ್ಲದೇ ಆತ್ಮ ಜೀವಾತ್ಮ ಅನ್ನುವ ಎರಡು ನಾಮಗಳಿಗಿಂತ ಮಧ್ಯದಲ್ಲಿ ಪರಮಾತ್ಮಗೆ ಗುರುತಾಗಿರುವ ನಾಮವನ್ನು ಉದ್ದವಾಗಿ ಇರುವಂತೆ ಇಡುವುದು ನಡೆದಿದೆ. ಹಾಗೆ ಇಡುವುದರಿಂದ ಜೀವಾತ್ಮ ಆತ್ಮಗಳೆಂಬ ಜೋಡಿ ಆತ್ಮಗಳಿಗಿಂತ ಪರಮಾತ್ಮ ದೊಡ್ಡವನೆಂದು ಎಲ್ಲರಿಗೂ ತಿಳಿದುಹೋಗುವುದೆಂದು ಹಾಗೆ ಇಟ್ಟಿದ್ದಾರೆ.

ಇಲ್ಲಿ ಕೆಲವರಿಗೆ ಮತ್ತೊಂದು ಸಂಶಯ ಬರಬಹುದು, ಅದೇನೆಂದರೆ! "ವಿಭೂತಿ ಅಡ್ಡ ರೇಖೆಗಳಲ್ಲಿ ಮಧ್ಯದಲ್ಲಿರುವ ರೇಖೆಗೆ ಕೆಂಪು ಬೊಟ್ಟನ್ನು ಇಟ್ಟು ಅದನ್ನೇನೊ ಆತ್ಮ ಎಂದಿದ್ದೀರ. ಈಗ ನಿಲುವು(ಉದ್ದ) ನಾಮಗಳಲ್ಲಿ ಮಧ್ಯದಲ್ಲಿ ಕೆಂಪು ನಾಮವನ್ನಿಟ್ಟು ಅದನ್ನೇನೊ ಪರಮಾತ್ಮ ಎಂದು ಹೇಳುತ್ತಿದ್ದೀರಾ. ವಿಭೂತಿ ರೇಖೆಗಳಲ್ಲಿ ಮಧ್ಯ ರೇಖೆಯನ್ನು ಆತ್ಮನೆಂದು, ನಿಲುವು ನಾಮಗಳಲ್ಲಿ ಮಧ್ಯನಾಮವನ್ನು ಪರಮಾತ್ಮಯೆಂದು ಹೇಳುತ್ತಿದ್ದೀರಾ. ವಿಭೂತಿರೇಖೆಗಳಲ್ಲಿ ಮೇಲಿನದು ಪರಮಾತ್ಮಯೆಂದು ಹೇಳಿ, ನಾಮಗಳಲ್ಲಿ ಮಧ್ಯದಲ್ಲಿರುವುದನ್ನು ಪರಮಾತ್ಮ ಎಂದು ಹೇಳುವುದರಲ್ಲಿ ಆಂತರ್ಯವೇನು?

ನೀವು ತಿಳಿದೇ ಹೇಳುತ್ತಿದ್ದೀರಾ ಅಥವಾ ತಿಳಿಯದೇ ಹೇಳುತ್ತಿದ್ದೀರಾ" ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ! ವಿಭೂತಿರೇಖೆಗಳು ಬಿಡಿಬಿಡಿಯಾಗಿ ಇವೆ, ಅಷ್ಟೇ ಅಲ್ಲದೆ ಒಂದರಮೇಲೊಂದಿವೆ. ಸುಮಾರು ನಮ್ಮ ಹಸ್ತದಲ್ಲಿ ಇರುವಹಾಗೆ ಇವೆ. ಅವುಗಳಲ್ಲಿ ಎಲ್ಲದಕ್ಕಿಂತ ಮೇಲಿರುವ ರೇಖೆಯನ್ನು ಪರಮಾತ್ಮವಾಗಿ ಹೇಳಿದ್ದೇವೆ. ಪರಮಾತ್ಮ ಎರಡು ಆತ್ಮಗಳಿಗಿಂತ ದೊಡ್ಡದು, ಆದ್ದರಿಂದ ಮೇಲಿರುವ ರೇಖೆಯನ್ನೇ ಪರಮಾತ್ಮವಾಗಿ ಹೇಳಬೇಕಾಗಿದೆ. ಏಕೆಂದರೆ! ಹಸ್ತದಲ್ಲಿಯೂ ಸಹ ಕೆಳಗೆ ಎರಡು ರೇಖೆಗಳು ಕೂಡಿಕೊಂಡಿವೆ. ಆದ್ದರಿಂದ ಅವುಗಳನ್ನು ಜೋಡಿ ಆತ್ಮಗಳೆಂದು ಹೇಳುತ್ತಾ ಮೇಲೆ ಪ್ರತ್ಯೇಕವಾಗಿರುವ ರೇಖೆಯನ್ನು ಪರಮಾತ್ಮನಾಗಿ ಹೇಳಿದ್ದೇವೆ. ನಿಲುವು ನಾಮವೊಂದರ ವಿಷಯಕ್ಕೆ ಬಂದರೆ ಎರಡು ಪಕ್ಕದ ನಾಮಗಳು ಕೂಡಿರುವುದರಿಂದ, ಮಧ್ಯದಲ್ಲಿರುವ ನಾಮ ಎರಡು ನಾಮಗಳಿಗಿಂತ ಪ್ರತ್ಯೇಕವಾಗಿ ಉದ್ದವಾಗಿ ಇರುವುದರಿಂದ, ಎರಡು ನಾಮಗಳನ್ನು ಆತ್ಮ ಜೀವಾತ್ಮಗಳಾಗಿ, ಮಧ್ಯನಾಮವನ್ನು ಪರಮಾತ್ಮನಾಗಿ ಹೇಳಿದ್ದೇವೆ. ಇಲ್ಲಿಯೂ ಸಹ ಕೆಲವರಿಗೆ ಮತ್ತೊಂದು ಪ್ರಶ್ನೆ ಉಳಿದಿರಬಹುದು. ಅದೇನೆಂದರೆ! "ನಿಲುವು ನಾಮಗಳಲ್ಲಿ ಮಧ್ಯದಲ್ಲಿರುವ ನಾಮ ಪರಮಾತ್ಮನೆಂದು ಅದಕ್ಕೆ ಪ್ರತ್ಯೇಕವಾಗಿ ಕೆಂಪು ಬಣ್ಣವನ್ನು ಇಟ್ಟಾಗ, ಅದೇ ಅರ್ಥದೊಂದಿಗೆ ವಿಭೂತಿ ರೇಖೆಗಳಲ್ಲಿ ಸಹ ಪರಮಾತ್ಮ ಗುರುತಾಗಿರುವ ಮೇಲಿನ ರೇಖೆಗೆ ಕೆಂಪು ಗುರುತನ್ನು ಇಡದೆ ಮಧ್ಯದಲ್ಲಿ ಇಟ್ಟು ತೋರಿಸಿದ್ದಾರೆ. ಅಲ್ಲೇನೊ ಆತ್ಮಕ್ಕೆ ಕೆಂಪು ಗುರುತೆಂದಿದ್ದೀರಾ, ಇಲ್ಲೇನೊ ಪರಮಾತ್ಮನಿಗೆ ಕೆಂಪು ನಾಮವೆನ್ನುತ್ತಿದ್ದೀರಾ. ವಿಭೂತಿ ರೇಖೆಗಳಲ್ಲಿ ಆತ್ಮೇ ಮುಖ್ಯವೆಂದು ಮಧ್ಯದಲ್ಲಿರುವುದಕ್ಕೆ ಕೆಂಪು ಗುರುತನ್ನು ಇಟ್ಟಿದ್ದಾರೆ. ನಿಲುವು ನಾಮಗಳಲ್ಲಿ ಪರಮಾತ್ಮನೇ ಜೀವಾತ್ಮ ಆತ್ಮಗಳಿಗಿಂತ ಮುಖ್ಯವಾದದ್ದೆಂದು ಮಧ್ಯದಲ್ಲಿರುವುದಕ್ಕೆ ಕೆಂಪು ಬಣ್ಣವನ್ನು ಇಟ್ಟಿದ್ದಾರೆ. ಯಾವುದು ಸರಿಯಾದದ್ದು, ಯಾವುದು ಸತ್ಯ?" ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ ನೋಡಿ.

ವಿಭೂತಿ ರೇಖೆಗಳಲ್ಲಿ ಮಧ್ಯರೇಖೆಗೆ ಚಿಕ್ಕ ಗುರುತನ್ನು ಮಾತ್ರ ಕೆಂಪಗೆ ಇಟ್ಟಿದ್ದೇವೆ. ಅಲ್ಲಿ ಆ ರೇಖೆಯನ್ನು ಪೂರ್ತಿ ಕೆಂಪಗೆ ಬದಲಾಯಿಸಿಲ್ಲ. ನಿಲುವು ನಾಮಗಳಲ್ಲಿ ಮಧ್ಯರೇಖೆಯನ್ನು ಪೂರ್ತಿಯಾಗಿ ಕೆಂಪು ಬಣ್ಣದಿಂದ ತೋರಿಸಿದ್ದೇವೆ. ವಿಭೂತಿರೇಖೆಗಳು ನಿರಾಕಾರ ಪರಮಾತ್ಮನಿಗೆ ಗುರುತಾಗಿರುವ ಈಶ್ವರ ಲಿಂಗದ ಮೇಲೆ ತೋರಿಸುವುದು ನಡೆದಿದೆ. ನಂತರ ನಿಲುವು ನಾಮಗಳನ್ನು ದೇವರ ಸಾಕಾರ ರೂಪವಾದ ಪ್ರತಿಮೆ ಮೇಲೆ ತೋರಿಸುವುದು ನಡೆದಿದೆ. ಈಶ್ವರ ಲಿಂಗ ನಿರಾಕಾರ ಪರಮಾತ್ಮನಿಗೆ ಗುರುತಾಗಿರುವುದರಿಂದ ಮೂರನೆಯವನು ಆದ ಪರಮಾತ್ಮ ಯಾವ ಮನುಷ್ಯನಿಗಾದರೂ, ಜ್ಞಾನಿಗಾದರೂ, ಯೋಗಿಗಾದರೂ, ಮಹರ್ಷಿಗಳಿಗಾದರೂ ಜೀವಿಸಿರುವ ಯಾರಿಗು ತಿಳಿಯುವುದಿಲ್ಲ. ಪರಮಾತ್ಮನನ್ನು ಜೀವನವೆಲ್ಲಾ ಹುಡುಕಿದರೂ ಕಾಣಿಸುವುದಿಲ್ಲ. ಆತನನ್ನು ಎಂದಿಗೂ ಹುಡುಕಬೇಕಾಗಿರುವುದೇ ಆದ್ದರಿಂದ ಆತನನ್ನು ದೇವರು ಎಂದಿದ್ದಾರೆ. ನಿರಾಕಾರ ಎಂದಿಗೂ ತಿಳಿಯದು. ಆದ್ದರಿಂದ ಮನುಷ್ಯ ದೇವರನ್ನು ನೇರವಾಗಿ ತಿಳಿಯುವುದಕ್ಕೆ ಆಗುವುದಿಲ್ಲ. ಆದ್ದರಿಂದ ವಿಭೂತಿರೇಖೆಗಳಲ್ಲಿ ಮೇಲಿರುವ ಮೂರನೆ ರೇಖೆಯನ್ನು ಯಾವ ಮಾತ್ರವೂ ಗುರುತಿಸಲಿಲ್ಲ. ನಿರಾಕಾರ ವಾಗಿ, ಹೆಸರಿಲ್ಲದವನಾಗಿ, ಕೆಲಸ ಇಲ್ಲದವನಾಗಿ ದೇವರನ್ನು ಹೇಳುತ್ತಿರುವಾಗ ಪರಮಾತ್ಮ ಇದೇಯೆಂದು ರೇಖೆಯನ್ನು ತೋರಿಸಿದ್ದೇವಾಗಲಿ, ರೇಖೆಯನ್ನು ಯಾವ ಮಾತ್ರ ಕೆಂಪು ಬಣ್ಣದೊಂದಿಗೆ ಗುರುತಿಸಲಿಲ್ಲ. ನಿರಾಕಾರ ಪರಮಾತ್ಮನಿಗೆ ಗುರುತಾಗಿರುವ ಈಶ್ವರ ಲಿಂಗದ ಮೇಲೆ ಪರಮಾತ್ಮನಾಗಿ ಹೇಳುವ ಮೇಲಿನ ರೇಖೆಯನ್ನು ಪ್ರತ್ಯೇಕವಾಗಿ ಗುರುತಿಸಬಾರದು. ಆದ್ದರಿಂದ ಆ ಮೂರನೆ ರೇಖೆಗೆ ಕೆಂಪು ಗುರುತನ್ನಾಗಲಿ, ಮತ್ತು ಯಾವ ವಿಧದಲ್ಲಾಗಲಿ ಗುರುತಿಸಿ ತೋರಿಸಲಿಲ್ಲ. ಹಾಗೆ ತೋರಿಸದೇ ಇರುವುದು ಅರ್ಥದಿಂದ ಕೂಡಿಕೊಂಡ ಕೆಲಸ ಆಗುತ್ತದೆ. ಈಶ್ವರ ಲಿಂಗದ ಮೇಲೆ ಪರಮಾತ್ಮ ರೇಖೆಯಾಗಿ ಹೇಳುವುದಕ್ಕೆ ಕೆಂಪು ಗುರುತು ಇಡುವುದಾಗಲಿ, ಕೆಂಪು ಬಣ್ಣವನ್ನು ಹಚ್ಚುವುದಾಗಲಿ ಮಾಡಬಾರದು, ಹಾಗೆ ಮಾಡಿದರೆ ಅದು ತಪ್ಪಾಗುತ್ತದೆ. ದೇವರು ನಮಗೆ ಗೊತ್ತು, ನಾವು ನೋಡಿದ್ದೇವೆ ಎನ್ನುವ ಅರ್ಥ ಬರುತ್ತದೆ. ಭೂಮಿ ಮೇಲೆ

ಯಾರಾದರೂ ದೇವರನ್ನು ತಿಳಿದವರಾಗಲಿ, ದೇವರನ್ನು ನೋಡಿದವರಾಗಲಿ ಇಲ್ಲ. ಆದ್ದರಿಂದ ವಿಭೂತಿ ರೇಖೆಗಳಲ್ಲಿ ಪರಮಾತ್ಮ ಗುರುತಾಗಿರುವ ಮೇಲಿನ ರೇಖೆಗೆ ಎಂತಹ ಗುರುತನ್ನು ಇಡಬಾರದು. ಅಷ್ಟೇ ಅಲ್ಲದೇ ಪೂರ್ತಿ ಕೆಳಗಿರುವ ರೇಖೆಗೂ ಸಹ ಕೆಂಪು ಬೊಟ್ಟನ್ನು ಇಡಬಾರದು. ಜೀವಾತ್ಮನಿಗೆ ಆತ್ಮನೇ ಮುಖ್ಯವಾದದ್ದೆಂದು ತಿಳಿಸುವುದಕ್ಕೆ ಮಧ್ಯರೇಖೆಗೇ ಗುರುತನ್ನು ಇಡಬೇಕು. ಹಾಗೆ ಅಲ್ಲದೆ ಕೆಳಗಿನ ರೇಖೆಗೆ ಬೊಟ್ಟು ಇಟ್ಟರೇ ಆತ್ಮಗಿಂತಲೂ ನಾನೇ ದೊಡ್ಡವನೆಂದಹಾಗಿರುತ್ತದೆ.

ಈಗ ನನ್ನನ್ನು ಇಕ್ಕಟ್ಟಿನಲ್ಲಿಡುವ ಪ್ರಶ್ನೆ ಕೇಳುವುದಕ್ಕೆ ಎಲ್ಲರಿಗೂ ಅವಕಾಶ ಸಿಕ್ಕಿದೆ. ಆ ಪ್ರಶ್ನೆ ನಾನೇ ಹೇಳುತ್ತಿದ್ದೇನೆ ನೋಡಿರಿ. "ನೀವು ಪರಮಾತ್ಮ ಗುರುತಾಗಿರುವ ರೇಖೆಗೆ ಕೆಂಪು ಬೊಟ್ಟನ್ನು ಇಡುವುದಾಗಲಿ, ಒಟ್ಟು ಕೆಂಪು ಬಣ್ಣ ಹಚ್ಚುವುದಾಗಲಿ ಮಾಡಿದರೆ ತಪ್ಪಾಗುತ್ತದೆಂದು, ಅರ್ಥರಹಿತವಾಗುತ್ತದೆಂದು ಹೇಳಿದ್ದೀರಲ್ಲ! ಅಂತಹದರಲ್ಲಿ ನಿಲುವು ನಾಮಗಳಲ್ಲಿ ಪರಮಾತ್ಮ ಗುರುತಾಗಿರುವ ಮಧ್ಯ ರೇಖೆಯನ್ನು ಪೂರ್ತಿಯಾಗಿ ಕೆಂಪು ಬಣ್ಣವನ್ನು ಹಚ್ಚಿ ತೋರಿಸಬೇಕು ಎಂದಿದ್ದೀರಾ. ಎಲ್ಲರ ಆಚರಣೆಯಲ್ಲೂ ಸಹ ಮಧ್ಯದಲ್ಲಿರುವ ನಾಮವನ್ನೇ ಕೆಂಪು ಬಣ್ಣದಿಂದ ಇಟ್ಟಿದ್ದಾರೆ. ಪರಮಾತ್ಮನನ್ನು ಯಾರೂ ಗುರುತಿಸಿ ತೋರಿಸಬಾರದು ಹಾಗೆ ಗುರುತಿಸಿ ಕೆಂಪು ಬಣ್ಣದೊಂದಿಗೆ ತೋರಿಸುವುದು ಪೂರ್ತಿ ತಪ್ಪೆಂದು ಮೇಲೆ ಹೇಳಿ, ಈಗ ಕೆಳಗೆ ನಿಲುವು ನಾಮಗಳಲ್ಲಿ ಪರಮಾತ್ಮ ಗುರುತಾಗಿ ಮಧ್ಯದಲ್ಲಿರುವ ನಾಮಕ್ಕೆ ಪೂರ್ತಿಯಾಗಿ ಕೆಂಪು ಬಣ್ಣ ಹಚ್ಚಿ ತೋರಿಸೆನ್ನುವುದು ನಿಮ್ಮದು ತಪ್ಪಲ್ಲವೆ! ಅಲ್ಲೇನೋ ತೋರಿಸಬಾರದೆಂದಿದ್ದೀರಾ, ಇಲ್ಲೇನೋ ತೋರಿಸಬೇಕೆಂದಿದ್ದೀರಾ. ನಿಮ್ಮ ಮಾತು ಎರಡು ನಾಲಿಗೆಗಳ ದೋರಣಿ ತಾನೆ" ಎಂದು ಜೋರಾಗಿ ದಂಡಿಸಿ ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ! ಪರಮಾತ್ಮ ಗುರುತನ್ನು ಪ್ರತ್ಯೇಕಿಸಿ ಯಾವ ವಿಧವಾಗಿಯೂ ತೋರಿಸಬಾರದೆಂದು ನಿರಾಕಾರ ಶಿವಲಿಂಗದ ಹತ್ತಿರ ಮೂರು ವಿಭೂತಿರೇಖೆಗಳ ವಿಷಯದಲ್ಲಿ ಹೇಳಿದ್ದೇವೆಂದು ಯಾರೂ ಮರೆಯಬಾರದು. ಹಾಗೆ ಹೇಳುವುದು

ಶಾಸ್ತ್ರಬದ್ಧ ಹೇತುಬದ್ಧ. ಆದ್ದರಿಂದ ಅಲ್ಲಿ ಹೇಳಿರುವುದರಲ್ಲಿ ಯಾವ ಮಾತ್ರವು ತಪ್ಪಿಲ್ಲ. ಇದೇ ವಿಷಯ ಸಾಕಾರ ಪ್ರತಿಮೆ ಹತ್ತಿರ ಪೂರ್ತಿ ವ್ಯತಿರಿಕ್ತವಾಗಿ ಇರುತ್ತದೆ. ಸಾಕಾರ ಪ್ರತಿಮೆಗೆ ಇಡುವ ನಾಮಗಳಲ್ಲಿ ಮಧ್ಯರೇಖೆ ಪರಮಾತ್ಮ ಗುರುತಾಗಿ ಇರುವುದರಿಂದ ಅದರ ಪ್ರತ್ಯೇಕತೆ ತಿಳಿಯುವುದಕ್ಕೆ ಪೂರ್ತಿ ಕೆಂಪು ಬಣ್ಣದೊಂದಿಗೆ ತುಂಬಿ ತೋರಿಸಬೇಕೆಂದು ಹೇಳಿದ್ದೇವೆ. ಈ ಮಾತು ನಿರಾಕಾರ ಶಿವಲಿಂಗ ವಿಷಯದಲ್ಲಿ ಪೂರ್ತಿ ತಪ್ಪೆಂದು ಹಾಗೆ ತೋರಿಸಬಾರದೆಂದು ಹೇಳುವುದು ನಡೆದಿದೆ. ಆದರೇ ಒಂದು ಸಾಕಾರ ಪ್ರತಿಮೆ ಹತ್ತಿರ ಮಾತ್ರ ಪರಮಾತ್ಮ ನಾಮವನ್ನು ಕೆಂಪು ಬಣ್ಣದೊಂದಿಗೆ ತೋರಿಸಬೇಕೆಂದು ಏಕೆ ಹೇಳುತ್ತಿದ್ದೀವೆಂದರೆ!

ರೂಪ, ನಾಮ, ಕ್ರಿಯೆಗಳು ಇಲ್ಲದ ದೇವರು ಯಾವುದರಿಂದಲೂ ತಿಳಿಯದವನು ದೇವರು, ಎಂತಹವನಾದರೂ ಸಜೀವವಾಗಿರುವಾಗ ತಿಳಿಯದ ದೇವರು, ಎಂದಿಗಾದರೂ ಹುಡುಕಬೇಕಾದ ದೇವರು, ಯಾರಿಗೂ ಸಿಗದ ದೇವರು ಹೇಗಿರುತ್ತಾನೋ ಪ್ರಪಂಚದಲ್ಲಿ ಯಾವ ಮನುಷ್ಯನಿಗೂ ತಿಳಿಯದು. ಅಂತಹ ದೇವರನ್ನು ಯಾವ ವಿಧವಾಗಿಯೂ ಗುರುತಿಸುವುದಕ್ಕೆ ಆಗುವುದಿಲ್ಲ. ಕೇವಲ ಇದ್ದಾನೆನ್ನುವುದಕ್ಕೆ ಮಾತ್ರ ವಿಭೂತಿ ರೇಖೆಯನ್ನಿಟ್ಟು ಬಣ್ಣ ಹಾಕದೆ ಬಿಡಬೇಕೆಂದಿದ್ದೇನೆ. ಖುರಾನ್ ಗ್ರಂಥದಲ್ಲಿ 112 ನೇ ಸುರಾದಲ್ಲಿ ನಾಲ್ಕನೆ ಆಯತ್‌ನಲ್ಲಿ ಹೇಳಿದಹಾಗೆ ದೇವರೊಂದಿಗೆ ಯಾವುದನ್ನು ಯಾರನ್ನೂ ಹೋಲಿಸಬಾರದು, ಆತನೊಂದಿಗೆ ಯಾರೂ ಸಮಾನರಲ್ಲ ಎನ್ನುವ ವಾಕ್ಯ ಇರುವುದರಿಂದ ಮುಸ್ಲೀಮ್‌ರೆಲ್ಲರೂ ದೇವರ ಜ್ಞಾನದ ಪ್ರಕಾರ ಆ ಭಾವವನ್ನು ಗಟ್ಟಿಯಾಗಿ ಹೊಂದಿದ್ದು ಅವರು ಯಾವುದನ್ನಾಗಲೀ, ಯಾರನ್ನಾಗಲೀ ದೇವರಾಗಿ ಒಪ್ಪಿಕೊಳ್ಳುವುದಿಲ್ಲ. ಇಲ್ಲಿ ಅವರು ಹಾಗಿರುವುದು ಪೂರ್ತಿ ಜ್ಞಾನವೆಂದು ಹೇಳಿದ ನಾವೇ, ಮತ್ತೊಂದು ಕಡೆ ಮುಸ್ಲೀಮ್‌ರು ದೇವರ ಜ್ಞಾನವನ್ನು ಪೂರ್ತಿಯಾಗಿ ಅರ್ಥ ಮಾಡಿಕೊಳ್ಳದೆ ದೇವರು ಬಂದು ಎದುರುಗಡೆ ಕಾಣಿಸಿದರೂ ತಿಳಿಯ ಲಾರರು ಎಂದು ಹೇಳಿದ್ದೇವೆ. ನಾವು ಮೊದಲು ಹೇಳಿದ ವಾಕ್ಯಕ್ಕೆ ಎರಡನೆ

ಬಾರಿ ಹೇಳಿದ ವಾಕ್ಯಕ್ಕೆ ಪೂರ್ತಿ ವಿರುದ್ಧವಾಗಿ ಇದೆ. ಹಾಗಿರುವುದರಿಂದ ಅದರಲ್ಲಿ ಯಾವುದೋ ಒಂದು ವಾಕ್ಯ ಸತ್ಯವಾಗುತ್ತದೆ, ಮತ್ತೊಂದು ವಾಕ್ಯ ಅಸತ್ಯವಾಗುತ್ತದೆಂದು ಯಾರಾದರೂ ಹೇಳಬಲ್ಲರು. ಆದರೇ ನಾವು ಮಾತ್ರ ಎರಡು ಮಾತುಗಳು ಸತ್ಯವೇ ಎನ್ನುತ್ತಿದ್ದೇವೆ. ಹಾಗಿದ್ದರೇ ನಮ್ಮ ಮಾತನ್ನು ಯಾರೂ ಸಮರ್ಥಿಸುವುದಿಲ್ಲ. ಎರಡು ವಿಧಗಳ ಮಾತುಗಳು ಹೇಗೆ ಸತ್ಯವಾಗುತ್ತವೆಂದು ಪ್ರಶ್ನಿಸುವರು. ಇದಕ್ಕೆ ಉತ್ತರವನ್ನು ಹೇಳುವುದಕ್ಕಿಂತ ಮೊದಲು ಒಂದು ವಿಷಯವನ್ನು ಹೇಳುತ್ತೇನೆ ಕೇಳಿ. ಕಾಮಾಲೆ ರೋಗವಿರುವ ಒಬ್ಬ ವ್ಯಕ್ತಿ ಡಾಕ್ಟರು ಹತ್ತಿರಕ್ಕೆ ಹೋಗಿ, ತನ್ನ ಆರೋಗ್ಯವನ್ನು ಕುರಿತು ತೋರಿಸಿ ಕೊಂಡಿದ್ದಾನೆ. ಆಗ ಡಾಕ್ಟರವರು ಆ ವ್ಯಕ್ತಿಗೆ ಕಾಮಾಲೆ ರೋಗವಿದೆ ಯೆಂದು ಗ್ರಹಿಸಿ ಔಷಧವನ್ನು ಕೊಟ್ಟು ಕಳುಹಿಸುತ್ತಾ ನೀನು ಮಾಂಸವನ್ನು ತಿನ್ನಬೇಡ, ನಿನ್ನಹಾಗಿರುವವರು ಯಾರಾದರೂ ಮಾಂಸವನ್ನು ತಿಂದರೇ ಬದುಕುವುದಿಲ್ಲ, ಮರಣ ತಪ್ಪದು ಎಂದು ಹೇಳಿದ್ದಾನೆ. ಅಂದಿನಿಂದ ಆ ರೋಗಿ ಮಾಂಸವನ್ನು ಬಿಟ್ಟಿದ್ದಾನೆ. ಡಾಕ್ಟರು ಹೇಳಿದ ಮಾತನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡಿದ್ದಾನೆ. ನಂತರ ಸ್ವಲ್ಪ ಕಾಲಕ್ಕೆ ತನ್ನ ಕುಟುಂಬದಲ್ಲಿ ಮತ್ತೊಬ್ಬ ವ್ಯಕ್ತಿಯನ್ನು ಡಾಕ್ಟರು ಹತ್ತಿರಕ್ಕೆ ಕರೆದುಕೊಂಡು ಹೋಗಿದ್ದಾನೆ ಆಗ ಆ ಡಾಕ್ಟರು ಆ ರೋಗಿಗೆ ನೀನು ಮಾಂಸವನ್ನು ತಿನ್ನು, ಮಾಂಸವನ್ನು ತಿನ್ನದೇ ಹೋದರೆ ಸತ್ತುಹೋಗುತ್ತೀಯ ಎಂದು ಹೇಳಿದ್ದಾನೆ. ಆಗ ಮೊದಲು ಡಾಕ್ಟರು ಹತ್ತಿರಕ್ಕೆ ಹೋದ ವ್ಯಕ್ತಿಗೆ ಡಾಕ್ಟರ್‌ರವರು ತನ್ನನ್ನು ಮಾಂಸ ತಿನ್ನಬೇಡ ತಿಂದರೆ ಸತ್ತುಹೋಗುತ್ತೀಯ ಎಂದು ಹೇಳಿದ ಮಾತು ಜ್ಞಾಪಕಕ್ಕೆ ಬಂದಿದೆ. ಈಗ ಮಾಂಸ ತಿನ್ನು ತಿನ್ನದೆ ಹೋದರೆ ಸತ್ತುಹೋಗುತ್ತೀಯ ಎಂದು ಹೇಳುವುದು ವಿಚಿತ್ರವಾಗಿ ತೋಚಿತು. ರೋಗವನ್ನನುಸರಿಸಿ ಡಾಕ್ಟರು ಆ ರೋಗಕ್ಕೆ ಯಾವುದು ಅವಶ್ಯವೋ ಅದನ್ನೇ ಹೇಳಿದ್ದಾನೆ ಎಂದು ಅಂದುಕೊಳ್ಳದೆ, ಡಾಕ್ಟರ್ ಹೇಳಿದ ಮಾತುಗಳಲ್ಲಿ ನನಗೆ ಹೇಳಿರುವುದೇ ಸತ್ಯ, ಎರಡನೆಯವನಿಗೆ ಹೇಳಿರುವುದು ಅಸತ್ಯ ಅಂದುಕೊಂಡ ನಂತೆ. ಅದೇ ವಿಧವಾಗಿ ಭಗವದ್ಗೀತೆಯಲ್ಲಿ ಜ್ಞಾನ ಯೋಗದಲ್ಲಿ ಆರನೇ ಶ್ಲೋಕದಲ್ಲಿ ಮೊದಲೇ 'ಅಜೋಪಿ' ಎನ್ನುವ ಪದವನ್ನು ಹೇಳಿದ್ದಾರೆ. ಅದಕ್ಕೆ

ನಾನು ಹುಟ್ಟುವವನು ಅಲ್ಲ ಎಂದು ಅರ್ಥ. ಆದರೇ ಅದಕ್ಕಿಂತ ಮೊದಲು ಐದನೆಯ ಶ್ಲೋಕದಲ್ಲಿ ನನಗೆ ಎಷ್ಟೋ ಜನ್ಮಗಳು ಉಂಟಾಗಿವೆ ಎಂದು ಹೇಳಿದ್ದಾನೆ. ಈ ಎರಡು ಮಾತುಗಳು ದೈವವಾಕ್ಯಗಳೇ ದೇವರು ಮೊದಲ ಶ್ಲೋಕದಲ್ಲಿ ನಾನು ಎಷ್ಟೋ ಬಾರಿ ಭೂಮಿ ಮೇಲೆ ಹುಟ್ಟಿದ್ದೇನೆ, ಜ್ಞಾನವನ್ನು ಬೋಧಿಸಿದ್ದೇನೆ ಎಂದು ಹೇಳಿದ್ದಾನೆ. ಆರನೆಯ ಶ್ಲೋಕದಲ್ಲಿ ನಾನು ಹುಟ್ಟುವವನು ಅಲ್ಲ, ಸಾಯುವವನು ಅಲ್ಲ ಎಂದಿದ್ದಾನೆ. ನಂತರ ಒಂಬತ್ತನೇ ಶ್ಲೋಕದಲ್ಲಿ ನಾನು ಹುಟ್ಟಿ ಭೂಮಿ ಮೇಲೆ ಇದ್ದಾಗ ನನ್ನ ಜನ್ಮವನ್ನು ಗುರುತಿಸಿದವನು ಮರಣಿಸಿದ ನಂತರ ಮತ್ತೆ ತಿರುಗಿ ಹುಟ್ಟದೆ ನನ್ನೊಳಗೆ ಐಕ್ಯವಾಗಿ ಹೋಗುವನೆಂದು ಹೇಳಿದ್ದಾನೆ. ಅಲ್ಲಿಯೂ ಸಹ ದೇವರೇ ಸ್ವತಃವಾಗಿ ಒಂದು ಕಡೆ ಹುಟ್ಟುವವನಲ್ಲ ಎಂದು ಹೇಳುತ್ತಾ, ಎರಡನೆ ಕಡೆ ನಾನು ಎಷ್ಟೋ ಬಾರಿ ಹುಟ್ಟಿದ್ದೇನೆ ಎಂದು ಹೇಳಿದಹಾಗೆ ತಿಳಿಯುತ್ತಿದೆ. ಇದರಲ್ಲಿ ಒಂದು ಸತ್ಯ ಮತ್ತೊಂದು ಅಸತ್ಯ ಎಂದು ಅಂದುಕೊಂಡರೆ ದೇವರನ್ನೇ ಸಂಶಯ ಪಟ್ಟಂತಾಗುತ್ತದೆ. ದೇವರು ಎಂದಿಗೂ ಅಸತ್ಯವನ್ನು ಹೇಳುವುದಿಲ್ಲ. ಡಾಕ್ಟರ್ ಹೇಳಿದ ಎರಡು ವಾಕ್ಯಗಳು ಸತ್ಯವೇ ಆದಹಾಗೇ ದೇವರು ಹೇಳಿದ ಎರಡು ವಾಕ್ಯಗಳು ಸತ್ಯವೇ. ಡಾಕ್ಟರ್ ರೋಗವನ್ನು ಅನುಸರಿಸಿ ಆಹಾರವನ್ನು ಹೇಳಿದ್ದಾನೆಂದು ಅರ್ಥ ಮಾಡಿಕೊಳ್ಳದೇ, ಡಾಕ್ಟರ್ ಎರಡು ವಿಧಗಳಾಗಿ ಮಾತನಾಡಿದ್ದಾನೆಂದು, ಅದರಲ್ಲಿ ಒಂದು ಸತ್ಯ ಮತ್ತೊಂದು ಅಸತ್ಯ ಎಂದು ಅಂದುಕೊಂಡರೆ ನಮ್ಮದೇ ತಪ್ಪಾಗುತ್ತದೆ.

ಇಸ್ಲಾಮ್ ಧರ್ಮವನ್ನು ಬೋಧಿಸುವ ಪವಿತ್ರ ಖುರಾನ್ ಗ್ರಂಥದಲ್ಲಿ 'ಅಲ್‌ಫಜ್ರ್' ಎನ್ನುವ 89ನೇ ಸುರಾದಲ್ಲಿ 22ನೇ ವಾಕ್ಯದಲ್ಲಿ ದೇವರು ಅವತರಿಸುತ್ತಾನೆಂದು ಬರೆಯಲಾಗಿದೆ. ಅದೇ ಖುರಾನ್ ಗ್ರಂಥದಲ್ಲಿ ಅಲ್‌ಇಖ್ಲಾಸ್ ಎನ್ನುವ 112ನೇ ಸುರಾದಲ್ಲಿ ಮೂರನೆ ಆಯತ್‌ನಲ್ಲಿ ದೇವರು ಹುಟ್ಟುವವನಲ್ಲ ಎಂದು ಇದೆ. ಒಂದು ಕಡೆ ಅವತರಿಸುತ್ತಾನೆಂದು ಇದ್ದರೆ, ಒಂದು ಕಡೆ ಅವತರಿಸುವುದಿಲ್ಲ ಎಂದು ಇದೆ. ಇಲ್ಲಿ ಸಹ ಅರ್ಥ ಮಾಡಿಕೊಳ್ಳುವು

ದರಲ್ಲಿ ತಪ್ಪು ಅಭಿಪ್ರಾಯ ಪಟ್ಟರೇ, ಇದರಲ್ಲಿ ಒಂದು ನಿಜ ಮತ್ತೊಂದು ಸುಳ್ಳಾಗಿ ಕಾಣಿಸುತ್ತದೆ. ಮುಸ್ಲೀಮ್‌ರು ದೇವರು ಅವತರಿಸುವುದಿಲ್ಲ ಎನ್ನುವ ಮಾತನ್ನು ನಂಬಿದ್ದಾರೆ. ಅವತರಿಸುತ್ತಾನೆನ್ನುವ ಮಾತನ್ನು ಬೇರೆಯಾಗಿ ಹೇಳಿಕೊಳ್ಳುತ್ತಾ ದೇವರು ಹುಟ್ಟುವುದಿಲ್ಲ ಎನ್ನುವ ಭಾವವನ್ನೇ ಹೊಂದಿದ್ದಾರೆ. ಕ್ರೈಸ್ತವರು ದೇವರ ಕುಮಾರನು ಭೂಮಿಮೇಲೆಗೆ ಕಳಿಸಲ್ಪಡುತ್ತಾನೆ, ದೇವರು ಬರುವುದಿಲ್ಲ ಎಂದು ನಂಬಿದ್ದಾರೆ. ಈಗ ನಾವು ಹೇಳುವ ವಿಭೂತಿರೇಖೆಗಳ ವಿಷಯದಲ್ಲಿ ಮತ್ತು ಮೂರು ನಾಮಗಳ ವಿಷಯದಲ್ಲಿ ನಮ್ಮ ಮಾತು ಪರಸ್ಪರ ವಿರುದ್ಧವಾಗಿ ಕಾಣಿಸುತ್ತಿದ್ದರೂ ಒಂದು ಸತ್ಯವೂ, ಮತ್ತೊಂದು ಅಸತ್ಯವೆಂದು ಅಂದುಕೊಳ್ಳುವುದು ತಪ್ಪಾಗುತ್ತದೆ. ಆದ್ದರಿಂದ ನಾವು ಹೇಳುವ ಎರಡು ಮಾತುಗಳು ಸತ್ಯವೇ ಆಗುತ್ತವೆಂದು ಹೇಳುವುದಕ್ಕೆ ಮೊದಲು ನಾವು ಸ್ವಲ್ಪ ವಿವರವನ್ನು ಹೇಳಬೇಕಾಗಿದೆ.

ದೇವರು ಇಂತದ್ದೆಂದು ಹೇಳುವುದಕ್ಕೆ ಎಲ್ಲೂ ಅವಕಾಶವಿಲ್ಲ. ದೇವರ ಧರ್ಮಗಳು, ದೇವರ ವಿಧಾನ, ದೇವರ ಜ್ಞಾನ ಏನೋ ದೇವರಿಗೆ ಹೊರತು ಇತರರಿಗೆ ಯಾರಿಗೂ ತಿಳಿಯದು. ಅಂತಹದರಲ್ಲಿ ಮನುಷ್ಯ ಎಷ್ಟು ದೊಡ್ಡ ಮೇಧಾವಿ ಆದರೂ, ಎಷ್ಟೋ ದೊಡ್ಡ ಅಧಿಕಾರದಲ್ಲಿ ಇದ್ದರೂ, ಎಷ್ಟೋ ದೊಡ್ಡ ಮಹರ್ಷಿ ಎಂದು ಅನಿಸಿಕೊಂಡರೂ ದೇವರ ವಿಷಯ ಮಾತ್ರ ತಿಳಿಯದು. ದೇವರ ವಿಷಯ ದೇವರೇ ಸ್ವತಃವಾಗಿ ಹೇಳಿದರೇನೆ ತಿಳಿದು ಬರುತ್ತದೆ. ಆದ್ದರಿಂದ ತನ್ನ ವಿಷಯ ಭೂಮಿ ಮೇಲೆ ಮನುಷ್ಯರಿಗೆ ತಿಳಿಯುವುದಕ್ಕೆ, ಯಾವಾಗಲೊ ಒಂದುಬಾರಿ ದೇವರು ದೇವರಾಗಲ್ಲದೇ ಭಗ (ತಾಯಿಗರ್ಭ) ದಿಂದ ಹುಟ್ಟಿದ ಭಗವಂತನಾದ ಮನುಷ್ಯನಾಗಿ ಭೂಮಿ ಮೇಲೆ ಹುಟ್ಟಿ, ಎಲ್ಲರ ಹಾಗೆ ಸ್ವಲ್ಪ ಕಾಲವಿದ್ದು ಸಂದರ್ಭವನ್ನು ಅನುಸರಿಸಿ ತನ್ನ ಜ್ಞಾನವನ್ನು ಬೋಧಿಸಿ ಹೋಗುವನು. ಅಲ್ಲಿಯವರೆಗು ದೇವರ್‍ಯಾರೋ ತಿಳಿಯದ ಮನುಷ್ಯನಿಗೆ ದೇವರ ಜ್ಞಾನ ತಿಳಿಯುತ್ತದೆ, ಅಲ್ಲಿಯವರೆಗು ಹುಟ್ಟದ ದೇವರು ಭಗವಂತನಾಗಿ ಭೂಮಿ ಮೇಲೆ ಹುಟ್ಟಿ ತನ್ನ ಜ್ಞಾನವನ್ನು ಮನುಷ್ಯರಿಗೆ ಹೇಳಿದಾಗ, ದೇವರು ಹುಟ್ಟಿದ

ಹಾಗೇ ಅಲ್ಲವೆ! ದೇವರಿಗೆ ಹೊರತು ಯಾರಿಗೂ ತಿಳಿಯದ ಜ್ಞಾನವನ್ನು ದೇವರು ಹೇಳಿದಹಾಗೇ ಅಲ್ಲವೆ! ದೇವರು ಭೂಮಿ ಮೇಲೆ ಬಂದಾಗ ಎಲ್ಲರಿಗೂ ಸರ್ವಸಾಧಾರಣವಾಗಿ ಕಾಣಿಸುತ್ತಿದ್ದಾನೆ. ಎಲ್ಲರೂ ಆತನನ್ನು ನೋಡುತ್ತಿದ್ದಾರೆ. ಆದರೇ ಆತನು ದೇವರೆಂದು, ಭಗವಂತನಾಗಿ ಮನುಷ್ಯ ಆಕಾರದಲ್ಲಿ ಕಾಣಿಸುತ್ತಿದ್ದಾನೆಂದು ಯಾರೂ ತಿಳಿಯಲಾರರು. ಇತರರು ಭಗವಂತನಾಗಿ ಬಂದ ದೇವರನ್ನು ಗುರುತಿಸಿದರೂ, ಗುರುತಿಸದೇ ಹೋದರೂ ಬಂದಿರುವವನು ಮಾತ್ರ ದೇವರೇ, ಆತನನ್ನು ಎಲ್ಲರೂ ನೋಡುತ್ತಿದ್ದಾರೆ.

ದೇವರು ನಿರಾಕಾರನಾಗಿ ಇದ್ದಾಗ ಅಂದರೆ ದೇವರು ಭೂಮಿ ಮೇಲೆ ಹುಟ್ಟದೇ ದೇವರು ದೇವರಾಗಿಯೇ ಇದ್ದಾಗ ಯಾರಿಗೂ ತಿಳಿಯುವವನು ಅಲ್ಲ. ಆದ್ದರಿಂದ ನಿರಾಕಾರ ಈಶ್ವರ ಲಿಂಗದ ಮೇಲೆ ಇರುವ ವಿಭೂತಿರೇಖೆಗಳಲ್ಲಿ ಯಾವುದನ್ನು ದೇವರಾಗಿ ಬಣ್ಣ ಬಳಿದು ಗುರುತಿಸಬಾರದು. ನಿರಾಕಾರವನ್ನು ತಿಳಿಸುವ ಲಿಂಗದ ಮೇಲೆ ರೇಖೆಗಳಲ್ಲಿ ಮೇಲಿನ ರೇಖೆ ಪರಮಾತ್ಮ ಎಂದು ಆತನ ಇರುವಿಕೆಯನ್ನು ತಿಳಿಸುವುದಕ್ಕೆ ಹೇಳಬಹುದಾಗಲೀ, ಕೆಂಪು ಬಣ್ಣ ಬಳಿದು ಗುರುತಿಸಿ ತೋರಿಸಬಾರದೆಂದು ಹೇಳಿದ್ದೇವೆ. ಅದೇ ಸಾಕಾರ ರೂಪವೊಂದರ ವಿಷಯದೊಳಗೆ ಬಂದರೆ, ದೇವರು ಸಾಕಾರವಾಗಿ ಭಗವಂತನ ರೂಪದಲ್ಲಿ ಕಾಣಿಸುತ್ತಿದ್ದಾನೆ, ಆದ್ದರಿಂದ ಸಾಕಾರಕ್ಕೆ ಧರಿಸಿದ ನಾಮಗಳಲ್ಲಿ ಪರಮಾತ್ಮ ಗುರುತಾಗಿರುವ ನಾಮಕ್ಕೆ ಕೆಂಪು ಬಣ್ಣ ಹಚ್ಚಿ ತೋರಿಸುವುದು ನಡೆಯುತ್ತಿದೆ. ಸಾಕಾರದಲ್ಲಿ ದೇವರು ಕಾಣಿಸುತ್ತಿದ್ದಾನೆ, ಆದ್ದರಿಂದ ಬಣ್ಣ ಹಚ್ಚಿ ತೋರಿಸುವುದರಲ್ಲಿ ತಪ್ಪಿಲ್ಲ. ಹಾಗೆ ತೋರಿಸುವುದರಿಂದ ನಿರಾಕಾರವಾದ ದೇವರು ಸಾಕಾರದಲ್ಲಿ ಕಾಣಿಸುತ್ತಾನೆಂದು ಎಲ್ಲರಿಗೂ ತಿಳಿಯುವಹಾಗೆ ಹೇಳಬಹುದು. ನಿರಾಕಾರದಲ್ಲಿ ದೇವರ ಗುರುತನ್ನು ಬಣ್ಣದೊಂದಿಗೆ ಗುರುತಿಸುವುದು ತಪ್ಪಾಗುತ್ತದೆ. ಅದೇ ಸಾಕಾರದಲ್ಲಿ ಮೂರು ನಾಮಗಳಲ್ಲಿ ದೇವರ ಗುರುತಾದ ಮಧ್ಯ ನಾಮವನ್ನು ಬಣ್ಣದೊಂದಿಗೆ ತೋರಿಸದೆ ಹೋದರೆ ತಪ್ಪಾಗುತ್ತದೆ. ನಿರಾಕಾರದಲ್ಲಿ ದೇವರು ತಿಳಿಯದವನು ಆದ್ದರಿಂದ ಬಣ್ಣದೊಂದಿಗೆ

ಗುರುತಿಸಿ ತೋರಿಸಬಾರದು. ಸಾಕಾರದಲ್ಲಿ ದೇವರು ತಿಳಿಯುವವನು ಆದ್ದರಿಂದ ಬಣ್ಣದೊಂದಿಗೆ ಗುರುತಿಸಿ ತೋರಿಸಬೇಕು. ನಿರಾಕಾರದಲ್ಲಿ ಯಾರಿಗೂ ತಿಳಿಯದ ದೇವರು ಸಾಕಾರದಲ್ಲಿ ಎಲ್ಲರಿಗೂ ತಿಳಿಯುತ್ತಿದ್ದಾನೆ. ಆದ್ದರಿಂದ ನಿರಾಕಾರದಲ್ಲಿ ಒಂದು ಮಾತು, ಸಾಕಾರದಲ್ಲಿ ಮತ್ತೊಂದು ಮಾತು ಹೇಳಬೇಕಾಗಿ ಬಂದಿದೆ. ನಿರಾಕಾರದಲ್ಲಿ ನನಗೆ ಹುಟ್ಟುವಿಕೆ ಇಲ್ಲವೆಂದು ಹೇಳಿದವನು, ಸಾಕಾರದಲ್ಲಿ ನಾನು ಹುಟ್ಟಿ ಧರ್ಮಗಳನ್ನು ಬೋಧಿಸುತ್ತಿದ್ದೇನೆಂದು ಹೇಳುವುದು ನಡೆದಿದೆ.

ರೋಗವನ್ನನುಸರಿಸಿ ಒಂದುಬಾರಿ ಮಾಂಸಾಹಾರವನ್ನು ತಿನ್ನಬೇಡ ವೆಂದು ಹೇಳಿದ ವೈದ್ಯನೇ, ನಂತರ ಕಾಲದಲ್ಲಿ ತಿನ್ನಬೇಕೆಂದು ಹೇಳುತ್ತಿದ್ದಾನೆ. ಒಬ್ಬನೇ ವೈದ್ಯನು ಎರಡು ವಿಧಗಳ ಪತ್ಯವನ್ನು ಹೇಳಿದರೂ ಅವು ಪರಸ್ಪರ ವಿರುದ್ಧಗಳು ಆಗದಹಾಗೆ, ಒಬ್ಬನೇ ದೇವರು ಎರಡು ಸ್ಥಿತಿಗಳಲ್ಲಿ, ಎರಡು ವಿಧಗಳಾಗಿ ಹೇಳಿದ ಮಾತುಗಳು ಪರಸ್ಪರ ವಿರುದ್ಧಗಳಲ್ಲ. ಆದ್ದರಿಂದ ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದ ನಂತರವೇ ದೇವರು ಎಂತಹವನೋ, ದೇವರಲ್ಲಿನ ಸತ್ಯಾಸತ್ಯಗಳು ಏನೋ ತಿಳಿಯುತ್ತವೆ. ಹಾಗಲ್ಲದೇ ಸ್ವಲ್ಪಮಟ್ಟಿಗೆ ಜ್ಞಾನವನ್ನು ತಿಳಿದು ಮಾತನಾಡಿದರೆ ಒಂದು ಕಡೆ ಸತ್ಯವಾಗಿರುವುದು ಮತ್ತೊಂದು ಕಡೆ ಅಸತ್ಯವಾಗುತ್ತದೆ. ಹಾಗೇ ಒಂದು ಸಂದರ್ಭದಲ್ಲಿ ಅಸತ್ಯವಾಗಿರುವುದು ಮತ್ತೊಂದು ಸಂದರ್ಭದಲ್ಲಿ ಸತ್ಯವಾಗುತ್ತದೆ. ಬಹಳ ಜನರಿಗೆ ಸಂಪೂರ್ಣ ಜ್ಞಾನ ತಿಳಿಯದೆ ಇರುವುದರಿಂದ, ದೇವರ ನಿರಾಕಾರ ಸಾಕಾರ ವಿಧಾನಗಳೆರಡನ್ನು ತಿಳಿಯದೇ, ಹಿಂದುಗಳೇನೊ ಹೆಚ್ಚಾಗಿ ಸಾಕಾರವನ್ನು ಹಿಡಿದುಕೊಂಡು ನಿರಾಕಾರವನ್ನು ಬಿಟ್ಟಿದ್ದಾರೆ. ಮುಸ್ಲೀಮ್‌ರೇನೊ ನಿರಾಕಾರವನ್ನು ಹಿಡಿದುಕೊಂಡು ಸಾಕಾರವನ್ನು ಬಿಟ್ಟಿದ್ದಾರೆ. ದೇವರು ಒಬ್ಬನೇ, ದೇವರ ಜ್ಞಾನವೂ ಒಂದೇ ಆದರೂ ದೇವರಲ್ಲಿಯೂ, ಜ್ಞಾನದಲ್ಲಿಯೂ ಹಿಂದುಗಳಿಗೂ, ಮುಸ್ಲೀಮ್‌ರಿಗೂ ಬೇರೆ ಬೇರೆ ಅಭಿಪ್ರಾಯಗಳು ಇವೆ. ಈ ವಿಧವಾಗಿ ಅರ್ಥ ಮಾಡಿಕೊಂಡವನಿಗೆ ಅರ್ಥ ಮಾಡಿಕೊಂಡಷ್ಟು ದೇವರ ಜ್ಞಾನ ಅರ್ಥವಾಗುತ್ತದೆ. ಸಂಪೂರ್ಣ

ಜ್ಞಾನ ಇಲ್ಲದೇ ಹೋದರೆ ದೇವರ ನಿರಾಕಾರ ಸಾಕಾರ ಧರ್ಮಗಳು ಅರ್ಥವಾಗುವುದಿಲ್ಲ.

ಈ ದಿನ ಹಿಂದೂಮತವಾಗಿ ಕರೆಯಲಾಗುವುದನ್ನು ಪೂರ್ವದಲ್ಲಿ ಇಂದೂ ಧರ್ಮವಾಗಿ ಹೇಳಲಾಗುತ್ತಿತ್ತು. ಐದು ಸಾವಿರ ಸಂವತ್ಸರಗಳ ಪೂರ್ವದಲ್ಲಿ ಇತರ ಮತಗಳು ಇಲ್ಲ. ಆ ದಿನ ಇರುವುದು ಒಂದು ಇಂದೂ ಧರ್ಮ ಒಂದೇ. ನಂತರ ಮತಗಳು ಏರ್ಪಡುತ್ತಿದ್ದಂತೆಲ್ಲಾ ಇಂದೂ ಧರ್ಮ ಸ್ವಲ್ಪ ಬದಲಾಗಿ ಕೊನೆಗೆ ಹಿಂದೂ ಮತವಾಗಿ ಹೇಳಲಾಗುತ್ತಿದೆ. ಹಾಗೆ ಹೇಳಲಾಗುವ ಹಿಂದೂಮತದಲ್ಲಿ ಅದ್ವೈತ, ದ್ವೈತ, ವಿಶಿಷ್ಠಾದ್ವೈತ ಸಿದ್ಧಾಂತಕರ್ತರು ಬರುವುದು ನಡೆದಿದೆ. ಅವರು ಪೂರ್ವ ಕೃತ್ ಯುಗದಲ್ಲೇ ಇರುವ ವಿಭೂತಿರೇಖೆಗಳನ್ನು, ಮೂರು ನಿಲುವು ನಾಮಗಳನ್ನೂ ಸ್ವಲ್ಪ ಬದಲವಾವಣೆಗ ಳೊಂದಿಗೆ ತಮ್ಮ ಸಿದ್ಧಾಂತಗಳಿಗೆ ಜೆಂಡಾ (ಭಾವುಟ) ಗುರುತುಗಳಾಗಿ ಇಟ್ಟುಕೊಳ್ಳುವುದು ನಡೆದಿದೆ. ವಿಶಿಷ್ಠಾದ್ವೈತ, ದ್ವೈತ ಸಿದ್ಧಾಂತಗಳ ಹತ್ತಿರ ನಾಮ ಸ್ವಲ್ಪ ಬದಲಾವಣೆಯಾದಾಗ ನಂತರ ಕಾಲದಲ್ಲಿ ಸಹ ಬದಲಾವಣೆ ಹೊಂದುತ್ತಾ ಬರುತ್ತಿದೆಯೆಂದು ಹೇಳಬಹುದು. ಒಂದು ವಿಭೂತಿರೇಖೆಗಳು ಬದಲಾಗುವುದಕ್ಕೆ ಅವಕಾಶವಿಲ್ಲದೆ ಮೂರು ಅಡ್ಡ ರೇಖೆಗಳಾಗಿಯೇ ಇದ್ದರೂ ಮಧ್ಯದಲ್ಲಿರುವ ರೇಖೆ ಮೇಲೆ ಬೊಟ್ಟು ಮಾತ್ರ ಸ್ಥಾನ ಬದಲಾಗಿ ಕೆಲವು ಕಡೆ ಕೆಳಗಿನ ರೇಖೆ ಮೇಲೆ ಕಾಣಿಸುತ್ತಿದೆ. ಕಾಲ ಕಳೆದಂತೆಲ್ಲಾ ಆಧ್ಯಾತ್ಮಿಕ ಎನ್ನುವ ಹೆಸರಿನೊಂದಿಗೆ ಹೊಸ ವಿಧಾನಗಳು ಹುಟ್ಟಿ ಬರುವುದು, ಅವರು ತಮಗೊಂದು ಗುರುತನ್ನು ತಯಾರು ಮಾಡಿಕೊಳ್ಳುವುದು ನಡೆದಿದೆ. ಈಗಲೂ ಬಹಳ ಹೆಸರುಗಳಿರುವ ಆಧ್ಯಾತ್ಮಿಕ ಸಂಸ್ಥೆಗಳು ಹೆಚ್ಚಾಗಿ ನಾಮವನ್ನೇ ತಮ್ಮ ಇಷ್ಟ ಬಂದಹಾಗೆ ಬದಲಾಯಿಸಿ ಇಟ್ಟಿಕೊಳ್ಳುತ್ತಾ ಅದು ಅವರ ಸಂಸ್ಥೆ ಗುರುತಾಗಿ ಹೇಳಿಕೊಳ್ಳುತ್ತಿ ದ್ದಾರೆ. ಉದಾಹರಣೆಗೆ ಇಸ್ಕಾನ್ ಸಂಸ್ಥೆಯವರು ಶ್ರೀ ಕೃಷ್ಣಭಕ್ತಿ ತತ್ತ್ವವನ್ನು ಬೋಧಿಸುತ್ತಿದ್ದಾರೆ. ಆ ಸಂಸ್ಥೆಯವರು ಮೂರು ನಿಲುವು ನಾಮಗಳಲ್ಲಿ ಸ್ವಲ್ಪ ಬದಲಾವಣೆ ಮಾಡಿ ಇಟ್ಟುಕೊಳ್ಳುತ್ತಿದ್ದಾರೆ. ಅವರು ಧರಿಸುವ ನಾಮಗಳಲ್ಲಿ

ಕೆಂಪು ಬಣ್ಣ ಗುರುತಿರುವ ಮಧ್ಯೆ ನಾಮ ಇರುವುದಿಲ್ಲ. ಅವರು ಧರಿಸುವ ನಾಮ ಹರಿಷಿಣ ಬಣ್ಣವಿರುವ ಕಡೆ ಆತ್ಮ ಜೀವಾತ್ಮಗಳೆನ್ನುವ ನಾಮಗಳು ಮಾತ್ರವೇ ಇರುತ್ತವೆ. ಅಷ್ಟೇ ಅಲ್ಲದೆ ಅವರ ನಾಮದ ಕೆಳಗೆ ಮೂಗಿನ ಮೇಲೆ ಒಂದು ಬೊಟ್ಟಿನಂತೆ ಅಗಲವಾಗಿ ಇಟ್ಟು ನಂತರ ಮೇಲೆ ಎರಡು ನಾಮಗಳು ಮಾತ್ರವೇ ಇರುತ್ತವೆ. ಈ ವಿಧವಾಗಿ ಬಹಳ ಆಧ್ಯಾತ್ಮಿಕ ಸಂಸ್ಥೆಯವರು ನಾವು ಬೇರೆ, ನಮ್ಮ ದಾರಿ ಬೇರೆ, ನಮ್ಮ ಜ್ಞಾನ ಬೇರೆ ಅಂದಹಾಗೆ ಅವರಿಗೊಂದು ಪ್ರತ್ಯೇಕವಾದ ಗುರುತಿರುವ ನಾಮವನ್ನು ಇಟ್ಟುಕೊಳ್ಳುವುದು ನಡೆದಿದೆ. ಕೆಲವರು ಮೂರು ನಾಮಗಳಲ್ಲಿ ಪ್ರಕ್ಕದ ನಾಮಗಳನ್ನು ಬಿಟ್ಟು ಮಧ್ಯ ನಾಮವನ್ನು ಮಾತ್ರ ಇಟ್ಟುಕೊಂಡರೆ, ಕೆಲವರು ಮಧ್ಯನಾಮವನ್ನು ಬಿಟ್ಟು ಪಕ್ಕ ನಾಮಗಳನ್ನು ಇಟ್ಟುಕೊಂಡು, ಮತ್ತೆ ಕೆಲವರು ಪಕ್ಕದ ನಾಮಗಳನ್ನು ಮಾತ್ರ ಇಟ್ಟುಕೊಳ್ಳುತ್ತಾ ಅದರಲ್ಲಿ ಬಲಗಡೆ ಉದ್ದವಾಗಿ ಎಡಗಡೆ ಚಿಕ್ಕದಾಗ ಇಟ್ಟುಕೊಂಡರೆ, ಮತ್ತೊಂದು ಆಧ್ಯಾತ್ಮಿಕ ಪೀಠದವರು ನಾಮಗಳಲ್ಲಿ ಪ್ರಕ್ಕದ ನಾಮಗಳನ್ನು ಎರಡನ್ನು ಇಟ್ಟು ಮಧ್ಯದಲ್ಲಿ ನಾಮವಿಲ್ಲದೆ ಕೇವಲ ಬೊಟ್ಟನ್ನು ಮಾತ್ರ ಇಡುತ್ತಿದ್ದಾರೆ. ಕೆಲವರು ನಾಮವಿಲ್ಲದೇ ಅಗಲವಾದ ಬೊಟ್ಟನ್ನು ಅವರ ಗುರುತಾಗಿ ಇಟ್ಟುಕೊಳ್ಳುವುದು ನಡೆದಿದೆ. ಕೆಲವರು ಮೂರು ವಿಭೂತಿ ರೇಖೆಗಳನ್ನು ಇಟ್ಟುಕೊಳ್ಳದೇ ಕೇವಲ ಒಂದು ರೇಖೆಯನ್ನು ಹರಿಶಿಣ ಬಣ್ಣದಿಂದ ಇಟ್ಟುಕೊಳ್ಳುವುದು ನಡೆಯುತ್ತಿದೆ. ಕೆಲವರಾದರೇ ಅರ್ಧಚಂದ್ರಾಕಾರವನ್ನು, ಮತ್ತೆ ಕೆಲವರು ಸೂರ್ಯಬಿಂಬವನ್ನು ತಮ್ಮ ಗುರುತುಗಳಾಗಿ ಹಣೆಯ ಭಾಗದಲ್ಲಿ ಇಟ್ಟುಕೊಳ್ಳುವುದು ನಡೆಯುತ್ತಿದೆ.

ಈ ವಿಧವಾಗಿ ಪೂರ್ವ ಕಾಲದಲ್ಲಿ ಇಲ್ಲದ ಆಧ್ಯಾತ್ಮಿಕ ವಿದ್ಯೆಗಳು ಅನೇಕ ಪೀಠಗಳು, ಮಠಗಳು ಎನ್ನುವ ಹೆಸರೊಂದಿಗೆ ತಯಾರಾಗಿವೆ. ರಾಜಕೀಯದಲ್ಲಿ ಬೇರೆ ಬೇರೆ ವಿಧಾನಗಳಿಂದ ರಾಜಕೀಯ ಪಾರ್ಟಿಗಳು ತಯಾರಾದಂತೆ. ಆಧ್ಯಾತ್ಮಿಕದಲ್ಲಿ ಬೇರೆ ಬೇರೆ ಸಿದ್ಧಾಂತಗಳೊಂದಿಗೆ ಅದ್ವೈತ, ವಿಶಿಷ್ಠಾದ್ವೈತ, ದ್ವೈತ ಪೀಠಗಳು ತಯಾರಾಗಿವೆ ಎಂದು ಹೇಳಿಕೊಂಡಿದ್ದೇವೆ. ಅವರು ವಿಭೂತಿ ರೇಖೆಗಳನ್ನು, ನಾಮಗಳನ್ನು ತಮ್ಮ ತಮ್ಮ ಗುರುತುಗಳಾಗಿ

ಇಟ್ಟುಕೊಳ್ಳುವುದು ನಡೆಯುತ್ತಿದೆ. ಅದ್ವೈತ, ವಿಶಿಷ್ಠಾದ್ವೈತ, ದ್ವೈತ ಪೀಠಗಳಲ್ಲಿ ಆದಿಶಂಕರಾಚಾರ್ಯರವರು ಅದ್ವೈತ ಪೀಠವನ್ನೂ, ರಾಮಾನುಜಾಚಾರ್ಯರು ವಿಶಿಷ್ಠಾದ್ವೈತ ಪೀಠವನ್ನೂ, ಮಧ್ವಾಚಾರ್ಯರವರು ದ್ವೈತ ಪೀಠವನ್ನೂ ತಯಾರು ಮಾಡಿದ್ದಾರೆ. ನಮಗೆ ಇಂಟರ್‌ನೆಟ್ ಮೂಲಕ ದೊರಕಿದ ಸಮಾಚಾರದ ಪ್ರಕಾರ ಶಂಕರಾಚಾರ್ಯರು 788ನೇ ವರ್ಷ ಕೇರಳ ರಾಷ್ಟ್ರದಲ್ಲಿ ಹುಟ್ಟಿದ್ದಾನೆಂದು, ಆತನು ಕೇವಲ 32 ಸಂವತ್ಸರಗಳು ಮಾತ್ರ ಜೀವಿಸಿ ಮರಣಿಸಿದ್ದಾನೆಂದು ತಿಳಿಯುತ್ತಿದೆ. ಆತನ ಜೀವನದಲ್ಲಿ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿ ಅದನ್ನೇ ಪ್ರಚಾರ ಮಾಡಿದಾಗ, ಆತನಿಗೆ ಎಷ್ಟೋ ಶಿಷ್ಯರು ತಯಾರಾಗಿ ಅದ್ವೈತ ಸಿದ್ಧಾಂತವನ್ನು ತಿಳಿದುಕೊಂಡಿದ್ದಾರೆ. ಆತನು ಮರಣಿಸಿದ ನಂತರ ಅದ್ವೈತ ಸಿದ್ಧಾಂತವನ್ನು ಚೆನ್ನಾಗಿ ತಿಳಿದ ಆತನ ಶಿಷ್ಯರಲ್ಲಿ ಒಬ್ಬನು ಆ ಸಿದ್ಧಾಂತವನ್ನು ಪ್ರಚಾರ ಮಾಡುವುದಕ್ಕೆ ಶಂಕರಾಚಾರ್ಯನಾಗಿಯೇ ನಿಯಮಿಸಲ್ಪಡುತ್ತಿದ್ದಾನೆ. ಆತನು ಸಹ ಮರಣಿಸಿದ ನಂತರ ಮತ್ತೊಬ್ಬ ವ್ಯಕ್ತಿಯನ್ನು ಶಂಕರಾಚಾರ್ಯರ ಸ್ಥಾನದಲ್ಲಿ ಗುರುವಾಗಿ ನಿಯಮಿಸಿರುವುದು ನಡೆಯುತ್ತಿದೆ. ಈ ವಿಧವಾಗಿ ಆದಿ ಶಂಕರಾಚಾರ್ಯರವರು ಹೋದರೂ ಅವರ ಸ್ಥಾನದಲ್ಲಿ ಶಂಕರಾಚಾರ್ಯರ ಹೆಸರಿನ ಮೇಲೆ ಉಳಿದವರು ನಿಯಮಿಸಲ್ಪಡುವುದೂ, ಅದೇ ಅದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡುವುದೂ ನಡೆಯುತ್ತಿದೆ. ಹೀಗೆ ಆ ಸಿದ್ಧಾಂತ ಪರಂಪರೆಯಾಗಿ ಒಬ್ಬರ ನಂತರ ಒಬ್ಬರ ಮೂಲಕ ಇಂದಿಗೂ ಇದೆ.

ಒಂದು ಸಿದ್ಧಾಂತವನ್ನು ಒಬ್ಬರು ಕಂಡುಹಿಡಿದು ಅದನ್ನು ಕಾರ್ಯ ರೂಪಕ್ಕೆ ತಂದು ಪ್ರಚಾರ ಮಾಡಿದಾಗ, ನಂತರ ಆತನ ಸ್ಥಾನದಲ್ಲಿ ಅದೇ ವಿಧಾನವನ್ನು ಮತ್ತೊಬ್ಬರು ಸಾಗಿಸುತ್ತಿರುವರು. ಈ ವಿಧವಾಗಿ ಬರುವ ಪರಂಪರೆಯನ್ನು 'ಪೀಠ' ಎನ್ನುತ್ತೇವೆ. ಉದಾಹರಣೆಗೆ ಆದಿಶಂಕರಾಚಾರ್ಯ ರವರು ಅದ್ವೈತ ಸಿದ್ಧಾಂತವನ್ನು ಆಧ್ಯಾತ್ಮಿಕ ವಿದ್ಯೆಯಲ್ಲಿ ತಿಳಿಸಿದಾಗ, ಆ ಅದ್ವೈತ ಸಿದ್ಧಾಂತವನ್ನು ನಂತರ ಪ್ರಚಾರ ಮಾಡುವ ಜವಾಬ್ದಾರಿಯನ್ನು ಸ್ವೀಕರಿಸಿದ ಅವರು ಒಬ್ಬರ ನಂತರ ಮತ್ತೊಬ್ಬರು ಬರುತ್ತಾ ಈ ದಿನ 71ನೇ ಶಂಕರಾಚಾರ್ಯರಾಗಿ ಹೇಳುವ ಆಚಾರ್ಯರು ಇರುವಹಾಗೆ ತಿಳಿಯುತ್ತಿದೆ.

ಮೊದಲು ಅದ್ವೈತ ಎನ್ನುವ ಸಿದ್ಧಾಂತದ ಹೆಸರಿನಿಂದ ಒಂದು ಪೀಠ ತಯಾರಾದಾಗ ಅದರ ಮೇಲೆ ಒಬ್ಬರ ನಂತರ ಒಬ್ಬರು ಆಸೀನರಾಗುತ್ತಾ ಅದ್ವೈತ ಸಿದ್ಧಾಂತ ಪರಿಪಾಲನೆ ಮಾಡುತ್ತಿದ್ದಾರೆ. ಮೊದಲು ತಯಾರಾದ ಸಿದ್ಧಾಂತ ಒಂದು ಸಿಂಹಾಸನವಂತದ್ದು. ಆ ಸಿಂಹಾಸನಕ್ಕೆ ರಾಜ ಒಬ್ಬನೇ ಇರುವುದಿಲ್ಲ. ಒಬ್ಬ ರಾಜ ಇರುವಾಗಲೇ ಮತ್ತೊಬ್ಬ ಯುವರಾಜ ತಯಾರಾಗು ವುದೂ, ರಾಜ ಗತಿಸಿದ ನಂತರ ಯುವರಾಜ ರಾಜನಾಗಿ ಸಿಂಹಾಸನವನ್ನು ಅಧಿಷ್ಠಿಸುವುದು ನಡೆಯುತ್ತಿರುತ್ತದೆ. ಒಬ್ಬ ಗುರುವು ಅಥವಾ ಆಚಾರ್ಯರವರು ಒಂದು ಸಿದ್ಧಾಂತ ಎನ್ನುವ ಪೀಠವನ್ನು ತಯಾರು ಮಾಡಿದಾಗ, ಆತನ ನಂತರ ಆ ಪೀಠವನ್ನು ಮತ್ತೊಬ್ಬ ಆಚಾರ್ಯರವರು ಅಧಿಷ್ಟಿಸುತ್ತಿರುವರು. ಒಬ್ಬ ಆಚಾರ್ಯರು ಇರುವಾಗಲೇ ಮತ್ತೊಬ್ಬ ಯುವ ಆಚಾರ್ಯರು ತಯಾರಾಗುವುದು ನಂತರ ಸಿದ್ಧಾಂತ ಪೀಠವನ್ನು ಅಧಿಷ್ಠಿಸಿ ಆ ಸಿದ್ಧಾಂತಕ್ಕೆ ಪ್ರತಿನಿಧಿಯಾಗಿ ಇರುವುದೂ ಆಧ್ಯಾತ್ಮಿಕ ವಿದ್ಯೆಯಲ್ಲಿ ನಡೆಯುತ್ತಿದೆ. ರಾಜನ ಆಸ್ಥಾನದಲ್ಲಿ ಪೂರ್ವದಲ್ಲಿ ಒಂದು ಸಿಂಹಾಸನಕ್ಕೆ ಒಬ್ಬ ರಾಜ, ಯುವರಾಜ ಇದ್ದಹಾಗೆ, ಆಧ್ಯಾತ್ಮಿಕ ವಿದ್ಯೆಯಲ್ಲಿ ಆಚಾರ್ಯರ ಸಿದ್ಧಾಂತ ಪೀಠ, ಅದಕ್ಕೆ ಹೊಸ ಯುವ ಆಚಾರ್ಯರು ತಯಾರಾಗುವುದು ನಡೆಯುತ್ತಿದೆ. ಇದೇ ವಿಧಾನ ಅದ್ವೈತ ಪೀಠದಲ್ಲಿ ಇಂದಿಗೂ ಕೊನೆಸಾಗುತ್ತಿದೆ. ಆದಿ ಶಂಕರಾ ಚಾರ್ಯರು ಅದ್ವೈತ ಸಿದ್ಧಾಂತದೊಂದಿಗೆ ಅದ್ವೈತ ಪೀಠವನ್ನು ತಯಾರುಮಾಡಿ ದಾಗ ಎಷ್ಟೋ ಜನ ಆಚಾರ್ಯರು ಅದನ್ನು ಅದಿಷ್ಟಿಸುತ್ತಾ ಬಂದಿದ್ದಾರೆ. ಚಂದ್ರಶೇಖರೇಂದ್ರ ಸರಸ್ವತಿಯವರು 68ನೇ ಪೀಠಾಧಿಪತಿಯಾಗಿ ಇರುವಾಗಲೇ, ಜಯೇಂದ್ರ ಸರಸ್ವತಿ ಅವರು ಯುವ ಆಚಾರ್ಯರಾಗಿ ತಯಾರಾಗುವುದೂ, ಚಂದ್ರಶೇಖರೇಂದ್ರ ಸರಸ್ವತಿ ಆ ಪೀಠದಿಂದ ಇಳಿದ ನಂತರ ಜಯೇಂದ್ರ ಸರಸ್ವತಿಯನ್ನು 69ನೇ ಪೀಠಾಧಿಪತಿಯಾಗಿ ಮಾಡುವುದೂ ನಡೆದಿದೆ. ಈಗ ಪ್ರಸ್ತುತ ಪೀಠಾಧಿಪತಿಯಾಗಿ ಜಯೇಂದ್ರ ಸರಸ್ವತಿ ಅವರಿರುವಾಗ, ಅವರ ನಂತರ ಅದ್ವೈತ ಸಿದ್ಧಾಂತ ಪೀಠವನ್ನು ಸಾಗಿಸುವುದಕ್ಕೆ ಶಂಕರ ವಿಜಯೇಂದ್ರ ಸರಸ್ವತಿ 70ನೇ ಪೀಠಾಧಿಪತಿಯಾಗಿ ಮುಂಚಿತವಾಗಿಯೇ ತರಭೇತಿ ಆಗುವುದು

ನಡೆಯುತ್ತಿದೆ. ಈ ವಿಧವಾಗಿ ಬರುವ ಪರಂಪರೆಯನ್ನು ಪೀಠ ಪೀಠಾಧಿಪತಿಗಳು ಎಂದು ಹೇಳಬಹುದು.

ಅದ್ವೈತ ಪೀಠದ ನಂತರ ರಾಮಾನುಜಾಚಾರ್ಯರವರು ವಿಶಿಷ್ಠಾದ್ವೈತ ಪೀಠವನ್ನು ಸ್ಥಾಪಿಸಿದ್ದಾರೆ. ಆತನು 1017ನೇ ವರ್ಷ ಜನ್ಮಿಸಿ ಸಂಪೂರ್ಣವಾಗಿ 120 ವರ್ಷಗಳು ಬದುಕಿದ್ದಾರೆ. ಆತನ ಜೀವನದಲ್ಲಿ ವಿಶಿಷ್ಠಾದ್ವೈತ ಎನ್ನುವ ಒಂದು ಪ್ರತ್ಯೇಕ ಸಿದ್ಧಾಂತವನ್ನು ಪ್ರತಿಪಾದಿಸಿ, ತನ್ನ ವಿಶಿಷ್ಠಾದ್ವೈತ ಪೀಠವನ್ನು ಸ್ಥಾಪಿಸಿದ್ದಾನೆ. ನಂತರ ವಿಶಿಷ್ಠಾದ್ವೈತ ಪೀಠವನ್ನು ಎಷ್ಟೋ ಜನ ಸ್ವಾಮೀಜೀಗಳು ಅಧಿಷ್ಠಿಸಿ ಪರಂಪರೆ ಸಾಗಿಸಿದ್ದಾರೆ. ದೊಡ್ಡ ಜಿಯ್ಯರ್ ಸ್ವಾಮಿ 31–12–1979ನೇ ವರ್ಷ ಚಿಕ್ಕ ಜಿಯರ್ ಸ್ವಾಮೀಜಿಗೆ ಪೀಠವನ್ನು ಒಪ್ಪಿಸಿದ್ದಾನೆ. ಈ ವಿಧವಾಗಿ ಒಂದು ಸಿದ್ಧಾಂತ ಆಧ್ಯಾತ್ಮಿಕ ಸಾಮ್ರಾಜ್ಯದಲ್ಲಿ ಸ್ಥಾಪಿಸಿದ ನಂತರ ಆದಿ ಪೀಠವಾಗಿ ರೂಪಾಂತರ ಹೊಂದಿ ಪರಂಪರೆಯಾಗಿ ಬರುತ್ತದೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ಒಂದು ಪೀಠ ಇದೆಯೆಂದರೆ ಅದರ ಹಿಂದೆ ಒಂದು ಸಿದ್ಧಾಂತ ಇರುತ್ತದೆ. ಪೂರ್ವದಲ್ಲಿ ಇದೇ ವಿಧಾನದೊಂದಿಗೆ ಅದ್ವೈತ, ವಿಶಿಷ್ಠಾದ್ವೈತ, ದ್ವೈತ ಪೀಠಗಳು ತಯಾರಾಗಿವೆ. ಆದರೆ ಈ ಮಧ್ಯಕಾಲದಲ್ಲಿ ಸಿದ್ಧಾಂತವಿಲ್ಲದ ಪೀಠಗಳು ಸಹ ತಯಾರಾಗಿವೆ. ಒಂದು ರಾಜ್ಯ ಇದ್ದಾಗ ಅದಕ್ಕೆ ಒಬ್ಬ ರಾಜ, ರಾಜನಿಗೊಂದು ಸಿಂಹಾಸನ ಇದೆ ಎಂದು ಹೇಳಿದರೆ ಸರಿಹೋಗುತ್ತದೆ, ಅದಕ್ಕೊಂದು ಅರ್ಥವಿರುತ್ತದೆ. ಆದರೆ ರಾಜ್ಯ ಯಾವ ಮಾತ್ರ ಇಲ್ಲದೇ ನಾನೊಬ್ಬ ರಾಜನು, ನನಗೊಂದು ಸಿಂಹಾಸನವಿದೆ ಎಂದರೆ, ಅದು ಆತನ ದೊಡ್ಡತನಕ್ಕೋಸ್ಕರ ಹೇಳಿಕೊಳ್ಳುವುದೇ ಆಗಲಿ ಬೇರೆ ಅಲ್ಲವೆಂದು ತಿಳಿಯುತ್ತಿದೆ. ಕಳೆದ ನೂರು ವರ್ಷಗಳಲ್ಲಿಯೇ ಬಹಳ ಪೀಠಗಳು ತಯಾರಾಗಿವೆ. ದ್ವಾಪರ ಯುಗದ ಕೊನೆಯಲ್ಲಿ ದೇವರು ಭಗವಂತನಾಗಿ ಬಂದು ತನ್ನ ಜ್ಞಾನವನ್ನು ಹೇಳಿ ಹೋದರೂ, ದೇವರು ಸ್ವತಃವಾಗಿ ಹೇಳಿದ ಜ್ಞಾನವನ್ನು ಯಾರೂ ಇಂದಿನವರೆಗು ಗ್ರಹಿಸದೇ ಹೋಗಿದ್ದಾರೆ. ದ್ವಾಪರ ಯುಗದ ಕೊನೆಯಲ್ಲಿ ಭಗವದ್ಗೀತೆ ಹೇಳಿದರೇ, ಕಲಿಯುಗ ಬಂದ ಮೂರು ಸಾವಿರ ವರ್ಷಗಳಿಗೇ ಮತಗಳು ತಯಾರಾಗಿ,

ಮತವೇ ಇಲ್ಲದ ಭಾರತ ದೇಶದಲ್ಲಿ ಸಹಾ ಮತಗಳ ಗಾಳಿ ಸೋಕಿದಾಗ ಹಿಂದೂಮತವನ್ನು ಉದ್ಧರಿಸುವುದಕ್ಕೆ ಅದ್ವೈತ, ವಿಶಿಷ್ಠಾದ್ವೈತ, ದ್ವೈತ ಸಿದ್ಧಾಂತಗಳು ತಯಾರಾಗಿವೆ. ಆದರೂ ಭಾರತದೇಶದಲ್ಲಿ ಇಸ್ಲಾಮ್, ಕ್ರೈಸ್ತವಮತಗಳು ಚೆನ್ನಾಗಿ ಹರಡಿ ಹೋಗಿವೆ. ಕ್ರೈಸ್ತವ ಮತ ಬಹಳ ವೇಗವಾಗಿ ವಿಸ್ತರಿಸಿದೆ.

ಇಂದೂ ಮತವನ್ನು ರಕ್ಷಿಸುವುದಕ್ಕೇ ಅದ್ವೈತ, ವಿಶಿಷ್ಠಾದ್ವೈತ, ದ್ವೈತ ಸಿದ್ಧಾಂತಗಳನ್ನು ಆಯಾ ಸಿದ್ಧಾಂತಕರ್ತರು ಪ್ರಚಾರ ಮಾಡಿದ್ದಾರೆಂದು ಕೆಲವರು ಹಿಂದೂಗಳು ಹೇಳುತ್ತಿದ್ದರೂ, ಆ ಸಿದ್ಧಾಂತಗಳಿಂದ ಏನು ಒಳ್ಳೆಯದು ನಡೆದಿದೆಯೋ ತಿಳಿಯದು ಆದರೆ, ಇತರ ಮತಗಳು ಚೆನ್ನಾಗಿ ಅಭಿವೃದ್ಧಿ ಆಗುವುದೂ, ಹಿಂದೂಮತ ಕ್ಷೀಣಿಸುವುದು ಮಾತ್ರ ನಡೆದಿದೆ. ಇದಕ್ಕೆ ಕಾರಣ ದೇವರು ಹೇಳಿದ ಭಗವದ್ಗೀತೆ ಪ್ರಜೆಗಳಲ್ಲಿ ಪ್ರಚಾರ ಆಗದೆ ಹೋಗುವುದೆಂದು ನಾನು ಅಂದುಕೊಳ್ಳುತ್ತಿದ್ದೇನೆ. ಭಗವದ್ಗೀತಾ ಜ್ಞಾನವನ್ನು ಪಕ್ಕಕ್ಕೆ ಇಟ್ಟು ತಮ್ಮ ತಮ್ಮ ಸ್ವಂತ ಜ್ಞಾನಗಳನ್ನು ಹೇಳುವುದರಿಂದ, ಹಿಂದೂಮತದಲ್ಲಿನವರು ಇತರ ಮತಗಳ ಕಡೆ ಹರಡಿಹೋಗಿದ್ದಾರೆಂದು ತಿಳಿಯುತ್ತದೆ. ಹಿಂದೂಮತವನ್ನು ಕಾಪಾಡುವುದಕ್ಕೆಂದು ನೆಪ ತೋರಿಸಿ ಸ್ವಲ್ಪ ಜನರು ಸ್ವಾಮೀಜಿಯರ ಹೆಸರಿನಲ್ಲಿ ಬೇರೆಬೇರೆ ಪೀಠಗಳನ್ನು ಸ್ಥಾಪಿಸಿ, ಬೇರೆಬೇರೆ ಬೋಧನೆಗಳನ್ನು ಸಾಗಿಸುತ್ತಿದ್ದಾರೆ. ಅವರು ಸ್ಥಾಪಿಸಿದ ಪೀಠದ ಹಿಂದೆ ಯಾವ ಸಿದ್ಧಾಂತವೂ ಇರುವುದಿಲ್ಲ. ಆದರೂ ತನ್ನದೊಂದು ಪ್ರತ್ಯೇಕವಾದ ಪೀಠವೆಂದು ಹೇಳಿಕೊಳ್ಳುತ್ತಾ ತನಗೊಂದು ಪ್ರತ್ಯೇಕ ನಾಮವನ್ನು ಇಟ್ಟುಕೊಳ್ಳುವವರು ತಯಾರಾಗಿದ್ದಾರೆ. ಅಂತಹವರಿಗೆ ಒಂದು ಸಿದ್ಧಾಂತವೆನ್ನುವುದು ಇಲ್ಲದೆ ಹೋಗುವುದರಿಂದ, ಮತವನ್ನು ಆಸರೆ ಮಾಡಿಕೊಂಡು ಸ್ವಮತದಲ್ಲಿ ಅಭಿಮಾನ, ಹೆಸರು ಪ್ರಖ್ಯಾತಿಗಳನ್ನು ಸಂಪಾದಿಸಿಕೊಳ್ಳುವುದಕ್ಕೆ ತನ್ನ ಮತವನ್ನು ಹೊಗಳುತ್ತಾ, ಇತರ ಮತಗಳನ್ನು ದ್ವೇಷಿಸುತ್ತಾ ಇರುತ್ತಾರೆ. ಅದರಿಂದ ಪ್ರಜೆಗಳಲ್ಲಿ ಬೆಂಕಿ ಇಡುವುದೇಯಾಗಲಿ ಜ್ಞಾನವನ್ನು ತಿಳಿಸಿದಹಾಗೆ ಅಲ್ಲ. ಅದ್ವೈತ, ವಿಶಿಷ್ಠಾದ್ವೈತ, ದ್ವೈತ ಸಿದ್ಧಾಂತಗಳು ತಮ್ಮ ಜ್ಞಾನವನ್ನು ತಿಳಿಸುತ್ತಿರುವಾಗ, ಅವರನ್ನು ಅಲ್ಲವೆಂದು ಯಾವ ಸಿದ್ಧಾಂತವೂ

ಆಧಾರವಿಲ್ಲದೇ ಪೀಠಗಳನ್ನು ಏಕೆ ತಯಾರು ಮಾಡಿಕೊಂಡರು? ಶಂಕರಾ ಚಾರ್ಯರವರು, ರಾಮಾನುಜಾಚಾರ್ಯರವರು, ಮಧ್ವಾಚಾರ್ಯರವರು ಆಧ್ಯಾತ್ಮಿಕ ಸಂಬಂಧವಾದ ಹೆಸರುಗಳಿರುವ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಅವರ ಸಿದ್ಧಾಂತಗಳು ಆತ್ಮಗಳ ಸಂಖ್ಯೆ ಮೇಲೆ, ಆಧ್ಯಾತ್ಮಿಕದ ಮೇಲೆ ಆಧಾರಪಟ್ಟಿವೆ. ಅವರನ್ನು ಅವರ ಸಿದ್ಧಾಂತಗಳನ್ನು ಅಲ್ಲಗಳೆದು, ಅವರಿಗಿಂತ ಮೀರಿದ ಜ್ಞಾನ ನಮ್ಮ ಹತ್ತಿರವಿದೆ ಎನ್ನುವ ಹಾಗೆ ಕೆಲವರು ದೇವೀಪೀಠವೆಂದು, ದೇವತಾ ಪೀಠವೆಂದು ದೇವತೆಗಳ ಹೆಸರುಗಳಿಂದಲೂ, ಓಂ ಪೀಠವೆಂದು, ಓಂಕಾರ ಪೀಠವೆಂದು, ಶ್ರೀಂ ಪೀಠವೆಂದು, ಶ್ರೀಂಕಾರ ಪೀಠವೆಂದು ಅಕ್ಷರಗಳ ಹೆಸರುಗಳಿಂದಲೂ, ಬ್ರಹ್ಮಪೀಠ, ಗುರುಪೀಠ, ಜ್ಞಾನ ಪೀಠವೆಂದು ಜ್ಞಾನಿಗಳ ಹೆಸರುಗಳಿಂದಲೂ ಮೊದಲಾದ ಅನೇಕ ಪೀಠಗಳನ್ನು ತಯಾರು ಮಾಡಿದ್ದಾರೆ. ಆ ವಿಧವಾಗಿ ಹೊಸ ಹೊಸ ಪೀಠಗಳಿಂದ ಹಿಂದೂ ಮತ ಸೀಳಿಹೋಗುವುದೂ, ಕ್ಷೀಣಿಸಿ ಹೋಗುವುದೂ ನಡೆಯುತ್ತಿದೆ. 'ದಶಕೋಟಿ ದರಿದ್ರಗಳಿಗೆ ಶತಕೋಟಿ ಶಕುನಗಳೆನ್ನುವಹಾಗೆ' ಪ್ರಸ್ತುತ ಕಾಲದಲ್ಲಿ ಕ್ಷೀಣದಶೆಯಲ್ಲಿರುವ ಹಿಂದೂಮತಕ್ಕೆ ರಾಜಕೀಯವೂ ಜೊತೆಯಾಗಿದೆ. ಪೂರ್ತಿ ವೈದ್ಯ ತಿಳಿಯದ ವೈದ್ಯನು ಹಾವು ಕಡಿತಕ್ಕೆ ಏನು ಕೊಡಬೇಕೆಂದು ವೈದ್ಯ ಗ್ರಂಥವನ್ನು ನೋಡಿದ್ದಾನೆ. ಅದರಲ್ಲಿ ಮತ್ತನ್ನು ಇಳಿಸುವ ಔಷಧಿ ಕೊಡಬೇಕೆಂದು ಬರೆದಿರುವಾಗ, ಅದನ್ನು ನೋಡಿ ಅವನು ಮತ್ತನ್ನುಂಟು ಮಾಡುವ ಔಷಧಿಯನ್ನು ಕೊಟ್ಟಿದ್ದಾನಂತೆ. ಇಪ್ಪ ಕಷಾಯವನ್ನು ಕೊಡಬೇಕೆಂದು ಬರೆದಿದ್ದರೇ ಕಷಾಯವೆಂದರೆ ಅರ್ಥ ತಿಳಿಯದೆ ಇಪ್ಪ ಸಾರಾಯಿ ಕೊಟ್ಟಿದ್ದಾನಂತೆ. ಅದರಿಂದ ಹಾವು ಕಚ್ಚಿಸಿಕೊಂಡವನು ಇನ್ನೂ ಬೇಗ ಸತ್ತುಹೋಗಿದ್ದಾನಂತೆ. ಅದೇ ವಿಧವಾಗಿ ಇಂದಿನ ಹೊಸ ಪೀಠಗಳವರು ಹಿಂದೂತ್ವವನ್ನು ಕಾಪಾಡುತ್ತೇವೆಂದು ಹೇಳಿಕೊಳ್ಳುತ್ತಾ, ತಮ್ಮ ಮತತತ್ತ್ವ ಬೋಧನೆಗಳಿಂದ ಹಿಂದೂತ್ವವನ್ನು ಬೇಗ ಕ್ಷೀಣಿಸುವಹಾಗೆ ಮಾಡುತ್ತಿದ್ದಾರೆ.

ದೇವರು ತನ್ನ ಕಡೆ ಪ್ರಜೆಗಳು ಬರಬೇಕೆಂದು ಭಾರತದೇಶದಲ್ಲಿಯೂ, ಇಜ್ರಯೇಲ್ ದೇಶದಲ್ಲಿಯೂ ಭಗವಂತನ ರೂಪದೊಂದಿಗೆ ಬಂದು ತನ್ನ

ಜ್ಞಾನವನ್ನು ಬೋಧಿಸಿದಾಗ, ಅರಬ್ ದೇಶದಲ್ಲಿ ತನ್ನ ದೂತನಿಂದ ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ಭಾರತ ದೇಶದಲ್ಲಿ ಭಗವದ್ಗೀತೆಯಾಗಿ, ಇಸ್ರಯೇಲ್ ದೇಶದಲ್ಲಿ ಬೈಬಲ್‌ಆಗಿ, ಅರಬ್ ದೇಶದಲ್ಲಿ ಖುರಾನ್ ರೂಪವಾಗಿ ದೇವರ ಜ್ಞಾನ ತಿಳಿದು ಬಂದರೂ, ಆ ಗ್ರಂಥಗಳಲ್ಲಿನ ವಿವರವನ್ನು ಪೂರ್ತಿಯಾಗಿ ತಿಳಿಯದ ಮನುಷ್ಯರು ಮತಗಳಾಗಿ ಸೀಳಿಹೋಗಿದ್ದಾರೆ. ದೇವರನ್ನು ಸಹ ನಿನ್ನ ದೇವರು, ನನ್ನ ದೇವರೆಂದು ಹಂಚಿಕೊಂಡಿದ್ದಾರೆ. ದೇವರು ಹೇಳಿದ ಜ್ಞಾನವನ್ನು ಅರ್ಥ ಮಾಡಿಕೊಳ್ಳದೇ ಹೋಗುವುದಲ್ಲದೇ, ತಾವೇ ದೊಡ್ಡ ಜ್ಞಾನಿಗಳೆಂದು ಭ್ರಮಿಸಿದ್ದಾರೆ. ಮನುಷ್ಯರು ಎಂತಹ ಪರಿಸ್ಥಿತಿಗಳಲ್ಲಿದ್ದಾರೋ ಅವರನ್ನು ಪಾಲಿಸುವ ಭೂತಗಳಿಗೆ, ಗ್ರಹಗಳಿಗೆ ತಿಳಿದಿದೆ. ನಾನು ದೊಡ್ಡ ಜ್ಞಾನಿ ಎಂದು ಅಂದುಕೊಳ್ಳುವ ವ್ಯಕ್ತಿಗಳನ್ನು ಗ್ರಹಗಳು ಗಮನಿಸುತ್ತಾ ಅವರಲ್ಲಿ ಜ್ಞಾನವಿದ್ದರೇ ಜ್ಞಾನಿಯಾಗಿ, ಜ್ಞಾನವಿಲ್ಲದೇ ಹೋದರೆ ಅಜ್ಞಾನಿಯಾಗಿ ಲೆಕ್ಕಿಸಿಕೊಳ್ಳುತ್ತಿದ್ದಾರೆ. ಬಹಳ ಜನರಿಗೆ ತಮ್ಮನ್ನು ಭೂತಗಳು, ಉಪಭೂತಗಳು, ಗ್ರಹಗಳು, ಉಪಗ್ರಹಗಳು ಯಾವಾಗಲೂ ಗಮನಿಸುತ್ತಿವೆಯೆಂದು ತಿಳಿಯದು. ಸೂರ್ಯನು ಭೂಮಿ ಮೇಲೆ ಮೊಟ್ಟಮೊದಲು ಜ್ಞಾನವನ್ನು ಹೇಳಿದಾಗಲೇ ಕೆಲವು ಲಕ್ಷಗಳ ಭೂತಗಳು ಗ್ರಹಗಳು ಜ್ಞಾನವನ್ನು ಕೇಳುವುದು ನಡೆದಿದೆ. ನಂತರ ಅವರಿಂದ ಮತ್ತೆ ಕೆಲವು ಗ್ರಹಗಳು ಭೂತಗಳು ಜ್ಞಾನವನ್ನು ತಿಳಿದುಕೊಳ್ಳುವುದು ನಡೆದಿದೆ. ಈ ವಿಧವಾಗಿ ಖಗೋಳದಲ್ಲಿ ಸೂಕ್ಷ್ಮವಾಗಿ, ಸ್ಥೂಲವಾಗಿರುವ ಕೋಟ್ಯಾದಿ ಗ್ರಹಗಳು ಭೂತಗಳು ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದುಕೊಂಡಿವೆ. ಅವರ ದೃಷ್ಠಿಯಲ್ಲಿ ಯಾವ ಮನುಷ್ಯನಿಗೆ ಎಷ್ಟು ಜ್ಞಾನವಿರುವುದು ಅವರಿಗೆ ತಿಳಿದಿದೆ. ಭೂತಗಳು ಗ್ರಹಗಳಲ್ಲಿ ಕೆಲವರು ದೇವರ ಜ್ಞಾನವನ್ನು ಪ್ರಜೆಗಳಿಗೆ ತಿಳಿಸುವುದು ನಡೆದಿದೆ. ಹಾಗೆ ಅವರು ಹೇಳಿದಾಗ ತಿಳಿದುಕೊಂಡ ಪ್ರಜೆಗಳು ದೊಡ್ಡ ಜ್ಞಾನಿಗಳಾಗಿ ತಯಾರಾಗಿದ್ದಾರೆ. ಪ್ರಜೆಗಳು ನಿಜವಾದ ಜ್ಞಾನಿಗಳನ್ನು ಗುರುತಿಸದೆ ಹೋದರೂ, ಗ್ರಹಗಳು ಭೂತಗಳ

ದೃಷ್ಠಿಯಲ್ಲಿ ಕೆಲವರು ದೊಡ್ಡ ಜ್ಞಾನಿಗಳಾಗಿ ಗುರುತಿಸಲ್ಪದ್ದಾರೆನ್ನುವ ಮಾತನ್ನು ಮರೆಯ ಬಾರದು.

ಭೂಮಿ ಮೇಲೆ ಅಧರ್ಮಗಳು ಹೆಚ್ಚಾಗಿ ಧರ್ಮಗಳು ತಿಳಿಯದೆ ಹೋದಾಗ, ದೇವರು ಭಗವಂತನಾಗಿ ಅವತರಿಸಿ ತನ್ನ ಜ್ಞಾನವನ್ನು ತಿಳಿಸಿ ಹೋಗುವನೆಂದು ಹೇಳಿಕೊಂಡಿದ್ದೇವಲ್ಲವೆ! ಆ ವಿಧವಾಗಿ ದೇವರು ಬಂದು ಹೇಳಿದ ಜ್ಞಾನ ಭೂಮಿ ಮೇಲೆ ಎಲ್ಲಾ ಪ್ರಾಂತಗಳಿಗೂ ಬೇಗ ಸೇರದೇ ಹೋದರೆ, ಯಾವುದೋ ಒಂದು ವಿಧವಾಗಿ ದೇವರು ಹೇಳಿದ ಜ್ಞಾನವನ್ನು ಕೆಲವು ಪ್ರಾಂತಗಳಲ್ಲಿನ ಪ್ರಜೆಗಳಿಗೆ ಕೆಲವು ಗ್ರಹಗಳಾಗಲೀ, ಭೂತಗಳಾಗಲೀ ತಿಳಿಸುತ್ತಿವೆ. ದೈವ ಜ್ಞಾನದ ಮೇಲೆ ಶ್ರದ್ಧೆ ಇರುವವರ ಹತ್ತಿರಕ್ಕೆ ಗ್ರಹಗಳು, ಭೂತಗಳು ಹೇಗೆ ತಿಳಿಸುತ್ತಿರುವುದು ಯಾರಿಗೂ ತಿಳಿಯದು. ನನಗೂ ಸಹ ತಿಳಿಯದು. ಆದರೇ ಅದೃಶ್ಯರೂಪದಲ್ಲಿರುವ ಖಗೋಳದಲ್ಲಿನ ಒಂದು ಗ್ರಹ ಭೂಮಿ ಮೇಲೆಗೆ ಬಂದು ಭಾರತದೇಶದಲ್ಲಿ ಕೃಷ್ಣನು ಹೇಳಿದ ಬೋಧನೆಯಾಗಲೀ, ಇಜ್ರಯೇಲ್ ದೇಶದಲ್ಲಿ ಯೇಸು ಹೇಳಿದ ಬೋಧನೆಯಾಗಲೀ ತಿಳಿಯದ ಸ್ಥಿತಿಯಲ್ಲಿರುವವರಿಗೆ ತಿಳಿಸಬೇಕೆಂದುಕೊಂಡಿದೆ. ಅಂದಿಗೆ ಭಗವದ್ಗೀತೆ ಹೇಳಿ 3600 ವರ್ಷಗಳಾದಾಗ, ಯೇಸು ಜ್ಞಾನವನ್ನು ಹೇಳಿ 600 ವರ್ಷಗಳಾದಾಗ, ದೇವರ ಜ್ಞಾನವೊಂದರ ವಿಷಯ ತಿಳಿಯದ ಅರಬ್ ದೇಶದಲ್ಲಿ, ದೇವರ ಜ್ಞಾನದ ಮೇಲೆ ಶ್ರದ್ಧೆಯಿರುವ ವ್ಯಕ್ತಿಯನ್ನು ಆಯ್ಕೆ ಮಾಡಿಕೊಂಡು ದೇವರ ಜ್ಞಾನವನ್ನು ತಿಳಿಸಬೇಕೆಂದುಕೊಂಡಿದೆ. ಅಂತಹ ಸಮಯದಲ್ಲಿ ಜಿಬ್ರಯೇಲ್ ಎನ್ನುವ ಗ್ರಹ ದೇವದೂತನಾಗಿ ಬಂದು ದೇವರ ಜ್ಞಾನದ ಮೇಲೆ ಶ್ರದ್ಧೆಯಿರುವ ಮಹಮ್ಮದ್‌ನನ್ನು ಆಯ್ಕೆ ಮಾಡಿಕೊಳ್ಳುವುದು, ಆತನಿಗೆ ಜ್ಞಾನವನ್ನು ಹೇಳಿ ಮಹಮ್ಮದ್‌ನನ್ನು ಪ್ರವಕ್ತನನ್ನು ಮಾಡುವುದು ನಡೆದಿದೆ. ಈ ವಿಧವಾಗಿ ಖಗೋಳದಲ್ಲಿನ ಜಿಬ್ರಯೇಲ್ ದೂತ ದೇವರು ಹೇಳಿದಾಗ ಕೇಳಿದ ಜ್ಞಾನವನ್ನು ಮಹಮ್ಮದ್ (ಸಂ) ಪ್ರವಕ್ತನಿಗೆ ತಿಳಿಸಿ ಆತನಿಂದ ಆ ಪ್ರಾಂತದ ಪ್ರಜೆಗಳಿಗೆ ತಿಳಿಯುವಹಾಗೆ ಮಾಡಿದೆ. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ

ಯೋಗವೆನ್ನುವ ಅಧ್ಯಾಯದಲ್ಲಿ 16,17ನೇ ಶ್ಲೋಕಗಳಲ್ಲಿ ಹೇಳಿದ ತ್ರೈತ ಸಿದ್ಧಾಂತವನ್ನು ಜಿಬ್ರಯೇಲ್ ದೂತ ಖುರಾನ್‌ನಲ್ಲಿ 50ನೇ ಸುರಾದಲ್ಲಿ ಬರೆದ 21ನೇ ಅಯತ್‌ನಲ್ಲಿ ಹೇಳಿದ್ದಾನೆ. ಸೂರ್ಯನಿಂದ ಮೊಟ್ಟಮೊದಲು ಭೂಮಿ ಮೇಲೆ ಹೇಳಲ್ಪಟ್ಟ ಜ್ಞಾನವನ್ನೇ ಜಿಬ್ರಯೇಲ್ ದೂತ ಮಹಮ್ಮದ್ (ಸಂ) ಪ್ರವಕ್ತನಿಗೆ ಹೇಳುವುದು ನಡೆದಿದೆ. ಆದ್ದರಿಂದ ಗೀತೆಯಲ್ಲಿ ಹೇಳಿದ ಜ್ಞಾನವೇ ಮುಂದೆ ಹಿಂದೆಯಾಗಿ ಖುರಾನ್ ಗ್ರಂಥದಲ್ಲಿ ಕಾಣಿಸುತ್ತಿದೆ. ಗೀತೆಯಲ್ಲಿ ಹೇಳಿದ ತ್ರೈತ ಸಿದ್ಧಾಂತ ಈಗಿನ ಹಿಂದೂಗಳಿಗೆ ಅರ್ಥವಾಗಲಿಲ್ಲ. ಹಾಗೇ ಖುರಾನ್‌ನಲ್ಲಿ ಹೇಳಿದ ತ್ರೈತಸಿದ್ಧಾಂತ ಮುಸ್ಲೀಮ್‌ರಿಗೆ ಅರ್ಥವಾಗಲಿಲ್ಲ. ದೇವರು ಹೇಳಿದ ತ್ರೈತ ತಿಳಿಯದೆ ಇರುವುದರಿಂದ ಹಿಂದೂಗಳು ನಿರಾಕಾರವನ್ನು ಬಿಟ್ಟು ಹೆಚ್ಚಾಗಿ ಸಾಕಾರವನ್ನು ಹಿಡಿದುಕೊಂಡು ಪೂಜಿಸುತ್ತಿದ್ದಾರೆ. ಹಾಗೇ ಮುಸ್ಲೀಮ್‌ರಿಗೂ ಸಹ ಅವರ ಗ್ರಂಥದಲ್ಲಿನ ತ್ರೈತವನ್ನು ತಿಳಿಯದೆ ಇರುವುದರಿಂದ ನಿರಾಕಾರವನ್ನು ಹಿಡಿದುಕೊಂಡು ಸಾಕಾರವನ್ನು ಇಲ್ಲವೇ ಇಲ್ಲ ಎನ್ನುತ್ತಿದ್ದಾರೆ. ಇಬ್ಬರಿಗೂ ದೇವರು ಮೊದಲು ನಿರಾಕಾರನು ನಂತರ ಸಾಕಾರನು ಎಂದು ತಿಳಿಯದೆ ಹೋಗಿದ್ದಾರೆ. ಇದೇ ವಿಷಯ ಕ್ರೈಸ್ತವರಿಗೂ ಸಹ ಅರ್ಥವಾಗದೇ ಹೋಗಿದೆ. ಆದ್ದರಿಂದ ಅವಶ್ಯಕತೆ ಬಂದಾಗ, ಅಧರ್ಮಗಳು ಹೆಚ್ಚಾದಾಗ, ದೇವರು ಸಾಕಾರ ರೂಪದಲ್ಲಿ ಭಗವಂತನಾಗಿ ಬಂದರೆ, ಈ ಮತಗಳ ಮನುಷ್ಯರೆಲ್ಲರೂ ಆತನು ಹೇಳುವ ಜ್ಞಾನವನ್ನು ಗ್ರಹಿಸಲಾರದೆ ಸಾಟಿ ಮನುಷ್ಯನಾಗಿರುವ ಈತನು ನಮ್ಮ ದೇವರಿಗಿಂತ ದೊಡ್ಡವನಾ? ಎಂದು ಹೇಳನವಾಗಿ ಮಾತನಾಡುವರು. ಸಾಕಾರ ರೂಪದಲ್ಲಿ ಬಂದಿರುವವನು ತಮ್ಮ ಗ್ರಂಥಗಳಲ್ಲಿನ ಜ್ಞಾನಕ್ಕಿಂತಲೂ ದೊಡ್ಡದಾಗಿ ವಿವರಿಸಿ ಹೇಳಿದರೂ ಆತನನ್ನು ಯಾವ ಮಾತ್ರವೂ ದೊಡ್ಡದಾಗಿ ವಿಶ್ವಾಸಿಸುವುದಿಲ್ಲ. ಇದು ಒಂದು ಮತಕ್ಕೆ ಸಂಬಂಧಿಸಿದ ವಿಷಯವಲ್ಲ. ಎಲ್ಲಾ ಮತಗಳಿಗೂ ಸಂಬಂಧಿಸಿದ ವಿಷಯವಾಗಿ ತಿಳಿಯಬೇಕು. ಹಾಗೆ ಮನುಷ್ಯನಾಗಿ ಬಂದಿರುವ ದೇವರನ್ನು ಅವಮಾನಪಡಿಸಿದ ಮನುಷ್ಯರಿದ್ದಾರೆ. ಆದ್ದರಿಂದ ದೇವರು ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆನ್ನುವ ಅಧ್ಯಾಯದಲ್ಲಿ 11ನೇ ಶ್ಲೋಕದಲ್ಲಿ ಹೀಗೆ ಅಂದಿದ್ದಾನೆ.

**శ్లో॥ అవజానన్తి మాం మూఢా మనుషీమ్ తను మాశ్రితమ్।**
**పరం భావ మజానన్తో మమ భూత మహేశ్వరమ్॥**

**భావార్థ :–** "సకల జీవరాశిగళిగూ (మనుష్యరిగూ, భూతగళిగూ, గ్రహగళిగూ) నాను దేవరాగిద్దు, మానవ శరీరవన్ను ధరిసిద నన్నన్ను నోడి మూఢరాద (అజ్ఞానిగళాద) మనుష్యరు నన్నన్ను అవమానిసుత్తిద్దారె." ఎందు దేవరు హేళువుదు నడెదిదె. హాగె మనుష్యరిగె జ్ఞానవన్ను తిళిసువుదక్కె జీవాత్మనాగి, ఆత్మనాగి, పరమాత్మనాగి మూరు విధగళాగిరువ దేవరు, జీవాత్మనాగి మనుష్య ఆకారదల్లి భూమిమేలెగె కెలవు సావిర అథవా లక్షగళ సంవత్సరగళిగె ఒందు బారి బందరె, దేవరు త్రైత సిద్ధాంతవన్ను ఆధార మాడికొండు మూవరాగి ఇద్దానెందు తిళియద మనుష్యరు, అజ్ఞానదింద దేవరన్నూ సహ అవమానిసుత్తిద్దారెందు దేవరే స్వతఃవాగి హేళిద్దానల్ల! దేవరు హేళిద గ్రంథగళల్లిన త్రైత సిద్ధాంతవే అర్థవాగదె ఇద్దాగ, ఎల్లదక్కూ మూల సూత్రవాద త్రైత తిళియదె ఇరువుదరింద, ఉళిద జ్ఞాన తిళియుత్తదెన్నువుదక్కూ సహ అవకాశవిల్ల. ఆద్దరింద తమ్మ తమ్మ మూల గ్రంథగళల్లిన జ్ఞాన యావ మతదవరిగూ సరియాగి గోచరిసలిల్లవెందు, ఆద్దరింద మత బేధగళు మనుష్యరల్లి సేరివెయెందు హేళబహుదు.

యావ మతదల్లాదరూ త్రైత సిద్ధాంతవన్ను ముఖ్యవాగి తిళియబేకెందు దేవరు అదన్ను కురితాద జ్ఞానవన్ను తిళిసిద్దానె. త్రైత సిద్ధాంత జ్ఞాన సూక్ష్మవాగిరువ మూరు ఆత్మగళ రూపవాగి ఇద్దు స్థూలవాద శరీరదల్లి ఇదె. ఆద్దరింద ప్రతి మనుష్య, ప్రతి మతస్థను తన్న శరీరదల్లే మూరు ఆత్మగళ వివరవన్ను తిళియబేకెందు మొదలే హేళికొండిద్దేవె. దేవరు ఎల్లో ఇద్దానెందు అందుకొళ్ళదే పరమాత్మ రూపదల్లి నిన్న శరీరదల్లే సకల సాక్షియాగి ఇద్దానెందు తిళియబేకు.

ಹಾಗೆ ಆತ್ಮ ರೂಪದಲ್ಲಿ ನಿನ್ನ ಶರೀರದಲ್ಲೇ ಇರುತ್ತಾ, ಶರೀರವನ್ನು ಕದಲಿಸಿ ನಡೆಸುತ್ತಿದ್ದಾನೆಂದು ತಿಳಿಯಬೇಕು. ಇನ್ನು ದೇವರಲ್ಲಿನ ಒಂದು ಅಂಶ ಆದ ಜೀವಾತ್ಮ ಸಹ ಶರೀರದಲ್ಲಿ ಕಷ್ಟಸುಖಗಳನ್ನು ಅನುಭವಿಸುವ ಕೆಲಸವನ್ನು ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದಾನೆಂದು ತಿಳಿಯಬೇಕು. ಈ ವಿಧವಾಗಿ ತಮ್ಮ ಶರೀರದಲ್ಲೇ ತ್ರೈತವನ್ನು, ಅದಕ್ಕೆ ಅನುಬಂಧವಾದ ಶರೀರರೂಪದಲ್ಲಿರುವ ಪ್ರಕೃತಿಯನ್ನು ಪ್ರತಿ ಒಬ್ಬರೂ ತಿಳಿಯಬೇಕು. ಅದೇ ನಿಜವಾದ ಜ್ಞಾನ.

ತ್ರೈತ ಎಂದರೆ ಮೂರು ಎಂದು ಎಲ್ಲರಿಗೂ ತಿಳಿದಿದೆ, ಏಕ ಏಕತ್ವ ಎಂದರೆ ಒಂದು ಎಂದು ಸಹ ತಿಳಿದಿದೆ. ದ್ವಿತೀಯವೆಂದರೆ ಎರಡೆಂದು ಸಹಾ ಎಲ್ಲರಿಗೂ ತಿಳಿದಿದೆ. ಅದ್ವಿತೀಯವೆಂದರೆ ಎರಡೂ ಅಲ್ಲದೇ ಮೂರನೆಯದು. ವಿಶ್ವದಲ್ಲಿ ಮೂರು ಆತ್ಮಗಳು ಹೊರತು ಪಡಿಸಿ ಇರುವುದೆಲ್ಲಾ ಪ್ರಕೃತಿಯೇ. ಆದರೇ ಒಂದನೇ ಆತ್ಮಕ್ಕೆ ಜೀವಾತ್ಮ ಎಂದು ಹೆಸರಿದೆ. ಎರಡನೆಯದಕ್ಕೆ ಆತ್ಮ ಎನ್ನುವ ಹೆಸರು ಇದೆ. ಇನ್ನು ಮೂರನೆಯದಾದ ದೇವರಿಗೆ ಅಥವಾ ಪರಮಾತ್ಮನಿಗೆ ಹೆಸರೇ ಇಲ್ಲ. ಮೂರು ಆತ್ಮಗಳ ವಿನಹಾ ಇರುವುದನ್ನು ಪ್ರಕೃತಿಯೆಂದು ಎನ್ನುತ್ತಿದ್ದೇವೆ. ಪ್ರಕೃತಿ ಅನೇಕ ರೂಪಗಳೊಂದಿಗೆ ಅನೇಕ ಹೆಸರುಗಳೊಂದಿಗೆ ಇದೆ. ಕೃತಿ ಎಂದರೆ ಮಾಡಲಾಗಿರುವುದೆಂದು ಅರ್ಥವಾದಾಗ 'ಪ್ರ' ಎಂದರೆ ಮುಖ್ಯವಾದ ಎಂದು ತಿಳಿಯುತ್ತಿದೆ. ಒಟ್ಟು ಪ್ರಕೃತಿಗೆ ಮುಖ್ಯವಾಗಿ ಮಾಡಲ್ಪಟ್ಟಿರುವುದೆಂದು ಅಥವಾ ವಿಶೇಷವಾಗಿ ಮಾಡಲ್ಪಟ್ಟಿರುವುದೆಂದು ಅರ್ಥ ಬರುತ್ತಿದೆ. ವಿಶೇಷತೆಯಿಂದ ಮಾಡಲ್ಪಟ್ಟಿರುವುದು ಪ್ರಕೃತಿ ಆದಾಗ, ಅದನ್ನು ಮಾಡಿದವನು ದೇವರು. ಆದ್ದರಿಂದ ಸರ್ವಕ್ಕೂ ಸೃಷ್ಠಿಕರ್ತ ದೇವರು ಎಂದು ಹೇಳುತ್ತಿದ್ದಾರೆ. ದೇವರು ಆತ್ಮಗಳಲ್ಲಿ ಮೂರನೆ ಆತ್ಮನಾಗಿ ಹೇಳಿದರೂ ಆತನಿಗೆ ಹೆಸರು ಇಲ್ಲ, ಆದ್ದರಿಂದ ಮೂರನೆ ಆತ್ಮನೆಂದು ಆತನನ್ನು ಅನ್ನಬಾರದು. ದೇವರಿಗೆ ದೇವರೆನ್ನುವುದು ಸಹ ಹೆಸರಲ್ಲ. ದೇವರಿಗೆ ಪರಮಾತ್ಮ ಎನ್ನುವುದು ಸಹ ಹೆಸರಲ್ಲ. ದೇವರಿಗೆ ಪುರುಷೋತ್ತಮ ಎನ್ನುವುದು ಸಹ ಹೆಸರಲ್ಲ. ಈ ವಿಧವಾಗಿ ಆತನಿಗೆ ಯಾವ ವಿಧವಾದ ಹೆಸರೂ ಇಲ್ಲ. ದೇವರು ಅಂದರೇ

ಹುಡುಕಬೇಕಾದವನು ಅಥವಾ ದೇವಲ್ಪಡುವವನು ಎಂದು ಅರ್ಥ. ಹಾಗೇ ದೇವರು ಆತ್ಮಗಿಂತ ಪರವಾಗಿ (ಬೇರೆಯಾಗಿ) ಇರುವವನಾದ್ದರಿಂದ ದೇವರನ್ನು ಪರಮಾತ್ಮ ಎಂದು ಅನ್ನುತ್ತಿದ್ದೇವೆ. ದೇವರಿಗೆ ರೂಪ, ನಾಮ, ಕ್ರಿಯೆಗಳು ಇರುವುದಿಲ್ಲ, ಆದ್ದರಿಂದ ಅದೇ ಅರ್ಥ ಬರುವಹಾಗೆ ಆತನನ್ನು ಹೇಳಬೇಕಾಗಿದೆ. ದೇವರು ಆತ್ಮಗಳಲ್ಲಿ ಮೂರನೆಯವನಾದ್ದರಿಂದ ಆತನನ್ನು 'ತ್ರೈತಾ' ಎನ್ನುವ ಶಬ್ದದಿಂದ ಹೇಳಬಹುದು. 'ತ್ರೈತಾ ಎಂದರೆ ಮೂರನೆಯವನು ಎಂದು ನೇರವಾಗಿ ಗುರುತಿಸಿ ಹೇಳಿದಹಾಗಿರುತ್ತದೆ. ದೇವರು ನೇರವಾಗಿ ತಿಳಿಯುವವನಲ್ಲ, ಆದ್ದರಿಂದ ಆತನನ್ನು ಎರಡಕ್ಕಿಂತ ಬೇರೆಯಾಗಿರುವವನೆಂದು ಹೇಳುವುದು ಒಳ್ಳೆಯದೆಂದು 'ದ್ವಾಪರ' ಎಂದು ಅಂದಿದ್ದಾರೆ. ತ್ರೈತಾ ಎಂದರೂ, ದ್ವಾಪರ ಎಂದರೂ ಎರಡೂ ಒಂದೇ ಅರ್ಥವನ್ನು ಕೊಡುತ್ತಿವೆ. ಮೂರನೆ ಆತ್ಮನಾಗಿ ಅಥವಾ ಪರಮಾತ್ಮನಾಗಿರುವ ದೇವರೊಳಗೆ ಜೀವಿಯು ಸೇರಿಹೋದರೆ ಮೋಕ್ಷವಾಗುತ್ತದೆ.

ಯೋಗ ಎಂದರೆ ಸೇರುವುದು ವಿಯೋಗ ಎಂದರೆ ಬೇರೆಯಾಗುವುದು ಎಂದು ಅರ್ಥ ಅಲ್ಲವೆ! ಮೂರನೆ ಆತ್ಮ ಆದ ದೇವರೊಳಗೆ ಸೇರಿಹೋಗೆಂದು ಹೇಳುವುದನ್ನು ತ್ರೈತಾ ಯೋಗವೆಂದು ಅಂದಿದ್ದಾರೆ. ಹಾಗೇ ಎರಡನೆ ಆತ್ಮಗಿಂತ ಬೇರೆಯಾಗಿರುವ ಪರಮಾತ್ಮನೊಳಗೆ ಸೇರಿಹೋಗೆಂದು ಅರ್ಥವನ್ನು ಕೊಡುವ ವಾಕ್ಯ ದ್ವಾಪರ ಯೋಗ ಎಂದು ಇದೆ. ತ್ರೈತಾಯೋಗ, ದ್ವಾಪರಯೋಗ ಎನ್ನುವ ಶಬ್ದಗಳನ್ನು ಪೂರ್ವ ಕಾಲದಲ್ಲಿ ಅಳತೆಯಲ್ಲಿ ವಿನಿಯೋಗಿಸಿದ್ದಾರೆ. ಈದಿನ ಯೋಗ ಎನ್ನುವ ಶಬ್ದ ಸ್ವಲ್ಪ ಬದಲಾಗಿ ಯುಗ ಎಂದು ಕರೆಯಲ್ಪಡುತ್ತಿದೆ. ಹಾಗೆ ಬದಲಾಗಿರುವುದರಿಂದ ತ್ರೈತಾಯೋಗ, ತ್ರೈತಾಯುಗವಾಗಿ, ದ್ವಾಪರ ಯೋಗ ದ್ವಾಪರಯುಗವಾಗಿ ಬದಲಾಗಿವೆ. ಧರ್ಮಗಳು ಅಧರ್ಮಗಳಾಗಿ ಎಷ್ಟು ಸುಲಭವಾಗಿ ಬದಲಾಗಿವೆಯೋ ಈ ಪದಗಳನ್ನು ನೋಡಿದರೆ ಅರ್ಥವಾಗುತ್ತದೆ. ದೇವರಿಗೆ ಮತ್ತೊಂದು ಹೆಸರಾಗಿ ಹೇಳಿದ ತ್ರೈತಾ, ದ್ವಾಪರ ಎನ್ನುವ ಶಬ್ದಗಳಲ್ಲಿ ತ್ರೈತಾ ಎನ್ನುವ ಶಬ್ದ ಸಹ ಸ್ವಲ್ಪ ಬದಲಾಗಿ ತ್ರೇತಾ

ಆಗಿದೆ. ಅದ್ದರಿಂದ ತ್ರೇತಾಯುಗ ಆಗಿದೆ. ಕೊನೆಗೆ ತ್ರೇತಾಯುಗ ಎನ್ನುವ ಮಾತಲ್ಲಿ ಮೂರು ಎನ್ನುವುದು ಇಲ್ಲ, ಅದರೊಳಗೆ ಸೇರಬೇಕೆಂದು ಹೇಳುವ ಯೋಗ ಎನ್ನುವುದು ಇಲ್ಲ. ದೈವದೊಳಗೆ ಸೇರಿಹೋಗೆಂದು ಹೇಳುವ ತ್ರೈತಾ ಯೋಗ ಕೊನೆಗೆ ಅರ್ಥವಿಲ್ಲದ ತ್ರೇತಾ ಯುಗ ಆಗಿದೆ.

ಕೃತ್ ಎಂದರೆ ಮಾಡಿದವನು ಎಂದು ಅರ್ಥ ಕೃತ ಎಂದರೆ ಮಾಡಲಾಗಿರುವುದು ಎಂದು ಪ್ರಕೃತಿಯೆಂದು ಅರ್ಥ. ಕೃತ್ ಎಂದರೆ ಸೃಷ್ಠಿ ಎಲ್ಲವನ್ನು ಮಾಡಿದವನು ಸೃಷ್ಠಿಕರ್ತನೆಂದು, ಆತನೇ ದೇವರೆಂದು ಅರ್ಥ. ಸೃಷ್ಠಿಕರ್ತನಾದ ಅವನೊಳಗೆ ಸೇರಿಹೋಗೆಂದು ಅರ್ಥವನ್ನು ಕೊಡುವುದೇ ಕೃತ್ ಯೋಗ. ಆದರೇ ಆ ಪದವೂ ಸಹ ಬದಲಾವಣೆ ಹೊಂದಿ ಕೃತ ಯುಗ ಎಂದು ಕರೆಯಲಾಗುತ್ತಿದೆ. ಕಲಿ ಎಂದರೆ ನಾಶ ಎಂದು ಅರ್ಥ. ಸರ್ವವನ್ನು ನಾಶ ಮಾಡುವವನು ದೇವರೊಬ್ಬನೇ, ಆದ್ದರಿಂದ ಆತನನ್ನು ಕಲಿ ಪುರುಷನು ಎಂದು ಅನ್ನುತ್ತಾರೆ. ಮೊದಲು ಕೃತ್ ಎನ್ನುವ ಶಬ್ಧದಲ್ಲಿ ತಯಾರಾದ ಯೋಗಗಳ ಹೆಸರುಗಳು (ಯುಗಗಳ ಹೆಸರುಗಳು) ಕೊನೆಯಲ್ಲಿ ಕಲಿ ಎನ್ನುವ ಶಬ್ಧದೊಂದಿಗೆ ಮುಗಿಯುತ್ತಿದೆ. ಕಾಲವನ್ನು ಅಳೆಯುವ ಹೆಸರುಗಳಲ್ಲಿ ವಾರ, ಮಾಸ, ವತ್ಸರ, ಯೋಗ ನಾಲ್ಕು ಭಾಗಗಳು ಮಾಡಿ ಹೇಳುವುದು ನಡೆದಿದೆ. ದಿನಗಳು ಏಳು (7), ಮಾಸಗಳು ಹನ್ನೆರಡು (12), ಸಂವತ್ಸರಗಳು ಅರವತ್ತು (60) ಯೋಗಗಳು ನಾಲ್ಕು (4) ಎಂದು ಕಾಲವನ್ನು ನಾಲ್ಕು ಪರಿಮಾಣಗಳಾಗಿ ಲೆಕ್ಕಿಸುತ್ತಿದ್ದಾರೆ. ಅದರಲ್ಲಿ ಎಲ್ಲದಕ್ಕಿಂತ ದೊಡ್ಡವಾದವು ಯೋಗಗಳು ಅವುಗಳ ಮುಂದೆ ದೇವರ ಪ್ರತೀಕವಾಗಿರುವ ಶಬ್ಧಗಳನ್ನು ಇಡುವುದು ನಡೆದಿದೆ. ದೇವರೊಳಗೆ ನೀನು ಸೇರಿಹೋಗು ಎಂದು ಅರ್ಥವನ್ನು ಕೊಡುವ ಶಬ್ದಗಳೇ ಕೃತ್ ಯೋಗ, ತ್ರೈತಾಯೋಗ, ದ್ವಾಪರ ಯೋಗ, ಕಲಿಯೋಗ ಆದಾಗ, ಯೋಗ ಎನ್ನುವ ಶಬ್ದ ಪೂರ್ತಿಯಾಗಿ ಬದಲಾಗಿ ಯುಗ ಆಗಿದೆ. ದೇವರಿಗೆ ಗುರುತಾಗಿ ಹೇಳಲಾಗುವ ಕೃತ್ ಹೋಗಿ ಕೃತ ಆಗಿದೆ, ತ್ರೈತಾ ಹೋಗಿ ತ್ರೇತಾ ಆಗಿದೆ, ಮೊದಲಿರುವ ಎರಡು ಶಬ್ದಗಳು ಪೂರ್ತಿ ಬದಲಾಗಿ ದ್ವಾಪರ, ಕಲಿ ಎನ್ನುವ

ಎರಡು ಶಬ್ಧಗಳು ಹಾಗೇ ಉಳಿದಿವೆ. ಅವು ಉಳಿದಿರುವುದರಿಂದ ನಾವು ಹೇಳುವ ಮಾತುಗಳು ಸತ್ಯವೆಂದು ನಂಬುವುದಕ್ಕೆ ಸ್ವಲ್ಪ ಅವಕಾಶವಿದೆ. ದ್ವಾಪರ, ಕಲಿ ಎಂಬ ಎರಡು ಶಬ್ದಗಳು ಬದಲಾಗಿದ್ದರೇ ನನ್ನ ಮಾತು ಸತ್ಯವೆನ್ನುವುದಕ್ಕೆ ಎಂತಹ ಆಧಾರವೂ ಇಲ್ಲದೇ ಹೋಗುತ್ತಿತ್ತು.

ಕಾಲ ಪರಿಮಾಣಕ್ಕೆ ಗುರುತಾಗಿಟ್ಟಿರುವ ದೇವರೊಳಗೆ ಸೇರಿಹೋಗು ಎನ್ನುವ ವಾಕ್ಯಗಳು ಹೇಗೆ ಬದಲಾಗಿವೆಯೋ, ಅಷ್ಟು ಸುಲಭವಾಗಿ ಯಾರೂ ಗುತಿರುಸುವುದಕ್ಕೆ ಅವಕಾಶವಿಲ್ಲದೆ ಹೇಗೆ ಬದಲಾಗಿವೆಯೋ ನಿಮಗೆ ಅರ್ಥವಾಗಿದೆ ಅಲ್ಲವೆ! ಅದೇ ವಿಧವಾಗಿ ದೇವರು ಹೇಳಿದ ಧರ್ಮಗಳು ಸಹ ಬಹಳ ಸುಲಭವಾಗಿ, ಯಾರೂ ಗುರುತಿಸದಹಾಗೆ ಬದಲಾಗಿಹೋಗುತ್ತವೆಂದು ಹೇಳುವುದಕ್ಕೆ ನಾಲ್ಕು ಯುಗಗಳ (ಯೋಗಗಳ) ಪದಗಳೇ ನಮಗೆ ಆಧಾರವಾಗಿ ಕಾಣಿಸುತ್ತಿವೆ. ಯೋಗ ಸುಲಭವಾಗಿ ಒಂದು ತಲೆಕಟ್ಟಿನಿಂದ ಯುಗ ಆಗಿಹೋಗಿದೆ. ಹಾಗೇ ಕೃತ್ ಸಹ ಒಂದು ತಲೆಕಟ್ಟಿನಿಂದ ಕೃತ ಆಗಿದೆ, ತ್ರೈತಾ ಎನ್ನುವ ಶಬ್ದದಲ್ಲಿ ತ್ರೈ ಕೆಳಗೆ ಐತ್ವ ಕಾಣಿಸದೆ ಹೋಗಿ ತ್ರೇತಾ ಆಗಿದೆ. ಹಾಗೇ ಇಂದೂ ಎನ್ನುವ ಶಬ್ದ ಸುಲಭವಾಗಿ ಸ್ವರ ವ್ಯಂಜನವಾಗಿ ಬದಲಾಗಿ ಹಿಂದೂ ಆಗಿದೆ. ಅದರಿಂದ ಈದಿನ ನಾವು ಹಿಂದುಗಳಲ್ಲ ಇಂದೂಗಳೆಂದು ಹೇಳಿದರೂ ಕೇಳದ ಸ್ಥಿತಿಯಲ್ಲಿ ಮನುಷ್ಯರು ಬದಲಾಗಿದ್ದಾರೆ. ಮಾಯ ಪ್ರಭಾವದಿಂದ ದೇವರ ಧರ್ಮಗಳು ಅಧರ್ಮಗಳಾಗಿ ಬದಲಾಗುವುದು ನಡೆಯುತ್ತಿದೆ. ಹಾಗೆ ಬದಲಾದ ಧರ್ಮಗಳನ್ನು ಮತ್ತೆ ತಿಳಿಸುವುದು ದೇವರ ಸರದಿಯಾಗಿದೆ. ಇರುವುದು ಇದ್ದಹಾಗೆ ಹೇಳಿದರೆ ಮನುಷ್ಯರಿಗೆ ಜೀರ್ಣವಾಗದು. ಆದ್ದರಿಂದ ಇವು ಅಧರ್ಮಗಳು, ಇವು ಹೀಗೆ ಇರಬಾರದು ಎಂದು ಹೇಳಿದರೆ, ಅಜ್ಞಾನದಲ್ಲಿ ಸಿಲುಕಿಕೊಂಡವರು ಪರಮತವನ್ನು ಬೋಧಿಸುತ್ತಿದ್ದಾರೆನ್ನುವ ನೆಪ ತೋರಿಸಿ ದಾಳಿಗಳಿಗೆ ಪಾಲ್ಗೊಂಡಿದ್ದಾರೆ. ಹಿಂದೂ ಅಲ್ಲ ಎಂದು ಒಂದು ಇಂದೂ ಶಬ್ದವನ್ನು ಹೇಳಿದರೇನೆ ನಮ್ಮನ್ನು ಪರ ಮತದವರೆಂದು ಹೇಳಿದ ಮನುಷ್ಯರ ಸ್ವಭಾವವನ್ನು ಗುರುತಿಸಿದ ಕೃಷ್ಣನು ಬಹಳ ತಿಳುವಳಿಕೆಯಿಂದ, ಯಾವ ಗಲಾಟೆ

ಇಲ್ಲದೆ ತನ್ನ ಜ್ಞಾನವನ್ನು ಅರ್ಜುನನಿಗೆ ಒಬ್ಬನಿಗೆ ಮಾತ್ರವೇ ಹೇಳಿಹೋಗಿದ್ದಾನೆ ಅದೂ ಯಾರು ಕೇಳುವುದಕ್ಕೆ ಅವಕಾಶವಿಲ್ಲದ ಸ್ಥಳದಲ್ಲಿ, ಯಾರೂ ಗುರುತಿಸಲಾರದ ಯುದ್ಧಸಮಯದಲ್ಲಿ ತನಗೆ ಅನುಕೂಲವಾದ ಮನುಷ್ಯನಿಗೆ ಮಾತ್ರ ಹೇಳಿದ್ದಾನೆ. ಅದೇ ಯೇಸು ಪ್ರಜೆಗಳೊಳಗೆ ಹೋಗಿ ದೇವರ ಜ್ಞಾನವಿದು ಎಂದು ಹೇಳಿದರೆ ಅದು ಸರಿಹೋಗದವರು ಅತನನ್ನು ಶಿಲುಬೆ ಮೇಲೆ ಸಾಯಿಸುವುದು ನಡೆದಿದೆ. ಇದೆಲ್ಲವನ್ನು ಗಮನಿಸಿದ ದೇವರು ಮರೆಯಲ್ಲಿ ಒಬ್ಬರಿಗೆ ಹೇಳಿದ ಭಗವದ್ಗೀತಾ ಜ್ಞಾನ ಮೂರು ಸಾವಿರ ವರ್ಷಗಳಾದರೂ ಹೊರಗೆ ಬಾರದೆ ಇರುವುದರಿಂದ, ಎರಡು ಸಾವಿರ ವರ್ಷಗಳ ಕೆಳಗೆ ಪ್ರತ್ಯಕ್ಷವಾಗಿ ಹೇಳಿ ಮನುಷ್ಯರೊಂದಿಗೆ ಹಿಂಸಿಸಲ್ಪಟ್ಟಿದ್ದಾನೆ. ನಂತರ ತಾನು ಮರೆಯಲ್ಲಿ ಹೇಳಿದರೂ, ಪ್ರತ್ಯಕ್ಷವಾಗಿ ಹೇಳಿದರೂ ತೊಂದರೆ ಉಂಟಾಗುತ್ತಿದೆಯೆಂದು ತನ್ನ ದೂತ ಆದ ಜಿಬ್ರಯೇಲ್ ನೊಂದಿಗೆ ಜ್ಞಾನವನ್ನು ಹೇಳಿಸಿದ್ದಾನೆ. ಆದರೆ ಹೇಳಿದ ಜ್ಞಾನ ಪ್ರಜೆಗಳೊಳಗೆ ಹೋದರೂ, ಅದು ಬೇರೆ ಅರ್ಥದೊಂದಿಗೆ ಕೂಡಿಕೊಂಡು ಬೇರೆ ವಿಧಾನವನ್ನು ಆಚರಿಸುವುದರಿಂದ ಮೂರನೆ ಬಾರಿ ದೇವರೇ ಬಂದು ಹೇಳಬೇಕಾಗಿದೆ. ಈ ಬಾರಿ ಆತನು ಭಗವಂತನಾಗಿ ಭೂಮಿ ಮೇಲೆಗೆ ಬಂದರೆ ತನ್ನ ಜ್ಞಾನವನ್ನು ಹೇಗೆ ಪ್ರಜೆಗಳಿಗೆ ಹೇಳುವನೋ ಕಾದು ನೋಡಬೇಕು.

ದೇವರು ಎರಡು ಬಾರಿ ಭಗವಂತನ ರೂಪದಲ್ಲಿ ಪ್ರತ್ಯಕ್ಷವಾಗಿ, ಒಂದು ಬಾರಿ ತನ್ನ ದೂತನಿಂದ ಪರೋಕ್ಷವಾಗಿ ತಿಳಿಸಿದ ಜ್ಞಾನ ಅರ್ಥಹೀನವಾಗಿ, ಭಾವರಹಿತ ಆಚರಣೆಗಳಾಗಿ ಬದಲಾಗಿದೆಯೆಂದು ಹೇಳಿಕೊಂಡಿದ್ದೇವೆ. ಆದರೂ ಕೆಲವರು ನಾವು ಜ್ಞಾನಿಗಳು, ಸ್ವಾಮಿಗಳು, ಪೀಠಾಧಿಪತಿಗಳು ಎನ್ನುವವರು ನಮ್ಮ ಮಾತುಗಳನ್ನು ಒಪ್ಪಿಕೊಳ್ಳುತ್ತಿಲ್ಲ. ಕೆಲವರಿಗೆ ನಮ್ಮ ಮಾತುಗಳು ಸತ್ಯವೆಂದು ತಿಳಿದರೂ, ಮತ್ತೆ ಕೆಲವರು ತೀವ್ರವಾದ ಅಭ್ಯಂತರಗಳು ತಿಳಿಸುತ್ತಿದ್ದಾರೆ. ದೇವರ ಜ್ಞಾನದ ಪ್ರಕಾರ ನಾವು ಆಚರಣೆ ಹೊಂದಿದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ಅಂತಹವರು ಹೇಗೆ ಮಾಯೆ ಕೈಯಲ್ಲಿ ಮೋಸಹೋಗುತ್ತಿದ್ದಾರೋ ತ್ರೈತ

ಸಿದ್ಧಾಂತ ತಿಳಿದವರಿಗೆ ಮಾತ್ರ ತಿಳಿಯುತ್ತಿದೆ. ಭೂಮಿ ಮೇಲೆ ಯಾವ ಅಜ್ಞಾನವಾದರೂ, ಯಾವ ರೂಪದಲ್ಲಿದ್ದರೂ, ತ್ರೈತ ಸಿದ್ಧಾಂತ ತಿಳಿದವರಿಗೆ ಅದು ಧರ್ಮವೋ ಅಧರ್ಮವೋ, ಜ್ಞಾನವೋ ಅಜ್ಞಾನವೋ ಯಾವುದಾಗಿರುವುದು ತಿಳಿದು ಹೋಗುವುದು. ನಮ್ಮದು ಜ್ಞಾನ ಎನ್ನುವ ಭಾವದಿಂದ ಮನುಷ್ಯರಲ್ಲಿ ದೊಡ್ಡ ದೊಡ್ಡ ಜ್ಞಾನಿಗಳಾಗಿ ಇರುವವರೇ ಮಾಯೆ ಕೈಯಲ್ಲಿ ಹೇಗೆ ಮೋಸ ಹೋಗುತ್ತಿದ್ದಾರೋ, ತ್ರೈತ ಸಿದ್ಧಾಂತ ಜ್ಞಾನದಿಂದ ಅಧರ್ಮಗಳು ಹೇಗೆ ಹೊರಬೀಳಬಹುದೋ ಉದಹರಿಸುತ್ತಾ ಕೊನೆಯದಾಗಿ ಒಂದು ವಿಷಯವನ್ನು ಹೇಳಿಕೊಳ್ಳೋಣ. ಈಗ ಒಂದು ಧರ್ಮವನ್ನು ತ್ರೈತ ಸಿದ್ಧಾಂತ ಭಗವದ್ಗೀತೆಯಿಂದ ತೆಗೆದುಕೊಂಡು ಅದೇ ಧರ್ಮವೇ ಹೊರಗೆ ಪ್ರಪಂಚದಲ್ಲಿ ಇಂದೂ ಹಿಂದೂ ವಾಗಿ, ಕೃತ್ ಕೃತವಾಗಿ, ತ್ರೈತಾ ತ್ರೇತಾವಾಗಿ, ಯೋಗ ಯುಗವಾಗಿ ಹೇಗೆ ಬದಲಾವಣೆ ಹೊಂದಿವೆಯೋ ಹಾಗೇ ಗುರುತಿಸಲಾರದ ವಿಧವಾಗಿ ಧರ್ಮ ಹೇಗೆ ಅಧರ್ಮವಾಗಿ ಬದಲಾಗಿದೆಯೋ ವಿವರಿಸಿಕೊಳ್ಳೋಣ. ಈಗ ನಾವು ಹೇಳುವ ವಿಷಯ ಪ್ರಜೆಗಳನ್ನು ಜ್ಞಾನಿಗಳಾಗಿ ಮಾಡುವುದಕ್ಕೇ ಹೇಳುತ್ತಿದ್ದೇವಾಗಲಿ, ಯಾರನ್ನೂ ಹೀಯಾಳಿಸುವುದಕ್ಕಾಗಲಿ ಮತ್ತು ಯಾವ ಇತರ ಭಾವಗಳಿಂದಾಗಲಿ ಹೇಳುತ್ತಿಲ್ಲವೆಂದು ಗ್ರಹಿಸಬೇಕು.

ಭಗವದ್ಗೀತೆಯಲ್ಲಿನ ಜ್ಞಾನ ಬಹಳ ದೊಡ್ಡದು, ಏಕೆಂದರೆ ಅದು ದೇವರು ಹೇಳಿದ ಜ್ಞಾನವಾದ್ದರಿಂದ ಅದು ಯಾವ ಭಾಷೆಯಲ್ಲಿದ್ದರೂ, ಯಾವ ಹೆಸರಿಂದ ಕರೆಯುತ್ತಿದ್ದರೂ, ಯಾವ ದೇಶದಲ್ಲಿದ್ದರೂ, ಯಾವ ಮತ ಗ್ರಂಥವಾಗಿ ಕರೆಯುತ್ತಿದ್ದರೂ ದೇವರ ಜ್ಞಾನ ದೇವರ ಜ್ಞಾನವೇ ಅದಕ್ಕೆ ಸಾಟಿ ಯಾವ ಮನುಷ್ಯರು ಹೇಳಿರುವುದು ಬರುವುದಿಲ್ಲ. ಭಗವದ್ಗೀತೆಯಲ್ಲಿ ಆತ್ಮ ಸಂಯಮ ಯೋಗ ಎನ್ನುವ ಅಧ್ಯಾಯದಲ್ಲಿ ಮೊಟ್ಟ ಮೊದಲನೆಯ ಶ್ಲೋಕ ಹೀಗೆ ಇದೆ.

***ಶ್ಲೋ॥ ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿಯಃ ।***
***ಸಸನ್ಯಾಸೀಚ ಯೋಗೀಚ ನನಿರಗ್ನಿ ರ್ನಚಾಕ್ರಿಯಃ ॥***

**ಭಾವಾರ್ಥ :–** "ಕರ್ಮಫಲವನ್ನು ಆಶ್ರಯಿಸದೆ ಕಾರ್ಯಗಳನ್ನು ಮಾಡಬೇಕೆಂದು

ತಿಳಿದು ಯಾರು ಮಾಡುವರೋ, ಅವನೇ ನಿಜವಾದ ಸನ್ಯಾಸಿ, ನಿಜವಾದ ಯೋಗಿ. ಅಗ್ನಿ ಇಲ್ಲದವನು, ಕೆಲಸಗಳನ್ನು ಮಾಡದವನು ಸನ್ಯಾಸಿ ಅಲ್ಲ, ಯೋಗಿ ಅಲ್ಲ." ಎಂದು ದೇವರು ಹೇಳಿದ್ದಾನೆ. ಈ ಶ್ಲೋಕದಲ್ಲಿ ಸಸನ್ಯಾಸಿ ಎಂದು ಇದೆಯಲ್ಲ! ಅದಕ್ಕೆ ಒಳ್ಳೆ ಸನ್ಯಾಸಿ ಅಥವಾ ನಿಜವಾದ ಸನ್ಯಾಸಿ ಎಂದು ಅರ್ಥವಿದೆ. ಸನ್ಯಾಸೀಚ, ಯೋಗೀಚ ಎಂದು ಸನ್ಯಾಸಿಗೂ ಯೋಗಿಗೂ ಎರಡು ಪದಗಳಿಗೂ ಮೊದಲು "ಸ" ಎನ್ನುವ ಅಕ್ಷರವನ್ನು ಬಳಸುವುದರಿಂದ "ಸ" ಅನ್ನುವ ವಿಶೇಷ ಎರಡು ಪದಗಳಿಗು ಅನ್ವಯಿಸುತ್ತಿದೆ. ಆದ್ದರಿಂದ ಬಿಡಿಸಿ ಹೇಳಿದರೇ ಸಸನ್ಯಾಸೀಚ, ಸಯೋಗೀಚ ಎಂದು ಹೇಳಬಹುದು. ಸಸನ್ಯಾಸಿ ಎಂದರೆ ಒಳ್ಳೆ ಸನ್ಯಾಸಿ ಅಥವಾ ನಿಜವಾದ ಸನ್ಯಾಸಿ ಎಂದೂ, ಸಯೋಗಿ ಎಂದರೆ ಒಳ್ಳೆ ಯೋಗಿ ಅಥವಾ ನಿಜವಾದ ಯೋಗಿ ಎಂದೂ ಹೇಳಬಹುದು. ಇಲ್ಲಿ ಈ ಶ್ಲೋಕದಲ್ಲಿ ಸನ್ಯಾಸಿ, ಯೋಗಿ ಎಂದು ಎರಡು ಪದಗಳನ್ನು ಬಳಸಿರುವುದರಿಂದ ಸನ್ಯಾಸಿ ಬೇರೆ ಯೋಗಿ ಬೇರೆ ಎಂದು ಕೆಲವರಂದು ಕೊಳ್ಳುವುದಕ್ಕೆ ಅವಕಾಶವಿದೆ. ಆದರೇ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಯೋಗಿ ಎಂದರೂ, ಸನ್ಯಾಸಿ ಎಂದರೂ ಎರಡು ಹೆಸರುಗಳು ಒಂದೇ ವ್ಯಕ್ತಿಗೆ ಅನ್ವಯಿಸುವುದು. ಆದ್ದರಿಂದ ಯಾವನು ಸನ್ಯಾಸಿ ಎಂದು ಕರೆಯ ಲಾಗುವನೋ ಅವನೇ ಯೋಗಿ, ಹಾಗೆ ಯಾರನ್ನು ಯೋಗಿ ಎಂದು ಅನ್ನಲಾಗುತ್ತದೊ ಅವನೇ ಸನ್ಯಾಸಿ ಎಂದು ತಿಳಿಯಬೇಕು.

ನಿಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಮತ್ತೊಂದು ವಿಧವಾಗಿ ಹೇಳಬಹುದು ನೋಡಿ. ಸನ್ಯಾಸಿ ಎಂದರೆ ಬಿಡಿಸಿಕೊಳ್ಳುವವನೆಂದು ಅರ್ಥ. ಕರ್ಮವನ್ನು ಬಿಡಿಸಿಕೊಳ್ಳುವವನು, ಕರ್ಮವನ್ನು ಅಂಟದವನು, ಕರ್ಮವನ್ನು ಅಂಟಿಸಿಕೊಳ್ಳದವನು ಸನ್ಯಾಸಿಯೆಂದು ಹೇಳಬಹುದು. ಹಾಗೇ ಯೋಗಿ ಎಂದರೆ ಸೇರಿಹೋಗುವವನೆಂದು ಅರ್ಥ. ಸನ್ಯಾಸಿ ಕರ್ಮವನ್ನು ಬಿಡಿಸಿಕೊಳ್ಳುವವನು ಆದಾಗ, ಯೋಗಿ ಪರಮಾತ್ಮನೊಳಗೆ ಸೇರಿಹೋಗುವವನು. ಕರ್ಮವನ್ನು ಇಲ್ಲದಂತೆ ಕರ್ಮವನ್ನು ಅಂಟಿಸಿಕೊಳ್ಳದಂತೆ ಮಾಡಿಕೊಳ್ಳುವ ಸನ್ಯಾಸಿ ಕೊನೆಗೆ

ದೇವರಲ್ಲಿ ಐಕ್ಯವಾಗಿಹೋಗುವನು. ಹಾಗೇ ಪರಮಾತ್ಮ ಅಥವಾ ದೇವರಲ್ಲಿ ಸೇರಿಹೋಗಬೇಕೆಂದು ಪ್ರಯತ್ನವನ್ನು ಮಾಡುವವನು ಯೋಗಿ ಆಗುತ್ತಾನೆ. ಯೋಗಿ ಆದವನು ಕೊನೆಗೆ ದೇವರಲ್ಲಿ ಐಕ್ಯವಾಗುವನು. ಈ ವಿಧವಾಗಿ ಎಲ್ಲಾ ವಿಧಗಳಲ್ಲಿ ಯೋಗಿ ಸನ್ಯಾಸಿ ಇಬ್ಬರೂ ಒಂದೇ ಎಂದು ಹೇಳುತ್ತಿದ್ದೇವೆ. ಈ ಶ್ಲೋಕದಲ್ಲಿ ಕರ್ಮಫಲಗಳನ್ನು ಆಶ್ರಯಿಸದೆ ಕಾರ್ಯಗಳನ್ನು ಮಾಡುವ ವನನ್ನು ಎಂದು ಒಂದೇ ವ್ಯಕ್ತಿಯನ್ನು ತೋರಿಸಿ ಆತನನ್ನು ನಿಜವಾದ ಸನ್ಯಾಸಿ ನಿಜವಾದ ಯೋಗಿ ಎಂದು ಅನ್ನುತ್ತಿದ್ದಾರೆಂದು ಹೇಳುವುದು ನಡೆದಿದೆ.

ಶ್ಲೋಕದಲ್ಲಿ ಮೊದಲನೆ ವಾಕ್ಯದಲ್ಲಿ "ಕರ್ಮಫಲಮ್" ಅನ್ನುವ ಒಂದು ಪದವೂ, "ಕಾರ್ಯಮ್" ಎನ್ನುವ ಮತ್ತೊಂದು ಪದವನ್ನೂ, ವಿನಿಯೋಗಿಸಿ ಹೇಳುವುದೇ ಅಲ್ಲದೇ ವಾಕ್ಯದ ಕೊನೆಯಲ್ಲಿ "ಕರ್ಮಕರೋತಿಯಃ" ಎಂದು ಮೂರನೆ ಪದವನ್ನು ಸಹ ಉಪಯೋಗಿಸಿದ್ದಾರೆ. ಈಗ ಈ ಮೂರು ಪದಗಳಿಗೂ ಅರ್ಥವನ್ನು ತಿಳಿದುಕೊಳ್ಳೋಣ. ಇವುಗಳ ಅರ್ಥ ತಿಳಿದುಕೊಳ್ಳುವ ಮೊದಲು ಮನುಷ್ಯ ಶರೀರದಲ್ಲಿರುವ ವಿಧಾನವನ್ನು ತಿಳಿದುಕೊಳ್ಳೋಣ. ಹಾಗೆ ತಿಳಿದುಕೊಳ್ಳುವುದರಿಂದ ಈ ಮೂರು ಪದಗಳಿಗೂ ಅರ್ಥ ಸುಲಭವಾಗಿ ಗ್ರಹಿಸಬಹುದು. ಒಬ್ಬ ಮನುಷ್ಯ ಒಳ್ಳೆಯ ಪ್ರವರ್ತನೆಯನ್ನು ಹೊಂದಿರಬೇಕೆಂದು, ದೇವರ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು, ಇತರರ ದೃಷ್ಠಿಯಲ್ಲಿ ಯಾವ ಕೆಟ್ಟದೂ ತನ್ನೊಳಗೆ ಕಾಣಿಸಬಾರದೆಂದು ಎಲ್ಲಾ ವಿಧಗಳಲ್ಲಿ ಒಳ್ಳೆಯ ನಡುವಳಿ ಕೆಯೊಂದಿಗೆ ಇರಬೇಕೆಂದು ಅಂದುಕೊಂಡಿದ್ದಾನೆ. ಅಂದಿನಿಂದ ಆಧ್ಯಾತ್ಮಿಕ ಗ್ರಂಥಪಠನವನ್ನು ಮಾಡುತ್ತಾ, ಎಲ್ಲೂ ಅಸತ್ಯವನ್ನೂ ಹೇಳದೇ, ಅನ್ಯಾಯವಾಗಿ ಪ್ರವರ್ತಿಸದೇ ಎಲ್ಲರ ದೃಷ್ಠಿಯಲ್ಲಿ ಸಜ್ಜನನಾಗಿ ಹೆಸರು ಹೊಂದಿದ್ದಾನೆ. ಆದರೇ ಆ ವ್ಯಕ್ತಿ ಮಾಡುವ ವ್ಯಾಪಾರದಲ್ಲಿ ಕೆಲವರು ಸ್ತ್ರೀಯರು ಭಾಗಸ್ವಾಮಿಗಳಾಗಿ ಇರುವುದರಿಂದ ಅವರೊಂದಿಗೆ ಆಗಾಗ ಭೇಟಿಯಾಗಿ ಮಾತನಾಡಬೇಕಾಗಿ ಬರುತ್ತಿದೆ. ಹಾಗೆ ಬರುವ ಅವರಲ್ಲಿ ಒಬ್ಬ ಸ್ತ್ರೀಯನ್ನು ನೋಡಿದ ಕೂಡಲೇ ಆತನಿಗೆ ಆಕೆಯ ಮೇಲೆ ಆಸೆ ಎನ್ನುವ ಗುಣ ಉಂಟಾಗುತ್ತದೆ. ಅದು

ಒಳ್ಳೆಯದಲ್ಲವೆಂದು ಅನೇಕ ಬಾರಿ ಆತನು ಅಂದು ಕೊಳ್ಳುವುದು ನಡೆದಿದೆ. ಕೊನೆಗೆ ಸ್ವಲ್ಪ ಕಾಲ ಕಳೆದ ನಂತರ ಈತನಿಗೆ ಯಾರ ಮೇಲೆ ಆಸೆ ಉಂಟಾಗುತ್ತಿದೆಯೋ, ಹಾಗೇ ಆಕೆಗೂ ಸಹ ಆತನ ಮೇಲೆ ಆಸೆ ಉಂಟಾಗುವುದು ಪ್ರಾರಂಭವಾಗಿದೆ. ಇಬ್ಬರಲ್ಲಿನ ಗುಣಗಳು ಅನೇಕಬಾರಿ ಪ್ರೇರೇಪಿಸಿದಾಗ, ಒಂದು ಬಾರಿ ಇಬ್ಬರೂ ಒಂದಾಗುವುದು ನಡೆದಿದೆ. ಹಾಗೆ ಅವರು ತಮ್ಮ ಆಸೆ ಎನ್ನುವ ಗುಣದಿಂದ ಅನೇಕಬಾರಿ ಸೇರುವುದು ನಡೆದಿದೆ. ಸತ್‌ಪ್ರವರ್ತನೆ ಹೊಂದಿರಬೇಕೆಂದು ಎಲ್ಲಾ ವಿಧಗಳಲ್ಲಿ ಒಳ್ಳೆಯದಾಗಿ ಪ್ರವರ್ತಿಸುವ ಆ ವ್ಯಕ್ತಿ ಒಂದು ವಿಷಯದಲ್ಲಿ ಮೋಸಹೋಗಿದ್ದೇನೆಂದು ಅಂದುಕೊಳ್ಳುವುದು ನಡೆದಿದೆ. ಇನ್ನು ಆಕೆಯೊಂದಿಗೆ ಸಂಬಂಧವನ್ನು ಇಟ್ಟುಕೊಳ್ಳಬಾರದೆಂದು ಅಂದುಕೊಂಡಿದ್ದಾನೆ. ಹಾಗೆ ಅಂದುಕೊಂಡ ಮೂರನೆ ದಿನವೇ ಆಕೆಯೊಂದಿಗೆ ಮತ್ತೆ ಸೇರುವುದು ನಡೆದಿದೆ. ನಂತರ ಮರುದಿನ ತಾನು ಅಕ್ರಮವಾದ ಕೆಲಸವನ್ನು ಮಾಡುತ್ತಿದ್ದೇನೆಂದು, ತಾನು ಅಂದುಕೊಂಡಿರುವುದಕ್ಕೂ ನಡೆದುಕೊಂಡಿ ರುವುದಕ್ಕೂ ಎಷ್ಟೋ ವ್ಯತ್ಯಾಸ ಇದೆಯೆಂದು, ಇನ್ನು ಹಾಗೆ ಇರಬಾರದೆಂದು ಅಂದುಕೊಳ್ಳುವುದೇ ಅಲ್ಲದೇ ಇನ್ನು ಎಂದಿಗೂ ಆಕೆಯೊಂದಿಗೆ ಸಂಬಂಧ ಇಟ್ಟುಕೊಳ್ಳುವುದಿಲ್ಲವೆಂದು ಪ್ರತಿಜ್ಞೆ ಮಾಡಿಕೊಂಡಿದ್ದಾನೆ. ಆದರೂ ಮರುದಿನವೇ ಆಕೆ ಬರುವುದೂ, ಆಕೆಯೊಂದಿಗೆ ಮಾತನಾಡುವುದೂ ತನ್ನ ಉದ್ದೇಶ ಪ್ರತಿಜ್ಞೆ ಎರಡೂ ಅಡ್ಡ ಬಾರದೆ ಹೋಗಿ ಆಕೆಯೊಂದಿಗೆ ಸೇರುವುದು ನಡೆದಿದೆ. ನಂತರ ಮರುದಿನ ನಡೆದ ಕೆಲಸದಿಂದ ಎಚ್ಚರಗೊಂಡು, ನಾನು ಬೇಡೆಂದು ಕೊಂಡರೂ ಆ ಸಮಯಕ್ಕೆ ಎಲ್ಲವನ್ನೂ ಮರೆತುಹೋಗಿ ಆ ಸಮಯಕ್ಕೆ ಅದೇ ಮುಖ್ಯವಾದ ಕಾರ್ಯವೆನ್ನುವಹಾಗೆ ಏಕೆ ಮಾಡುತ್ತಿದ್ದೇನೆ? ಎಂದು ಚಿಂತಿಸಿ ಹಾಗೆ ತಾನು ಪ್ರವರ್ತಿಸಿದಕ್ಕೆ ತನ್ನನ್ನು ತಾನು ಬೈದುಕೊಂಡಿದ್ದಾನೆ. ನನಗೆ ಬುದ್ಧಿ ಇಲ್ಲವೆಂದು, ನಾನು ಮನುಷ್ಯನೇ ಅಲ್ಲ ಮೃಗನೆಂದು, ನೀಚಾತಿ ನೀಚವಾಗಿ ಬೈದುಕೊಳ್ಳುವುದು ನಡೆದಿದೆ.

ಹಾಗೆ ಕಾಲ ಕಳೆಯುತ್ತಿರುವಾಗ ತಾನು ಬೇಡೆಂದುಕೊಂಡ ಕಾರ್ಯ ನಡೆಯುವುದು ನೋಡಿ, ತಾನು ಎಲ್ಲಾ ವಿಧಗಳಲ್ಲಿ ಚೆನ್ನಾಗೇ ಇದ್ದರೂ ಒಂದೇ ಒಂದು ಪರಿಸ್ಥಿತಿಯಲ್ಲಿ, ಒಬ್ಬ ವ್ಯಕ್ತಿ ಹತ್ತಿರ ಏಕೆ ಅಷ್ಟು ಬಲಹೀನವಾಗಿ ಬದಲಾಗುತ್ತಿದ್ದೇನೋ ಎಂದು ಆಲೋಚಿಸಿ, ಆಲೋಚಿಸಿ ಕೊನೆಗೆ ಆಲೋಚಿಸುವುದನ್ನೇ ಬಿಟ್ಟಿದ್ದಾನೆ. ಆ ವಿಷಯ ತನ್ನ ಕೈಲಾಗದೆ ಒಬ್ಬ ಗುರುವಿನ ಹತ್ತಿರಕ್ಕೆ ಬಂದು ಹೀಗೆ ಹೇಳಿದ್ದಾನೆ.

**ವ್ಯಕ್ತಿ :–** ಸ್ವಾಮೀ ನೀವು ಜ್ಞಾನವನ್ನು ತಿಳಿದ ಗುರುಗಳು. ನಾನು ಬೇಡವೆಂದುಕೊಂಡ ಕೆಲಸವನ್ನು ನನಗೆ ತಿಳಿದೇ ಮಾಡುತ್ತಿದ್ದೇನೆ. ನಾನು ನೂರು ಬಾರಿ ಬೇಡವೆಂದುಕೊಂಡರೂ, ಮಾಡುವುದಿಲ್ಲ ಎಂದುಕೊಂಡರೂ, ಮತ್ತೆ ಬೇಡವೆಂದುಕೊಂಡ ಕೆಲಸವನ್ನೇ ಮಾಡುತ್ತಿದ್ದೇನೆ. ಇದಕ್ಕೆ ಕಾರಣವೇನು? ನನ್ನಲ್ಲಿ ಯಾವ ಲೋಪವಿದೆ. ನಾನು ಜ್ಞಾನವನ್ನು ತಿಳಿದರೂ, ಪೂಜೆಗಳು ಮಾಡಿದರೂ, ಎಲ್ಲಾ ವಿಧಗಳಲ್ಲಿ ಸತ್ ಪ್ರವರ್ತನೆಯನ್ನು ಹೊಂದಿದ್ದರೂ, ಒಂದೇ ಒಂದು ವಿಷಯದಲ್ಲಿ ಏಕೆ ಸೋತುಹೋಗುತ್ತಿದ್ದೇನೆ? ನನ್ನ ಉದ್ದೇಶ ಏನಾಗಿ ಹೋಗುತ್ತಿದೆ?

**ಗುರು :–** ಇದರಲ್ಲಿ ನಿನ್ನ ತಪ್ಪು ಏನೂ ಇಲ್ಲ. ಅಸಲು ವಿಷಯ ಅರ್ಥವಾಗಬೇಕೆಂದರೆ ಸ್ವಲ್ಪವಾದರೂ ಜ್ಞಾನವಿರಬೇಕು. ಹಾಗಾದರೇನೆ ಅರ್ಥವಾಗುತ್ತದೆ.

**ವ್ಯಕ್ತಿ :–** ನಾನು ಸ್ವಲ್ಪ ಜ್ಞಾನವನ್ನು ಸಹ ತಿಳಿದುಕೊಂಡಿದ್ದೇನೆ. ಆದರೂ ಜ್ಞಾನ ಸ್ವಲ್ಪ ಮಾತ್ರವೂ ಸಹ ಅಡ್ಡ ಬರಲಿಲ್ಲ.

**ಗುರು :–** ಮನೆ ಎಂದರೆ ಮಾಳಿಗೆ ಆಗಬಹುದು, ಮಹಡಿ ಆಗಬಹುದು, ಗುಡಿಸಲು ಆಗಬಹುದು. ಹಾಗೇ ಜ್ಞಾನದಲ್ಲಿ ಸಹ ಎಷ್ಟೋ ವಿಧಗಳು ಇವೆ. ಜ್ಞಾನದಲ್ಲಿ ಕರ್ಮವನ್ನು ಕಳೆಯುವ ಜ್ಞಾನವಾಗಬಹುದು, ಕರ್ಮವನ್ನು ಅಂಟಿಸುವ ಜ್ಞಾನವು ಆಗಬಹುದು. ನೀನು ಕಲಿತಿರುವುದು ಯಾವ ಜ್ಞಾನವೋ? ಅದ್ವೈತ ಜ್ಞಾನವಾ, ದ್ವೈತ ಜ್ಞಾನವಾ, ತ್ರೈತ ಜ್ಞಾನವಾ? ಯಾವುದು?

**ವ್ಯಕ್ತಿ :–** ಹೋಟಲ್‌ನಲ್ಲಿ ಪೂರಿ, ಇಡ್ಲಿ, ದೋಸೆ ಎನ್ನುವ ಟಿಫಿನ್‌ಗಳು ಇದ್ದಹಾಗೆ ಜ್ಞಾನವೂ ಸಹ ವಿವಿಧ ವಿಧಗಳಿರುತ್ತದಾ! ಸ್ವಾಮೀ!

**ಗುರು :–** ಹೌದು ಜೀವನದಲ್ಲಿನ ಸಮಸ್ಯೆಗಳಿಗೆ ಎಲ್ಲದಕ್ಕೂ ಸಮಾಧಾನ ಸಿಗಬೇಕೆಂದರೆ ಒಂದೇ ಒಂದು ತ್ರೈತ ಸಿದ್ಧಾಂತ ಜ್ಞಾನದಲ್ಲಿ ಮಾತ್ರ ದೊರಕುತ್ತದೆ.

**ವ್ಯಕ್ತಿ :–** ತ್ರೈತ ಕ್ರೈಸ್ತವರ ಜ್ಞಾನವಲ್ಲವೇ! ಅದು ನಮಗೇಕೆ? ಹಿಂದುಗಳ ಜ್ಞಾನ ವಿದ್ದರೆ ಹೇಳಿ ಸ್ವಾಮೀ?

**ಗುರುವು :–** ತ್ರೈತ ಸಿದ್ಧಾಂತ ಜ್ಞಾನ ಯಾವ ಒಂದು ಮತಕ್ಕೆ ಸಂಬಂಧಿಸಿರುವುದು ಅಲ್ಲ. ಅದು ಯಾರಿಗೂ ತಿಳಿಯದೆ ಎಲ್ಲಾ ಮತಗಳಲ್ಲಿಯೂ ಇದೆ. ನೀನು ಕ್ರೈಸ್ತವರದು ಅಂದುಕೊಂಡರೆ ಅದರಲ್ಲಿ ತ್ರೈತಸಿದ್ಧಾಂತವನ್ನು ಕುರಿತು ಯಾರಿಗೂ ತಿಳಿಯದು. ಆದ್ದರಿಂದ ಇದು ನಮ್ಮ ಜ್ಞಾನ ಅಲ್ಲ ಎನ್ನುತ್ತಿದ್ದಾರೆ. ಒಂದುವೇಳೆ ನೀನು ಮುಸ್ಲೀಮ್‌ರ ಜ್ಞಾನವೆಂದುಕೊಂಡರೆ ಅವರಿಗೂ ಸಹ ಈ ತ್ರೈತ ಸಿದ್ಧಾಂತವೆಂದರೆ ಏನೋ ತಿಳಿಯದು. ಆದ್ದರಿಂದ ಅವರೂ ಸಹ ಇದು ನಮ್ಮ ಜ್ಞಾನ ಅಲ್ಲ ಎನ್ನುತ್ತಾರೆ. ಇನ್ನು ಇದನ್ನು ನೀನು ಹಿಂದೂಗಳ ಜ್ಞಾನವೆಂದುಕೊಂಡರೂ, ಹಿಂದೂಗಳು ಸಹ ಇದು ಪರಮತ ಜ್ಞಾನ ನಮ್ಮ ಜ್ಞಾನವಲ್ಲವೆಂದು ನಮ್ಮೊಂದಿಗೆ ಬಹಳ ಸಾರಿ ವಾದಿಸಿದ್ದಾರೆ. ಆದ್ದರಿಂದ ಹಿಂದೂಗಳು ಸಹ ತ್ರೈತ ಸಿದ್ಧಾಂತವನ್ನು ನಮ್ಮ ಜ್ಞಾನವೆಂದು ಒಪ್ಪಿಕೊಳ್ಳುತ್ತಿಲ್ಲ. ನೀನು ಹಿಂದೂವೇ, ನಾನು ಹಿಂದೂವೇ, ನಿನಗೆ ಬೇಕಾಗಿರುವುದು ನಿನ್ನ ಸಮಸ್ಯೆಗೆ ಉತ್ತರ. ಅದು ಯಾವ ಜ್ಞಾನವಾದರೆ ನಿನಗೇಕೆ? ದೇವರ ಜ್ಞಾನ ಒಂದೇ ನಿನ್ನ ಸಮಸ್ಯೆಗೆ ಉತ್ತರ ಹೇಳಬಲ್ಲದು. ಜಾಗ್ರತೆಯಿಂದ ಕೇಳು. ಭಗವದ್ಗೀತೆ ಆತ್ಮ ಸಂಯಮ ಯೋಗದಲ್ಲಿ ಮೊದಲನೆಯ ಶ್ಲೋಕದಲ್ಲಿ ಮೊದಲನೆ ವಾಕ್ಯದಲ್ಲಿಯೇ ಮುಖ್ಯವಾಗಿ ಮೂರು ಪದಗಳು ಇವೆ. ಅದರಲ್ಲಿ ಒಂದು ಕರ್ಮಫಲಮ್, ಎರಡನೆಯದು ಕಾರ್ಯಮ್, ಮೂರನೆಯದು ಕರ್ಮ ಕರೋತಿಯಃ ಎಂದು ಇವೆ. ಇವುಗಳ ಅರ್ಥಗಳನ್ನು ತಿಳಿದುಕೊಂಡರೆ

ಕಾರ್ಯಮ್ ಎಂದರೆ ನಾವು ಮಾಡುತ್ತಿರುವ ಕೆಲಸ ಎಂದು ಅರ್ಥ, ಅದು ಯಾವ ಕೆಲಸವಾದರೂ ಆಗಬಹುದು. ಸಂದರ್ಭಾನುಸಾರ ನೀನು ಮಾಡಿದ ಕೆಲಸವನ್ನೇ ಕಾರ್ಯಮ್ ಎಂದು ಅಂದಿದ್ದಾರೆಂದುಕೋ. ಕರ್ಮಫಲಮ್ ಎಂದರೆ ಕೆಲಸ ಮಾಡಿದಾಗ ಬಂದಿರುವ ಫಲಿತ ಎಂದು ತಿಳಿಯಬೇಕು. ಇನ್ನು ಕೊನೆಯದು ಕರ್ಮಕರೋತಿ ಎಂದರೆ ವಿವರ ಹೇಳಿಕೊಂಡರೆ "ಕರೋ" ಎನ್ನುವ ಶಬ್ದಕ್ಕೆ ಹಿಂದಿಯಲ್ಲಿಯೂ, ಉರ್ದೂದಲ್ಲಿಯೂ ಸಂಸ್ಕೃತದಲ್ಲಿಯೂ ಮಾಡು ಎಂದು ಅರ್ಥ. ಕರೋತಿ ಎಂದರೆ ಮಾಡಿಸುವುದು ಎಂದು ಅರ್ಥ. ಕರ್ಮಕರೋತಿ ಎಂದರೆ! ಮಾಡಿಸುವ ಕರ್ಮ ಎಂದು ಅರ್ಥ. ಕಾರ್ಯ ಎಂದರೆ ನೀನು ಮಾಡಿದ್ದೇನೆ ಅಂದುಕೊಂಡಿರು ವುದು. ಕರ್ಮ ಕರೋತಿ ಎಂದರೆ ಕರ್ಮ ಮಾಡಿಸುವುದು, ಕರ್ಮಫಲಮ್ ಎಂದರೆ ನೀನು ಮಾಡಿದ್ದೇನೆ ಅಂದುಕೊಂಡ ಕೆಲಸದಲ್ಲಿ ಬಂದಿರುವ ಫಲಿತ ಪಾಪ. ಈಗಲೂ ಸಹ ನಿನಗೆ ಸರಿಯಾಗಿ ಅರ್ಥವಾಗಿರುವುದಿಲ್ಲ. ನಿನಗೆ ಅರ್ಥವಾಗುವುದಕ್ಕೆ ವಿಪುಲವಾಗಿ ಹೇಳುತ್ತೇನೆ ಕೇಳು.

ಪ್ರತಿ ಮನುಷ್ಯನ ಶರೀರದಲ್ಲಿ ತಲೆಯಲ್ಲಿ ಜೀವಾತ್ಮನಿದ್ದಾನೆ. ಮೂಲ ಮೇಲೆ ಇದೆಯೆಂದು ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿಯೋಗವೆಂಬ ಅಧ್ಯಾಯದಲ್ಲಿ ಮೊಟ್ಟಮೊದಲ ಶ್ಲೋಕದಲ್ಲಿ ಹೇಳಿದಹಾಗೆ, ಮನುಷ್ಯ ತಲೆಯಲ್ಲಿ ಮಧ್ಯ ಭಾಗದಲ್ಲಿ ಭೃಕುಟಿಗೆ ಸಮತಲದಲ್ಲಿ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳೆನ್ನುವ ನಾಲ್ಕು ಚಕ್ರಗಳ ಸಮುದಾಯವಿದೆ. ಅದರಲ್ಲಿ ಕೆಳಗಿನ ಚಕ್ರವಾದ ಗುಣ ಚಕ್ರ ಮೂರು ಭಾಗಗಳಾಗಿ ಇರುವಾಗ, ಅದರಲ್ಲಿ ಯಾವುದೋ ಒಂದು ಭಾಗದಲ್ಲಿ ಜೀವಾತ್ಮ ನಿವಾಸಿಸುತ್ತಿದ್ದಾನೆ. ಜೀವಿಯು ದುಂಡಾದ ಆಕಾರವಿರುವ ಶೂನ್ಯವಾಗಿ ಇರುವಾಗ, ಅದನ್ನು ಸುತ್ತಿಕೊಂಡು ಒಂದು ಪೊರೆಯಂತೆ ಬುದ್ಧಿ ಇರುತ್ತದೆ. ಬುದ್ಧಿ ನಂತರ ಚಿತ್ತವೆಂಬ ಪೊರೆ ಇರುತ್ತದೆ. ಚಿತ್ತ ನಂತರ ಅಹಂ ಎನ್ನುವ ಪೊರೆ ಇರುತ್ತದೆ. ಬ್ರಹ್ಮ, ಕಾಲ, ಕರ್ಮ, ಗುಣ ನಾಲ್ಕು ಚಕ್ರಗಳ ಆಕಾರವನ್ನು ಮತ್ತು ಜೀವಾತ್ಮನ ಆಕಾರವನ್ನು ಕೆಳಗಿನ ಚಿತ್ರಗಳಲ್ಲಿ ನೋಡಬಹುದು.

ಗುಣಚಕ್ರದಲ್ಲಿ ಜೀವಾತ್ಮನಿರುವಾಗ, ಅದರ ಮೇಲಿರುವ ಕರ್ಮಚಕ್ರದಲ್ಲಿ ಪ್ರಾರಬ್ಧ, ಅಗಾಮಿ, ಸಂಚಿತ ಎನ್ನುವ ಮೂರು ಕರ್ಮಗಳಿರುತ್ತವೆ. ಅದರ ಮೇಲಿನ ಕಾಲಚಕ್ರದಲ್ಲಿ ಕೆಳಗಿನ ಚಕ್ರದಲ್ಲಿನ ಪ್ರಾರಬ್ಧಕರ್ಮವನ್ನು ಆ ಕೆಳಗಿನ ಚಕ್ರದಲ್ಲಿನ ಜೀವಾತ್ಮ ಯಾವಾಗ ಅನುಭವಿಸಬೇಕೆನ್ನುವ ಕಾಲ ನಿರ್ಣಯವಿರುತ್ತದೆ. ಗುಣಚಕ್ರದಲ್ಲಿನ ಜೀವಾತ್ಮನು ಮಾತ್ರ ಪ್ರಾರಬ್ಧದಲ್ಲಿನ ಪಾಪ ಪುಣ್ಯಗಳನ್ನು ನಿತ್ಯವೂ ಅನುಭವಿಸುತ್ತಿರುವನು. ಇದು ಶರೀರದಲ್ಲಿನ ಚಕ್ರಗಳ ಯಂತ್ರಾಂಗ. ಇನ್ನೂ ಶರೀರದಲ್ಲಿನ ಯಂತ್ರಾಂಗವೇನೆಂದರೇ! ಶರೀರಕ್ಕೆ ಹೊರಗಿರುವ




**ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳು**




**ಜೀವಾತ್ಮನ ಆಕಾರ**

ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮ ಎನ್ನುವ ಐದು ಭಾಗಗಳು ಒದಗಿಸುವ ಸಮಾಚಾರವನ್ನು ಆ ಅವಯವಗಳವರೆಗಿರುವ ಮನಸ್ಸು ತೆಗೆದುಕೊಂಡು ಒಳಗೆ ತಲೆಯಲ್ಲಿ ಗುಣಚಕ್ರದಲ್ಲಿನ ಜೀವಾತ್ಮನ ಹತ್ತಿರವಿರುವ ಬುದ್ಧಿಯವರೆಗು ಸೇರಿಸುತ್ತದೆ. ಹೊರಗಿನ ಜ್ಞಾನೇಂದ್ರಿಯಗಳಿಂದ ಮನಸ್ಸು ತಂದಿರುವ ಸಮಾಚಾರವನ್ನು ಬುದ್ಧಿ ಗ್ರಹಿಸಿ, ಮನಸ್ಸು ತಂದಿರುವ ವಿಷಯ ಗುಣಗಳಲ್ಲಿ ಯಾವ ಗುಣಕ್ಕೆ ಸಂಬಂಧಿಸಿರುವುದೋ ಆ ಗುಣದೊಂದಿಗೆ ಆಲೋಚಿಸುತ್ತದೆ. ಬುದ್ಧಿ ಗುಣದೊಂದಿಗೆ ಆಲೋಚಿಸಿದಾಗ ಬಂದಿರುವ ಆಲೋಚನೆಗಳಲ್ಲಿ ಯಾವುದು ಸರಿಯಾದದ್ದೋ ಅದನ್ನು ಚಿತ್ತ ನಿರ್ಣಯಿಸುತ್ತದೆ. ಜೀವಾತ್ಮ ಹತ್ತಿರ ಬುದ್ಧಿಯ ಪಕ್ಕದಲ್ಲೇ ಇರುವ ಪೊರೆ ಚಿತ್ತ. ಆದ್ದರಿಂದ ಅಲ್ಲಿ ನಡೆಯುವ ಸಮಾಚಾರವೆಲ್ಲವೂ ಬುದ್ಧಿ ಒಂದಕ್ಕೇ ಅಲ್ಲದೆ ಜೀವಾತ್ಮನಿಗೂ, ಚಿತ್ತಕ್ಕೂ, ಅಹಂಗೂ ತಿಳಿಯುತ್ತಿರುತ್ತದೆ. ಗುಣಗಳನ್ನು ಕದಲಿಸಿ ಆಲೋಚಿಸಿದ ಬುದ್ಧಿ, ಚಿತ್ತ ನಿರ್ಣಯಿಸಿದ ನಿರ್ಣಯವನ್ನು ಮತ್ತೆ ಮನಸ್ಸಿಗೆ ತಿಳಿಸಿದಾಗ, ಮನಸ್ಸು ಆ ಸಮಾಚಾರವನ್ನು ಶರೀರದ ಹೊರಗಿರುವ ಕರ್ಮೇಂದ್ರಿಯಗಳಿಗೆ ಸೇರಿಸುತ್ತದೆ. ಇಲ್ಲಿ ಬುದ್ಧಿ ಆಲೋಚಿಸಿದ ಗುಣಗಳನ್ನು ಚಿತ್ತ ಸ್ವತಃವಾಗಿ ನಿರ್ಣಯಿಸುವುದಿಲ್ಲ. ಮೇಲಿನ ಕರ್ಮ ಚಕ್ರದಲ್ಲಿನ ಪ್ರಾರಬ್ಧಕರ್ಮವನ್ನು ಅನುಸರಿಸಿ ಚಿತ್ತ ನಿರ್ಣಯಿಸುತ್ತದೆ. ಈ ವಿಧವಾಗಿ ಹೊರಗಿನ ಜ್ಞಾನೇಂದ್ರಿಯಗಳಿಂದ ಬಂದಿರುವ ಸಮಾಚಾರ ಮನಸ್ಸುನಿಂದ ಬುದ್ಧಿಗೆ ಸೇರಿ, ಅಲ್ಲಿ ತತಂಗವೆಲ್ಲವೂ ನಡೆದ ನಂತರ ಚಿತ್ತ ನಿರ್ಣಯಿಸಿದ ಸಮಾಚಾರವನ್ನು ಮನಸ್ಸು ಹೊರಗಿನ ಕರ್ಮೇಂದ್ರಿಯಗಳಿಗೆ ಸೇರಿಸಿದಾಗ, ಒಳಗಿನಿಂದ ಬಂದಿರುವ ಆಜ್ಞೆಯ ಪ್ರಕಾರ ಕರ್ಮೇಂದ್ರಿಯಗಳಾದ ಕಾಲುಗಳು, ಕೈಗಳು, ಬಾಯಿ ಕೆಲಸ ಮಾಡುತ್ತಿವೆ. ಕರ್ಮೇಂದ್ರಿಯಗಳು ಕೆಲಸ ಮಾಡಿದಾಗ ಬರುವ ಸುಖವಾಗಲೀ, ದುಃಖವಾಗಲೀ ಮನಸ್ಸಿನಿಂದ ಬುದ್ಧಿಗೆ, ಬುದ್ಧಿಯಿಂದ ಜೀವಾತ್ಮನಿಗೆ ಸೇರಿದಾಗ ಜೀವಾತ್ಮನು ಅನುಭವಿಸುತ್ತಿದ್ದಾನೆ. ಶರೀರದಲ್ಲಿ 24 ಭಾಗಗಳು ಒಂದೊಂದು ಒಂದೊಂದು ಕೆಲಸವನ್ನು ಮಾಡುತ್ತಿರುವಾಗ, 25ನೇ ಭಾಗವಾದ ಜೀವಾತ್ಮ ಕೇವಲ ಕಷ್ಟ ಸುಖಗಳನ್ನು ಸುಖಃ ದುಃಖಗಳ ರೂಪದಲ್ಲಿ ಅನುಭವಿಸುತ್ತಿದ್ದಾನೆ.

ಇದು ಶರೀರದಲ್ಲಿ ದೇವರು ಇಟ್ಟ ಯಂತ್ರಾಂಗ. ಇದನ್ನು ಯಾವ ಮನುಷ್ಯನಾಗಲೀ, ಯಾವ ಜ್ಞಾನಿಯಾಗಲಿ, ಯಾವ ಸ್ವಾಮೀಜಿಯಾಗಲಿ, ಯಾವ ಮತಸ್ಥನಾಗಲೀ ಅಲ್ಲವೆನ್ನುವುದಕ್ಕೆ ಅವಕಾಶವಿಲ್ಲ. ಹೊರಗೆ ಜ್ಞಾನೇಂದ್ರಿಯ ಗಳು ಮತ್ತು ಕರ್ಮೇಂದ್ರಿಯಗಳಾದ ಹತ್ತು ಭಾಗಗಳಿಗೂ ಒಳಗೆ 13 ಭಾಗಗಳಿಗೂ ಮನಸ್ಸು ಮಧ್ಯವರ್ತಿಯಂತೆ ಕೆಲಸ ಮಾಡುತ್ತಿದೆ. ಮನಸ್ಸು ಒದಗಿಸಿದ ಸಮಾಚಾರ ನೇರವಾಗಿ ಬುದ್ಧಿಗೆ ಸೇರಿದಾಗ ಅಲ್ಲಿರುವ ಜೀವಾತ್ಮನಿಗೆ, ಚಿತ್ತಕ್ಕೆ, ಅಹಂಗೆ ಆ ಸಮಾಚಾರ ತಿಳಿದು ಹೋಗುತ್ತಿದೆ. ಬುದ್ಧಿ ಗುಣಗಳೊಂದಿಗೆ ಆಲೋಚಿಸಿದ ವಿಧಾನ, ಗುಣಗಳು ಒದಗಿಸಿದ ಆಲೋಚನೆಗಳು, ಚಿತ್ತ ನಿರ್ಣಯಿಸಿದ ವಿಷಯ ಮನಸ್ಸು ಹೊರಗೆ ತೆಗೆದುಕೊಂಡು ಹೋದ ಸಮಾಚಾರ, ಹೊರಗೆ ಶರೀರ ಮಾಡಿದ ಕೆಲಸ, ಒಟ್ಟು ತತಂಗವೆಲ್ಲವೂ ನಡೆದಾಗ ಒಳಗೆ ಜೀವಾತ್ಮನ ಪಕ್ಕದಲ್ಲಿರುವ ಅಹಂ ಇವೆಲ್ಲವೂ ನೀನೇ ಮಾಡಿದ್ದೀಯ ಎಂದು ಹೇಳುತ್ತಿದೆ. ಒಳಗೆ ಜೀವಾತ್ಮನು ಒಂದು ಕಡೆ ಬುದ್ಧಿಯೊಂದಿಗೆ, ಒಂದು ಕಡೆ ಅಹಂ ಯೊಂದಿಗೂ ಸಂಬಂಧವನ್ನು ಇಟ್ಟುಕೊಂಡು ಇರುವುದರಿಂದ, ಬುದ್ಧಿಯಿಂದ ಸಮಾಚಾರ ಸುಖ ದುಃಖ ತಿಳಿಯುತ್ತಿದೆ. ಇನ್ನು ಅಹಂ ಮಾತ್ರ ಜೀವಾತ್ಮನನ್ನು ಪೂರ್ತಿಯಾಗಿ ಮೋಸಮಾಡಿ ಶರೀರವೇ ನೀನು, ಶರೀರದಲ್ಲಿ ನಡೆದ ಕಾರ್ಯಗಳೆಲ್ಲವೂ ನೀನೇ ಮಾಡುತ್ತಿದ್ದೀಯೆಂದು, ದುರ್ಯೋಧನನಿಗೆ ಶಕುನಿ ಒಳ್ಳೆಯದನ್ನು ಬೋಧಿಸಿದಹಾಗೆ ನಟಿಸುತ್ತಾ ಕೆಟ್ಟದ್ದನ್ನು ಬೋಧಿಸಿ ಕೆಟ್ಟದಾರಿಯನ್ನು ಹಿಡಿಸಿದ ಹಾಗೆ ಜೀವಾತ್ಮನಿಗೆ ಒಳ್ಳೆಯದಾಗಿ ಹೇಳುತ್ತಾ ಕೆಟ್ಟ ದಾರಿಯನ್ನು ಹಿಡಿಸುತ್ತಿದೆ. ಆಗ ಜೀವಾತ್ಮನು ಅಹಂವೊಂದರ ಮಾತುಗಳಿಗೆ ಹೆಚ್ಚು ಆಕರ್ಷಿತನಾಗಿ, ಶರೀರದಲ್ಲಿ ಎಲ್ಲಾ ಭಾಗಗಳು ಮಾಡಿದ ಕೆಲಸಗಳನ್ನು ತಾನೇ ಮಾಡಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಶರೀರದಲ್ಲಿನ ಮೂರು ಆತ್ಮಗಳಲ್ಲಿ ಜೀವಿಯು (ಜೀವಾತ್ಮ) ಶರೀರದಲ್ಲಿ ಒಂದು ಕಡೆ ಇದ್ದು ಅನುಭವಗಳನ್ನು ಅನುಭವಿಸುವುದು ಹೊರತು ಏನೂ ಮಾಡುತ್ತಿಲ್ಲ. ಶರೀರದಲ್ಲಿ ಒಂದು ಕಡೆ ಇರುವ ಜೀವಾತ್ಮ ಪಾಪ ಪುಣ್ಯಗಳನ್ನು ಪ್ರಾರಬ್ಧಕರ್ಮಗಳನ್ನು ಅನುಭವಿಸುವವನು ಮಾತ್ರ ಆದಾಗ, ಎರಡನೆ ಆತ್ಮ ಶರೀರವೆಲ್ಲಾ ವ್ಯಾಪಿಸಿದ್ದು ಶರೀರದಲ್ಲಿನ

ಹೊರಗಿನ ಇಂದ್ರಿಯಗಳಿಗೂ, ಒಳಗಿನ ಇಂದ್ರಿಯಗಳಿಗೂ ಮಧ್ಯವರ್ತಿ ಆದ ಮನಸ್ಸಿಗೂ, ಅಂತಃಕರಣಗಳೆನ್ನುವ ಜೀವಾತ್ಮನಿಗೂ, ಬುದ್ಧಿಗೂ ಚಿತ್ತಕ್ಕೂ, ಅಹಂ ಗೂ ಎಲ್ಲದಕ್ಕೂ ಚೈತನ್ಯಶಕ್ತಿ ಕೊಟ್ಟು ಕದಲಿಸಿ ಕೆಲಸ ಮಾಡಿಸುತ್ತಿದೆ. ಶರೀರದಲ್ಲಿ ಹೊರಗಿನ ಸಮಾಚಾರ ಒಳಕ್ಕೆ, ಒಳಗಿನ ಸಮಾಚಾರವನ್ನು ಹೊರಕ್ಕೆ ಸೇರಿಸುವುದಕ್ಕೆ, ಒಳಗೆ ಮನಸ್ಸು ಬುದ್ಧಿ ಚಿತ್ತ, ಅಹಂ ಕೆಲಸ ಮಾಡುವುದಕ್ಕೆ ಶಕ್ತಿಯನ್ನು ಆತ್ಮವೇ ಕೊಟ್ಟು ಅವುಗಳಿಂದ ಕೆಲಸ ಮಾಡಿಸುತ್ತಿದೆ. ಭೂಮಿ ಮೇಲೆ ಯಾವ ಸಮಾಜದಲ್ಲಿನ ಮನುಷ್ಯನಿಗಾಗಲಿ, ರಾಜನಿಗಾಗಲಿ, ಮಂತ್ರಿಗಾಗಲಿ, ಯಾವ ಮತಸ್ಥನಿಗಾದರೂ ಅವನ ಶರೀರದಲ್ಲಿ ಎಲ್ಲಾ ಭಾಗಗಳನ್ನು ಆತ್ಮವೇ ಕೆಲಸ ಮಾಡಿಸುತ್ತಿದೆ. ಶರೀರವೆಲ್ಲದಕ್ಕೂ ಶಕ್ತಿಯನ್ನು ಕೊಡುತ್ತಿರುವುದು ಆತ್ಮನೇಯೆಂದು ತಿಳಿಯಬೇಕು. ಶರೀರವೆಲ್ಲದಕ್ಕೂ ಅಧಿಕಾರಿ, ಅಧಿಪತಿ ಆತ್ಮನೇ. ಆತ್ಮ ಮನುಷ್ಯ ಹುಟ್ಟಿದಾಗಿನಿಂದ ಮರಣಿಸುವವರೆಗೂ ಶರೀರವೆಲ್ಲಾ ವ್ಯಾಪಿಸಿಕೊಂಡಿದೆ. ಆತ್ಮ ಮಾಡಿಸಿದರೇ ಶರೀರದಲ್ಲಿ ಕೆಲಸ ನಡೆಯುತ್ತಿದೆ. ಆತ್ಮ ಕದಲಿಸಿದರೇ ಶರೀರ ಕದಲುತ್ತಿದೆ.

ಮೂರು ಆತ್ಮಗಳಲ್ಲಿ ಮೊದಲನೆಯವನಾದ ಜೀವಾತ್ಮನು ಶರೀರದಲ್ಲಿ ಒಂದು ಕಡೆ ಇದ್ದು ಸುಖದುಃಖಗಳನ್ನು ಮಾತ್ರ ಅನುಭವಿಸುತ್ತಿದ್ದಾನೆ. ಇನ್ನು ಎರಡನೆಯದಾದ ಆತ್ಮ ಶರೀರವೆಲ್ಲಾ ವ್ಯಾಪಿಸಿದ್ದು ಶರೀರದಲ್ಲಿನ ಎಲ್ಲಾ ಭಾಗಗಳಿಂದ ಕೆಲಸವನ್ನು ಮಾಡಿಸುತ್ತಿದೆ. ಶರೀರದಲ್ಲಿನ ಸಣ್ಣ ಕದಲಿಕೆಯಾಗಲೀ ಆತ್ಮನಿಂದಲೇ ನಡೆಯುತ್ತಿದೆ. ತ್ರೈತದಲ್ಲಿ ಎರಡು ಆತ್ಮಗಳ ವಿವರ ಶರೀರದಲ್ಲಿ ಹೇಗೆ ಇರುವುದು ತಿಳಿದುಹೋಗಿದೆ. ನಂತರ ಮೂರನೆ ಆತ್ಮವಾದ ಪರಮಾತ್ಮ ವಿಷಯವನ್ನು ಗಮನಿಸಿದರೆ ದೇವರು ಹೇಳಿದ ಸಮಾಚಾರದ ಪ್ರಕಾರ ಪರಮಾತ್ಮ ಶರೀರದಲ್ಲಿ ನಡೆಯುವ ಕೆಲಸಗಳೆಲ್ಲವುಗಳಿಗೂ, ಜೀವಾತ್ಮ ಅನುಭವಿಸುವ ಅನುಭವಗಳೆಲ್ಲವುಗಳಿಗೂ, ಆತ್ಮ ಮಾಡಿಸುವ ಕಾರ್ಯಗಳೆಲ್ಲವುಗಳಿಗೂ, ಒಟ್ಟು ಶರೀರದಲ್ಲಿನ 26 ಭಾಗಗಳನ್ನು ಯಾವಾಗಲೂ ನೋಡುತ್ತಾ ಸಾಕ್ಷಿಯಾಗಿ ನಿಂತಿದೆ. ಪರಮಾತ್ಮ ಎಂತಹ ಪರಿಸ್ಥಿತಿಗಳಲ್ಲೂ ಏನೂ ಮಾಡದೇ ಎಲ್ಲದಕ್ಕೂ

ಸಾಕ್ಷಿಯಾಗಿ ಮಾತ್ರವಿದೆ. ತ್ರೈತ ಸಿದ್ಧಾಂತದ ಪ್ರಕಾರ ಜೀವಾತ್ಮ ಶರೀರದಲ್ಲಿ ಒಂದು ಕಡೆ ರವೆಯಷ್ಟು ಮಾತ್ರ ಇರುವಾಗ, ಆತ್ಮ ಶರೀರವೆಲ್ಲಾ ವ್ಯಾಪಿಸಿರುವಾಗ, ಪರಮಾತ್ಮ ಶರೀರದ ಒಳಗೂ ಶರೀರದ ಹೊರಗೂ ಅಣುಅಣುವಿನಲ್ಲೂ ವ್ಯಾಪಿಸಿಕೊಂಡಿದೆ. ಶರೀರವೆಲ್ಲಾ ಇದ್ದು ಶರೀರವನ್ನು ದಾಟದೇ ಆತ್ಮ ಇರುವಾಗ, ಪರಮಾತ್ಮ ಮಾತ್ರ ಎಲ್ಲಾ ಶರೀರಗಳಲ್ಲಿಯೂ ಇದ್ದೂ ಹೊರಗೆ ಭೂಮಿಯಲ್ಲಿ, ನೀರಿನಲ್ಲಿ, ಗಾಳಿಯಲ್ಲಿ, ಅಗ್ನಿಯಲ್ಲಿ, ಆಕಾಶದಲ್ಲಿ ಅಣುಅಣುವಿನಲ್ಲಿ ವ್ಯಾಪಿಸಿ ಕೊಂಡಿದೆ. ಖಗೋಳದಲ್ಲಿ ಸೂರ್ಯಮಂಡಲ ನಕ್ಷತ್ರಮಂಡಲ ಇನ್ನೂ ಎಲ್ಲೆ (ಮೇರೆ) ಎನ್ನುವುದು ಇಲ್ಲದೇ ಪರಮಾತ್ಮ ವ್ಯಾಪಿಸಿದೆ. ಪರಮಾತ್ಮ, ಆತ್ಮ, ಜೀವಾತ್ಮ, ಸೂಕ್ಷ್ಮಗಳು ಆಗಿರುವುದರಿಂದ ಯಾರಿಗೂ ಕಾಣಿಸುವುದಿಲ್ಲ.

ಮೂರು ಆತ್ಮಗಳಲ್ಲಿ ಪರಮಾತ್ಮನಿಗೆ ಎಂದರೆ ದೇವರಿಗೆ ಎಲ್ಲೆಗಳಿಲ್ಲ. ಆತ್ಮಕ್ಕೆ ಮಾತ್ರ ಶರೀರವೇ ಎಲ್ಲೆಯಾಗಿ ಇದೆ. ಜೀವಾತ್ಮ ಶರೀರದಲ್ಲಿ ಒಂದು ಕಡೆ ಒಂದು ಬಿಂದುವಾಗಿ ಇದೆ. ಈಗ ಶರೀರದಲ್ಲಿನ ಸೂತ್ರಗಳೆಲ್ಲವೂ ತಿಳಿದುಹೋಗಿವೆ. ಆದ್ದರಿಂದ ಅಸಲು ವಿಷಯಕ್ಕೆ ಬರೋಣ. ನಿನ್ನ ಶರೀರದಲ್ಲಿ ನೀನು ಕೇವಲ ಒಂದು ಕಡೆ ಇರುವ ಜೀವಾತ್ಮ ಮಾತ್ರವೇ. ನಿನಗೆ ಯಾವ ಬಲವೂ ಇಲ್ಲ, ನೀನು ಶರೀರದಲ್ಲಿ ಯಾವ ಕೆಲಸವನ್ನೂ ಮಾಡುತ್ತಿಲ್ಲ. ನೀನು ಶರೀರದಲ್ಲಿ ನಿನ್ನವರೆಗೂ ಬಂದಿರುವ ಸುಖವೊಂದರ ಅನುಭವವನ್ನೂ, ದುಃಖವೊಂದರ ಅನುಭವವನ್ನು ಅನುಭವಿಸುತ್ತಿದ್ದೀಯ ಹೊರತು ಜೀವಾತ್ಮನಾದ ನಿನಗೆ ಯಾವ ಕೆಲಸವೂ ಇಲ್ಲವೇ ಇಲ್ಲ. ಆದರೇ ಜೀವಿಯು ಶರೀರದಲ್ಲಿನ ಯಂತ್ರಾಂಗವನ್ನು ತಿಳಿಯದೆ ಎಲ್ಲವನ್ನೂ ತಾನೇ ಮಾಡುತ್ತಿದ್ದೇನೆಂದುಕೊಳ್ಳುವುದು ಅಜ್ಞಾನ. ಶರೀರದಲ್ಲಿ ಏನು ನಡೆಯುತ್ತಿದೆಯೋ, ಶರೀರದಲ್ಲಿ ಜೀವಿಯ ಪಾತ್ರ ಎಷ್ಟೋ, ಆತ್ಮ ಪಾತ್ರ ಎಷ್ಟೋ, ಪರಮಾತ್ಮ ಹೇಗೆ ಇದ್ದಾನೋ ತಿಳಿಯುವುದೇ ನಿಜವಾದ ಜ್ಞಾನ. ಶರೀರದಲ್ಲಿನ ಜ್ಞಾನ ತಿಳಿಯದೇ ಹೊರಗೆ ಎಷ್ಟು ಪಂಡಿತನೆಂದು ಅನಿಸಿಕೊಂಡರೂ, ಹೊರಗಿನ ಜ್ಞಾನವನ್ನು ಎಷ್ಟಾಗಿ ಹೇಳಿಕೊಂಡರೂ, ಹೊರಗಿನ ಗ್ರಂಥಗಳಲ್ಲಿನ ವಿಷಯಗಳನ್ನು ಎಷ್ಟು ತಿಳಿದರೂ, ವೇದಗಳನ್ನು ಓದಿದರೂ, ಯಜ್ಞಗಳನ್ನು ಮಾಡಿದರೂ, ತಪಸ್ಸುಗಳನ್ನು ಮಾಡಿದರೂ ಅದು ಯಾವ

ಮಾತ್ರ ಆತ್ಮಜ್ಞಾನವೆಂದೆನಿಸಿಕೊಳ್ಳುವುದಿಲ್ಲ. ಆತ್ಮಜ್ಞಾನವನ್ನು ತಿಳಿಯದವನು ಎಷ್ಟು ದೊಡ್ಡ ಸ್ವಾಮೀಜಿ ಆದರೂ, ಮತ ಹಿರಿಯರಾದರೂ ದೇವರನ್ನು ತಿಳಿಯಲಾರರು.

ನಿನ್ನ ವಿಷಯಕ್ಕೆ ಬಂದರೆ ನೀನು ಜೀವಾತ್ಮನೇ ಅಲ್ಲವೆ! ಒಳಗಿನ ವಿಷಯಕ್ಕೆ ಬಂದಾಗ ಗುಣಗಳ ಪ್ರೇರಣೆ ನಡೆಯುತ್ತದೆ, ಗುಣಗಳ ಪ್ರೇರಣೆ ಪ್ರಕಾರ ಬಂದಿರುವ ಆಲೋಚನೆಗಳಲ್ಲಿ ಪ್ರಾರಬ್ಧಕರ್ಮದ ಪ್ರಕಾರ ಕೆಲಸವನ್ನು ಮಾಡೆಂದು ಚಿತ್ತ ನಿರ್ಣಯಿಸಿದಾಗ, ಆ ನಿರ್ಣಯ ಹೊರಗೆ ಬಂದು ಕರ್ಮೇಂದ್ರಿಯಗಳಿಂದ ಕೆಲಸ ನಡೆದುಹೋಗುತ್ತದಲ್ಲವೆ! ನಿನ್ನ ವಿಷಯದಲ್ಲಿ ಕರ್ಮಚಕ್ರಕ್ಕಿಂತಲೂ ಮೇಲಿರುವ ಕಾಲಚಕ್ರದಲ್ಲಿ ಇಂತಹ ಸಮಯದಲ್ಲಿ ಇಂತಹ ಪ್ರಾರಬ್ಧ ಕರ್ಮ ಜಾರಿಗೆ ಬರಬೇಕೆಂದು ಮೊದಲೇ ನಿರ್ಣಯಿಸಲ್ಪಟ್ಟಿರುವುದರಿಂದ, ಆ ಸಮಯಕ್ಕೆ ನಿನಗೆ ಪರಿಚಯವಿರುವ ಸ್ತ್ರೀ ನಿನ್ನ ಹತ್ತಿರಕ್ಕೆ ಬರುವುದು ನಡೆದಾಗ, ಆಕೆಯನ್ನು ನಿನ್ನ ಕಣ್ಣುಗಳು ನೋಡಿ ಆಕೆಯ ವಿಷಯವನ್ನು ಕಣ್ಣು ತಿಳಿಸಿದಾಗ, ಕಣ್ಣಿನವರೆಗು ಇದ್ದ ನಿನ್ನಲ್ಲಿನ ಮನಸ್ಸು ಆ ವಿಷಯವನ್ನು ಒಳಗೆ ಬುದ್ಧಿಗೆ ಸೇರಿಸಿದೆ. ಬುದ್ಧಿ ಪ್ರಸ್ತುತ ಅಲ್ಲಿರುವ ಆಸೆ ಎನ್ನುವ ಗುಣದೊಂದಿಗೆ ಆಲೋಚಿಸಿದಾಗ, ಆಕೆಯನ್ನು ಮುಟ್ಟುಕೊಳ್ಳಬೇಡವೆಂದು ಕೆಲವು ಗುಣಗಳ ಆಲೋಚನೆಗಳು, ಮುಟ್ಟಿಕೊಂಡು ಆಕೆಯನ್ನು ಅನುಭವಿಸೆಂದು ಕೆಲವು ಗುಣಗಳ ಆಲೋಚನೆಗಳು ಬಂದಾಗ, ಬುದ್ಧಿ ಎರಡನ್ನೂ ಗಮನಿಸುತ್ತಾ ಇರುವಾಗ ಆ ಸಮಯಕ್ಕೆ ಆಕೆಯೊಂದಿಗೆ ಅನುಭವಿಸುವ ಕರ್ಮ ಇರುವುದರಿಂದ ಚಿತ್ತ ಅನುಭವಿಸೆನ್ನುವ ಆಲೋಚನೆಯನ್ನೇ ನಿರ್ಣಯಿಸಿ ಬುದ್ಧಿಗೆ ತಿಳಿಸಿದಾಗ, ಆ ವಿಷಯವನ್ನೇ ಬುದ್ಧಿ ಮನಸ್ಸಿಗೆ ಸೇರಿಸಿದೆ. ಹಾಗೆ ಬುದ್ಧಿ ಸೇರಿಸಿದ ಸಮಾಚಾರ ವನ್ನು ಮನಸ್ಸು ಹೊರಗಿನ ಕರ್ಮೇಂದ್ರಿಯಗಳಿಗೆ ಸೇರಿಸಿದೆ ಆಗ ಕರ್ಮೇಂದ್ರಿಯ ಗಳು ಕೆಲಸವನ್ನು ಮಾಡಿದಾಗ ಕರ್ಮೇಂದ್ರಿಯಗಳನ್ನು ಅನುಸರಿಸುತ್ತಾ ಕೆಲಸ ಮಾಡಿದ ಜ್ಞಾನೇಂದ್ರಿಯಗಳು ಅಲ್ಲಿ ಲಭಿಸಿದ ಅನುಭವಗಳನ್ನು ಕಣ್ಣಿನ ನೋಟದಿಂದಲೂ, ಚರ್ಮದ ಸ್ಪರ್ಶದಿಂದಲೂ ಮನಸ್ಸಿಗೆ ಸೇರಿಸಿದಾಗ ಮನಸ್ಸು ಬುದ್ಧಿಗೆ ಸೇರಿಸಿದಾಗ ಬುದ್ಧಿಯಿಂದ ಬಂದಿರುವ ಸಮಾಚಾರದಲ್ಲಿನ ಸುಖವನ್ನು

ಜೀವಾತ್ಮನಾದ ನೀನು ಅನುಭವಿಸುವುದು ನಡೆದಿದೆ. ನಂತರ ಮರುದಿನ ಜೀವಾತ್ಮ ಬುದ್ಧಿಯೊಂದಿಗೆ ನಡೆದ ಕೆಲಸವನ್ನು ಆಲೋಚಿಸುತ್ತಾ ಆ ಕೆಲಸವನ್ನು ಮಾಡಬಾರದೆಂದುಕೊಂಡರೂ, ತನ್ನ ನಿರ್ಣಯ ಶರೀರದಲ್ಲಿ ಜಾರಿಗೆ ನಡೆಯಲಿಲ್ಲ. ಕರ್ಮ ನಿರ್ಣಯ ಹೇಗೆ ಇದ್ದರೇ ಹಾಗೇ ನಡೆಯುತ್ತದೆ. ಆದ್ದರಿಂದ ಎಲ್ಲಾ ವಿಷಯಗಳಲ್ಲಿ ನಿನ್ನದು ಸಕ್ರಮವಾದ ಪ್ರವರ್ತನೆಯೇ ಆಗಿದ್ದರೂ, ಸಮಯ ಬಂದಾಗ ಕರ್ಮದ ಪ್ರಕಾರ ನಡೆಯುವುದು ದೇವರು ಇಟ್ಟಿರುವ ನಿರ್ಣಯ, ಅದೇ ಶರೀರ ಯಂತ್ರಾಂಗ. ಆದ್ದರಿಂದ ಜೀವಾತ್ಮನು ಬೇಡ ಎಂದುಕೊಂಡ ಕೆಲಸವೂ ಸಹ ಯಾವ ಆತಂಕವಿಲ್ಲದೇ ನಡೆದುಹೋಗುತ್ತಿದೆ. ಅಹಂ ಮಾತು ಕೇಳುವ ಜೀವಾತ್ಮ ನಾನೇ ಮಾಡುತ್ತಿದ್ದೇನೆಂದು ಅಂದುಕೊಳ್ಳುವುದರಿಂದ ಅದೇ ಭ್ರಮೆಯಲ್ಲಿ ಇದ್ದು ನಾನು ಏಕೆ ಬೇಡವೆಂದುಕೊಂಡ ಕೆಲಸವನ್ನು ಮಾಡುತ್ತಿದ್ದೇನೆಂದು ನೀನು ಚಿಂತಿಸುತ್ತಿದ್ದೀಯ.

ಶರೀರದಲ್ಲಿನ ಆತ್ಮಗಳವೊಂದರ ಯಂತ್ರಾಂಗ ತಿಳಿಯದೇ ಯಾರೂ ಆತ್ಮಜ್ಞಾನಿ ಆಗಲಾರನು. ತ್ರೈತ ಸಿದ್ಧಾಂತವನ್ನು ತಿಳಿಯದೇ ಮೂರು ಆತ್ಮಗಳಾಗಲಿ, ಅದರಲ್ಲಿ ತಾನು ಯಾರೆನ್ನುವುದಾಗಲೀ ತಿಳಿಯದು. ಹಾಗೆ ತಿಳಿಯದವರನ್ನು ಅಜ್ಞಾನಿಗಳು ಎನ್ನಬಹುದು. ಒಳಗಿನ ಜ್ಞಾನವನ್ನು ತಿಳಿಯದವರು ಹೊರಗಿನ ಜ್ಞಾನವನ್ನು ಅವಲಂಭಿಸುತ್ತಿರುವರು. ಗೀತೆಯಲ್ಲಿ ಆತ್ಮ ಸಂಯಮ ಯೋಗದಲ್ಲಿ ಹೇಳಿದ ಮೊದಲನೆಯ ಶ್ಲೋಕದಲ್ಲಿನ ಮೊದಲನೆಯ ವಾಕ್ಯದಲ್ಲಿ ಕರ್ಮಫಲಮ್, ಕಾರ್ಯಮ್, ಕರ್ಮಕರೋತಿ ಎನ್ನುವ ಮೂರು ಪದಗಳಲ್ಲಿ ಕರ್ಮಕರೋತಿ ಎನ್ನುವ ಪದವನ್ನು ತೆಗೆದುಕೊಂಡರೆ ಗತದಲ್ಲಿ ಮಾಡಿಕೊಂಡ ಕರ್ಮ ಪ್ರಾರಬ್ಧಕರ್ಮವಾಗಿ ನಿರ್ಣಯಿಸಲ್ಪಟ್ಟಿದ್ದು ಆ ಕರ್ಮ ಜಾರಿಗೆ ಮಾಡಿಸುತ್ತಿದೆ. ಕರ್ಮ ನಡೆಯಬೇಕಾಗಿರುವುದನ್ನು ಶರೀರದಿಂದ ಮಾಡಿಸುವುದನ್ನೇ ಕರ್ಮಕರೋತಿ ಎಂದು ಹೇಳಿಕೊಳ್ಳಬಹುದು. ಆ ವಿಧವಾಗಿ ಶರೀರದಲ್ಲಿ ಗುಣಗಳು ಬುದ್ಧಿ ಮನಸ್ಸು ಚಿತ್ತ ಎಲ್ಲವೂ ಸೇರಿ ಮಾಡಿದ ಕಾರ್ಯವನ್ನು ಕರ್ಮಕರೋತಿ ಎಂದು ಚೆನ್ನಾಗಿ ಅರ್ಥವಾಗಿದೆ. ಒಳಗಿನ ನಿರ್ಣಯದ ಪ್ರಕಾರ

ಹೊರಗೆ ನಡೆದ ಕೆಲಸವನ್ನು ಕಾರ್ಯವೆಂದು ಹೇಳಬಹುದು. ಹೊರಗೆ ನಡೆದ ಕೆಲಸ ಕಾರ್ಯಮ್ ಎಂದು ಶ್ಲೋಕದಲ್ಲಿ ಹೇಳಿದ ಹಾಗೆ ತಿಳಿಯುತ್ತದೆ. ಹೊರಗೆ ನಡೆದ ಕಾರ್ಯವನ್ನು ನಾನೇ ಮಾಡಿದ್ದೇನೆಂದು ಜೀವಿಯು ಅಹಂ ಮಾತನ್ನು ಕೇಳಿ ಅಂದುಕೊಳ್ಳುವುದರಿಂದ ಕರ್ಮ ಎನ್ನುವ ಫಲ ಜೀವಿಗೆ ಬರುತ್ತಿದೆ. ಅದನ್ನೇ ಶ್ಲೋಕದಲ್ಲಿ ಕರ್ಮಫಲಮ್ ಎಂದು ಅಂದಿದ್ದಾರೆ. ನಿನ್ನ ಪ್ರಾರಬ್ಧ ಕರ್ಮ ನಡೆಯಬೇಕಾಗಿರುವ ಕೆಲಸವನ್ನು ಮಾಡಿಸುತ್ತಿದೆ. ಯಾವ ಸಮಯಕ್ಕೆ ಏನು ನಡೆಯಬೇಕೋ ಅದನ್ನೇ ಮಾಡಿಸುತ್ತಿದೆ. ನಿನಗೆ ಜ್ಞಾನ ತಿಳಿಯದೇ ಇರುವುದರಿಂದ ಕರ್ಮವನ್ನು ಮರೆತುಹೋಗಿ, ಅಹಂ ಮಾತು ಕೇಳಿ, ನಾನೇ ಮಾಡುತ್ತಿದ್ದೇನೆಂದು ಅವಶ್ಯಕವಾಗಿ ಅಂದುಕೊಂಡು ಚಿಂತಿಸುವುದು ನಡೆದಿದೆ. ನಡೆಯಬೇಕಾಗಿರುವುದು ನಡೆಯದೆ ತಪ್ಪುವುದಿಲ್ಲ. ಯಾವನೂ ಅದನ್ನು ನಿಲ್ಲಿಸಲಾರನು. ಅದು ದೇವರ ಕಾನೂನು. ನೀನು ಹುಟ್ಟಿದಾಗಲೇ ಒಬ್ಬ ಸ್ತ್ರೀ ಯೊಂದಿಗೆ ನೀನು ಇಷ್ಟು ಬಾರಿ ಶರೀರ ಸುಖವನ್ನು ಅನುಭವಿಸಬೇಕೆಂದು ಪ್ರಾರಬ್ಧ ಕರ್ಮ ನಿರ್ಣಯವಾಗಿ ಇದ್ದಾಗ ಕರ್ಮ ಅದನ್ನು ಮಾಡಿಸುತ್ತದೆ. ಅದನ್ನೇ ಕರ್ಮಕರೋತಿ ಎನ್ನಬೇಕಾಗಿದೆ. ಪ್ರತಿ ಮನುಷ್ಯ ಹುಟ್ಟಿದಾಗ ಅವನ ಜೀವನಕ್ಕೆ ಸಂಬಂಧಿಸಿದ ಘತಕ ನಿರ್ಣಯಿಸಲಾಗುತ್ತದೆ. ಅದನ್ನೇ ಜಾಘತಕ ಎಂದು ಪೂರ್ವದಲ್ಲಿ ಅನ್ನುತ್ತಿದ್ದರು. ಈದಿನ ಜಾ ಘತಕದಲ್ಲಿ ಜಾ ಪಕ್ಕದಲ್ಲಿರುವ **"ಘ"** ಇಲ್ಲದೇ ಹೋಗಿ ಜಾತಕವಾಗಿ ಹೇಳಲಾಗುತ್ತಿದೆ. ಜಾತಕದಲ್ಲಿ ಪ್ರಾರಬ್ಧಕರ್ಮ ಮೊದಲೇ ನಿರ್ಣಯಿಸಲಾಗಿರುತ್ತದೆ. ಅದನ್ನು ವಿಷ್ಣು, ಈಶ್ವರ, ಬ್ರಹ್ಮ ಸಹ ತಪ್ಪಿಸಿಕೊಳ್ಳಲಾರರು. ಕರ್ಮದಲ್ಲಿ ಏನು ಇದ್ದರೇ ಅದೇ ನಡೆಯುತ್ತದೆ. ತಿಳಿದವನು ಕೆಟ್ಟ ಕೆಲಸಕ್ಕೆ ಚಿಂತಿಸುವುದಿಲ್ಲ, ಒಳ್ಳೆ ಕೆಲಸಕ್ಕೆ ಸಂತೋಷಪಡುವುದಿಲ್ಲ. ತಾನು ಮಾಡುತ್ತಿದ್ದೇನೆಂದು ಅಂದುಕೊಳ್ಳುವುದಿಲ್ಲ. ಆತ್ಮಜ್ಞಾನ ಇಲ್ಲದವನು, ಶರೀರದಲ್ಲಿ ನಡೆಯುವ ಯಂತ್ರಾಗವನ್ನು ತಿಳಿಯದೇ ನಾನೇ ಮಾಡಿದ್ದೇನೆಂದು ಭ್ರಮಿಸಿ ಕೆಲವು ಕೆಲಸಗಳಲ್ಲಿ ಕುಗ್ಗುವುದು, ಕೆಲವು ಕೆಲಸಗಳಲ್ಲಿ ಹಿಗ್ಗುವುದು ನಡೆಯುತ್ತಿದೆ.

ಆತ್ಮಜ್ಞಾನ ತಿಳಿಯದೆ ಇರುವುದರಿಂದ ಕರ್ಮ ಮಾಡಿಸುವ ಕೆಲಸಗಳಲ್ಲಿ ಹೊಸ ಕರ್ಮ ಬರುವುದನ್ನೇ ಕರ್ಮಫಲಮ್ ಎಂದು ಗೀತೆಯಲ್ಲಿ ಹೇಳುವುದು

ನಡೆದಿದೆ. ಜ್ಞಾನ ತಿಳಿದರೂ ತಿಳಿಯದೇ ಹೋದರೂ ಕರ್ಮ ಕರೋ, ಕರೋ, ಕರೋ ಎಂದು ಶರೀರದಿಂದ ಮಾಡಿಸುತ್ತಲೇ ಇರುತ್ತದೆ. ಅದನ್ನು ಯಾರೂ ನಿಲ್ಲಿಸಲಾರರು. ಆದರೇ ಜ್ಞಾನ ತಿಳಿಯುವುದರಿಂದ ಕರ್ಮಫಲಮ್ ಎನ್ನುವುದನ್ನು ಇಲ್ಲದೇ ಮಾಡಬಹುದು. ಕಾರ್ಯಮ್ ಕರ್ಮಕರೋ ಎನ್ನುವುದನ್ನು ಯಾರೂ ನಿರೋಧಿಸದೇಹೋದರೂ, ಕರ್ಮಫಲವ್ ಎನ್ನುವುದನ್ನು ಮಾತ್ರ ನಿರೋಧಿಸಬಹುದು. ಅಂದರೇ ಪ್ರಾರಬ್ಧಕರ್ಮ ನಿನ್ನ ಶರೀರದಿಂದಲೇ ಕೆಲಸವನ್ನು ಮಾಡಿಸಿದರೂ, ಆ ಕಾರ್ಯದಲ್ಲಿ ನಿನಗೆ ಪಾಪವಾಗಲೀ, ಪುಣ್ಯವಾಗಲೀ ಬರುವುದಿಲ್ಲ. ಒಂದು ಕಾರ್ಯ ನಡೆಯುವುದರಿಂದ ಅದರ ಫಲಿತವಾಗಿ ಪಾಪವಾಗಲಿ, ಪುಣ್ಯವಾಗಲಿ ಬರುವುದು ಸಹಜ. ಆದರೆ ಅದನ್ನು ಬಾರದಂತೆ ಜ್ಞಾನದಿಂದ ಮಾಡಿಕೊಳ್ಳಬಹುದು. ಜ್ಞಾನ ಅಂದರೆ ಹೊರಗಿನ ಜ್ಞಾನವಲ್ಲ. ಶರೀರದಲ್ಲಿನ ಮೂರು ಆತ್ಮಗಳ ಜ್ಞಾನ, ಅದೇ ತ್ರೈತ ಸಿದ್ಧಾಂತ ಜ್ಞಾನ. ಕರ್ಮವನ್ನು ಅಂಟಿಸಿಕೊಳ್ಳದವನು ಸನ್ಯಾಸಿ, ಕರ್ಮ ಫಲವಾದ ಪಾಪಪುಣ್ಯಗಳನ್ನು ಬಿಡಿಸಿಕೊಳ್ಳುವವನು, ಅಂಟದವನು, ಅಂಟಿಸಿಕೊಳ್ಳದವನು ಸನ್ಯಾಸಿ ಎಂದು ಮೊದಲೇ ಹೇಳಿಕೊಂಡಿದ್ದೇವೆ. ಅದೇ ಶ್ಲೋಕದ ಮೊದಲಿನಲ್ಲಿಯೇ ಹೇಳಿದ "ಅನಾಶ್ರಿತಃ" ಎನ್ನುವ ಪದಕ್ಕೆ ಕರ್ಮವನ್ನು ಆಶ್ರಯಿಸದವನೆಂದು, ಅಂಟಿಸಿ ಕೊಳ್ಳದವನೆಂದು ಅರ್ಥ. "ಕರ್ಮಕರೋತಿ ಕಾರ್ಯಮ್ ಕರ್ಮಫಲಮ್ ಅನಾಶ್ರಿತಃ" ಈಗ ಪ್ರಾರಬ್ಧ ಕರ್ಮ ಪ್ರಕಾರ ಮಾಡಿರುವ ಕಾರ್ಯದಲ್ಲಿ ಬರುವ ಕರ್ಮ ಫಲಿತವನ್ನು ಅಂಟದವನು ಎಂದು ಕ್ರಮವಾಗಿ ಹೇಳಬಹುದು. "ಅನಾಶ್ರಿತಃ ಕರ್ಮ ಫಲಮ್ ಕಾರ್ಯಮ್ ಕರ್ಮಕರೋತಿಯಃ" ಎಂದು ಹೇಳಿದರೂ ಅದೇ ಅರ್ಥ ಬರುತ್ತದೆ. ಅಂಟದ ಕರ್ಮಫಲ ಇರುವವನೇ ಕಾರ್ಯಗಳನ್ನು ಕರ್ಮ ಪ್ರಕಾರ ಮಾಡುವನೋ ಎಂದು ತಿಳಿಯುತ್ತಿದೆ. ಈ ವಿಧವಾಗಿ ಶ್ಲೋಕವೊಂದರ ಮೊದಲ ವಾಕ್ಯ ಪೂರ್ತಿ ಅರ್ಥವಾಗಿಹೋಗಿದೆ.

ಇನ್ನು ಶ್ಲೋಕದಲ್ಲಿನ ಎರಡನೆ ವಾಕ್ಯವನ್ನು ಗಮನಿಸಿದರೆ "ಸಸನ್ಯಾಸೀಚ, ಯೋಗೀಚ ನನಿರಗ್ನಿ ರ್ನಚಾಕ್ರಿಯಃ" ಎಂದು ಇದೆ. ಈ ವಾಕ್ಯದಲ್ಲಿ ಸಸನ್ಯಾಸೀಚ,

ಯೋಗೀಚನ, ನಿರಗ್ನಿ, ರ್ನಚಾಕ್ರಿಯಃ ಎಂದು ನಾಲ್ಕು ಪದಗಳು ಇವೆ. ನಚಾಕ್ರಿಯಃ ಎನ್ನುವ ಪದಕ್ಕೆ ಕೆಲಸಗಳು ಮಾಡದವನೆಂದು ಅರ್ಥ. ಹಾಗೇ ನಿರಗ್ನಿ ಎಂದರೆ ಅಗ್ನಿ ಇಲ್ಲದವನು ಎಂದು ಅರ್ಥ. ಸಸನ್ಯಾಸೀಚ ಎನ್ನುವ ಪದಕ್ಕೆ ನಿಜವಾದ ಸನ್ಯಾಸಿ ಎಂದು ಅರ್ಥ. ಯೋಗೀಚ ನ ಎಂದರೆ ನಿಜವಾದ ಯೋಗಿ ಅಲ್ಲ ಎಂದು ಅರ್ಥ. ಶ್ಲೋಕವೊಂದರ ಪೂರ್ತಿ ಭಾವವನ್ನು ನೋಡಿದರೆ ಕರ್ಮಫಲವನ್ನು ಆಶ್ರಯಿಸದೇ ಯಾವನು ಕೆಲಸಗಳು ಮಾಡುವನೋ, ಅವನು ನಿಜವಾದ ಸನ್ಯಾಸಿ ಅನ್ನಲಾಗುವನು. ಅಗ್ನಿ ಇಲ್ಲದವನು, ಕೆಲಸಗಳು ಮಾಡದವನು ಯೋಗಿ ಅಲ್ಲ ಎಂದು ತಿಳಿಯುತ್ತಿದೆ. ತ್ರೈತ ಸಿದ್ಧಾಂತದ ಪ್ರಕಾರ ಮೂರು ಆತ್ಮಗಳನ್ನು ಕುರಿತು ಜ್ಞಾನ ತಿಳಿದವನಿಗೆ ಶರೀರದಲ್ಲಿ ಯಾವ ಆತ್ಮ ಯಾವ ಕೆಲಸ ಮಾಡುತ್ತಿದೆಯೋ ತಿಳಿಯುತ್ತದೆ. ಆತ್ಮಗಳ ಜ್ಞಾನ ತಿಳಿಯದೇ ಶರೀರದಲ್ಲಿ ನಡೆಯುವ ಯಂತ್ರಾಂಗ ತಿಳಿಯದು. ಆತ್ಮಗಳ ವಿವರ ತಿಳಿದವನು ತಾನು ಏನು ಮಾಡಲಿಲ್ಲವೆಂದು, ಎಲ್ಲವನ್ನೂ ಆತ್ಮೇ ಮಾಡುತ್ತಿದೆಯೆಂದು ಪೂರ್ತಿಯಾಗಿ ತಿಳಿದಿರುತ್ತಾನೆ. ಹಾಗೆ ತಿಳಿದಾಗಲೇ ಅಹಂನ್ನು ಅಡಗಿಸಿ ಅದರ ಮಾತು ಜೀವಾತ್ಮನು ಕೇಳದೇ ಹೋಗುವುದರಿಂದ ನಡೆಯುವ ಕೆಲಸಗಳಲ್ಲಿ ಬರುವ ಕರ್ಮಫಲ ಸುಟ್ಟುಹೋಗುತ್ತಿದೆ. ಆತ್ಮ ಜ್ಞಾನ ತಿಳಿದವನಿಗೆ ಜ್ಞಾನಾಗ್ನಿ ಅನ್ನುವುದು ತಯಾರಾಗುತ್ತಿದೆ. ಆದ್ದರಿಂದ ಕಾರ್ಯದಲ್ಲಿ ಬರುವ ಫಲ ಎನ್ನುವ ಪಾಪಪುಣ್ಯಗಳು ಜ್ಞಾನಾಗ್ನಿಯಲ್ಲಿ ಸುಟ್ಟುಹೋಗುತ್ತಿವೆ. ಹಾಗೆ ಸುಟ್ಟುಹೋಗುವು ದರಿಂದ ಜೀವಾತ್ಮ ಕರ್ಮವನ್ನು ಆಶ್ರಯಿಸದವನಾಗಿ, ಕರ್ಮವನ್ನು ಅಂಟದವನಾಗಿ, ಕರ್ಮವನ್ನು ಬಿಡಿಸಿಕೊಳ್ಳುವ ಸನ್ಯಾಸಿಯಾಗಿ ತಯಾರಾ ಗುತ್ತಿದ್ದಾನೆ. ಅಂತಹವನನ್ನು ಸಸನ್ಯಾಸಿ ಎಂದು ಅನ್ನಬಹುದು. ಅಗ್ನಿ ಇಲ್ಲದವನು ಎಂದರೆ ಜ್ಞಾನಾಗ್ನಿಯಿಂದ ಕರ್ಮಗಳು ಸುಟ್ಟುಕೊಳ್ಳದವನು ಸನ್ಯಾಸಿಯೂ ಅಲ್ಲ, ಯೋಗಿಯೂ ಅಲ್ಲ.

ಕೆಲಸಗಳನ್ನು ಮಾಡುತ್ತಾ ಅದರಲ್ಲಿ ಬರುವ ಕರ್ಮವಾದ ಪಾಪಪುಣ್ಯಗಳನ್ನು ಅಂಟದವನು, ಅಂಟಿಸಿಕೊಳ್ಳದವನು ಯೋಗಿ ಎಂದೂ,

ಸನ್ಯಾಸೀ ಎಂದೂ ಅನಿಸಿಕೊಳ್ಳುವುದಕ್ಕೆ ಅವಕಾಶವಿದೆ. ಒಂದು ವೇಳೆ ಆತನ ಹತ್ತಿರ ಜ್ಞಾನಾಗ್ನಿ ಇಲ್ಲದೇ ಹೋದರೇ, ಕರ್ಮಗಳು ಬಂದು ಆತನನ್ನು ಅಂಟುಕೊಳ್ಳುತ್ತವೆ. ಆದ್ದರಿಂದ ಅವನು ಸನ್ಯಾಸಿ ಎಂದಾಗಲೀ, ಯೋಗಿ ಎಂದಾಗಲೀ ಅನಿಸಿಕೊಳ್ಳುವುದಕ್ಕೆ ಅವಕಾಶವಿಲ್ಲ. ಜೀವನದಲ್ಲಿ ಕೆಲಸಗಳು ಮಾಡುವವನನ್ನು ನೋಡಿ, ಅವನ ಜ್ಞಾನವನ್ನನುಸರಿಸಿ, ಇವನು ಸನ್ಯಾಸಿ ಎಂದೋ ಅಥವಾ ಸನ್ಯಾಸಿ ಅಲ್ಲವೆಂದೋ ಹೇಳಬಹುದು. ಅಸಲು ಕೆಲಸಗಳೇ ಮಾಡದವನನ್ನು ಯೋಗಿ ಎಂದು ಹೇಳುವುದಕ್ಕಾಗಲೀ, ಸನ್ಯಾಸಿ ಎಂದು ಹೇಳುವುದಕ್ಕಾಗಲೀ ಆಗುವುದಿಲ್ಲ. ಅದೇ ವಿಧವಾಗಿ ಆತ್ಮ ಜ್ಞಾನವೇ ತಿಳಿಯದವನಿಗೆ ಜ್ಞಾನಾಗ್ನಿಯೇ ಇರುವುದಿಲ್ಲ, ಆದ್ದರಿಂದ ಅವನನ್ನು ಸಹಾ ಸನ್ಯಾಸಿ ಎಂದಾಗಲೀ, ಯೋಗಿ ಎಂದಾಗಲೀ ಹೇಳುವುದಕ್ಕೆ ಅವಕಾಶವೇ ಇಲ್ಲ. ಕೆಲಸಗಳು ಮಾಡಿದರೆ ಕರ್ಮ ಬರುತ್ತದೆ, ಕೆಲಸಗಳು ಮಾಡದೇ ಹೋದರೆ ಕರ್ಮವೇ ಬರುವುದಿಲ್ಲ. ಕರ್ಮಬರುವವನನ್ನು ಆರಿಸಿಕೊಂಡು ನೋಡಿದರೆ, ಅವನಿಗೆ ಕರ್ಮ ಅಂಟುತ್ತಾ ಇದ್ದರೇ ಸನ್ಯಾಸಿ ಅಲ್ಲವೆಂದು, ಕರ್ಮ ಅಂಟದೇ ಇದ್ದರೇ ಸನ್ಯಾಸಿ ಎಂದು ಹೇಳಬಹುದು. ಕೆಲಸಗಳು ಮಾಡದವನನ್ನು ಸನ್ಯಾಸಿ ಎಂದು ಹೇಳುವುದಕ್ಕೆ ಅವಕಾಶವಿಲ್ಲ.

ಕೆಲಸಗಳು ಮಾಡುವುದರಲ್ಲೇ ಜ್ಞಾನವನ್ನು ಹೊಂದಿದ್ದರೇ ಸನ್ಯಾಸ ವಾಗುತ್ತದೆಂದು, ಕಾರ್ಯಗಳನ್ನು ಮಾಡುವುದರಲ್ಲೇ ಸನ್ಯಾಸವನ್ನು ಹೊಂದಬೇಕೆಂದು, ದೇವರು ಗೀತೆಯಲ್ಲಿ ಹೇಳಿರುವಾಗ, ನಾವು ಸನ್ಯಾಸಿಗಳೆಂದು, ನಾವು ಕೆಲಸಗಳು ಮಾಡಬಾರದೆಂದು ಹೇಳುವವರನ್ನು ಸನ್ಯಾಸಿಗಳು ಎಂದು ಅನ್ನಬಹುದಾ ಎಂದು ಪ್ರಶ್ನಿಸಿಕೊಂಡು ನೋಡಿದರೆ, ನೀರಲ್ಲಿ ಇಳಿಯದವನು ನಾನು ನೆಂದಿರುವೆನೆಂದು ಹೇಳುವುದು ಎಷ್ಟು ಸತ್ಯವೊ, ಕೆಲಸಗಳು ಮಾಡದವನು ಸನ್ಯಾಸಿಯೆಂದು ಹೇಳುವುದು ಅಷ್ಟೇ ಸತ್ಯ. ನೀರಿನಲ್ಲಿ ಇಳಿಯದವನು ನಾನು ನೆಂದಿದ್ದೇನೆಂದು ಅನ್ನುವುದು ಎಷ್ಟು ಅಸತ್ಯವೋ, ಕೆಲಸಗಳು ಇಲ್ಲದವನು ಜ್ಞಾನವಿಲ್ಲದವನು ನಾನು ಸನ್ಯಾಸಿಯೆಂದು ಹೇಳುವುದು ಅಷ್ಟೇ ಸತ್ಯವಾಗುತ್ತದೆ.

ಕೆಲಸಗಳು ಮಾಡುತ್ತಾ ಕರ್ಮವನ್ನು ಅಂಟದಂತೆ ಮಾಡಿಕೊಳ್ಳುವುದು ಸನ್ಯಾಸವೆಂದು ದೇವರು ಹೇಳಿದರೆ, ನಾವು ಸನ್ಯಾಸಿಗಳು, ನಾವು ಎಲ್ಲರಹಾಗೆ ಕೆಲಸಗಳು ಮಾಡಬಾರದು. ನಾವು ಹೆಂಡತಿಯೊಂದಿಗೆ ಸಂಸಾರ ಮಾಡುವುದಿಲ್ಲ ಎಂದು ಕೆಂಪು ಬಣ್ಣ ಬಟ್ಟೆಗಳನ್ನು ಧರಿಸಿಕೊಂಡು ಪ್ರತ್ಯೇಕವಾಗಿ ಕಾಣಿಸಿದರೆ, ಅದು ದೇವರು ಹೇಳಿದ ಮಾತಿಗೆ ವಿರುದ್ಧವಲ್ಲವೆ! ದೇವರು ಧರ್ಮಗಳನ್ನು ಸ್ಥಾಪಿಸುವುದಕ್ಕೆ ಭೂಮಿಮೇಲೆಗೆ ಅದೇಕೆಲಸವಾಗಿ ಬಂದು ಇಂತಹವನೆ ಸನ್ಯಾಸಿ, ಯೋಗಿ ಎಂದು ಹೇಳಿದರೆ ಆ ಮಾತನ್ನು ಲೆಕ್ಕಮಾಡದೆ ದೇವರು ಹೇಳಿರುವುದಕ್ಕೆ ವಿರುದ್ಧವಾಗಿ ಹೇಳುತ್ತಾ, ವಿರುದ್ಧವಾಗಿ ಪ್ರವರ್ತಿಸುತ್ತಾ, ಸನ್ಯಾಸತ್ವವೆಂದರೆ ಏನೋ ತಿಳಿಯದವರು ನಾವು ಸನ್ಯಾಸಿಗಳು ಎನ್ನುತ್ತಿದ್ದಾರೆ. ತಾನು ಸನ್ಯಾಸಿ ಆಗದಿದ್ದರೂ ಸನ್ಯಾಸಿಯೆಂದು ಹೇಳುವವರು ಸನ್ಯಾಸಿಗಳಾಗಿ ಬಹಳ ಜನ ಕಾಣಿಸುತ್ತಿದ್ದಾರೆ. ಜ್ಞಾನಾಗ್ನಿ ಇಲ್ಲದವನಾಗಲಿ, ಕರ್ಮಗಳನ್ನು ಅಂಟಿಸಿಕೊಳ್ಳುವ ವನಾಗಲಿ ಸನ್ಯಾಸಿ ಅಲ್ಲ ಎಂದು ದೇವರು ಹೇಳಿದರೆ, ಭೂಮಿ ಮೇಲೆ ಸನ್ಯಾಸಿಗಳಾಗಿ ಕಾಣಿ ಸುವವರೆಲ್ಲರೂ ಆತನ ಮಾತಿಗೆ ವಿರುದ್ಧವಾಗಿ ಪ್ರವರ್ತಿ ಸುತ್ತಿದ್ದಾರೆ. ಮೂರು ಆತ್ಮಗಳ ತ್ರೈತ ಸಿದ್ಧಾಂತ ತಿಳಿಯುವವರೆಗು ಯಾರೇ ಆಗಲೀ ಸನ್ಯಾಸಿ ಎಂದು ಹೇಳಿಕೊಳ್ಳುವುದಕ್ಕೆ ಅರ್ಹನಲ್ಲ. ನಿಮಗೆ ಎಲ್ಲಾದರೂ ಸನ್ಯಾಸಿ ಕಾಣಿಸಿದರೆ ಆತನಿಗೆ ಮೂರು ಆತ್ಮಗಳ ಜ್ಞಾನ ತಿಳಿದಿದೆಯಾ ಎಂದು ನೋಡಿರಿ. ತ್ರೈತ ಸಿದ್ಧಾಂತ ಜ್ಞಾನ ತಿಳಿಯದೇ ಕೆಂಪು ಬಟ್ಟೆಗಳು ಧರಿಸಿದರೂ, ಕೆಲಸಗಳು ಮಾಡದೇ ಪ್ರತ್ಯೇಕವಾಗಿ ಇದ್ದರೂ, ಆತನು ಸನ್ಯಾಸಿ ಅಲ್ಲವೆಂದು, ಆತನು ದೇವರು ಹೇಳಿದ ಜ್ಞಾನಕ್ಕೆ ವಿರುದ್ಧವಾಗಿ ನಡೆಯುವವನೆಂದು ತಿಳಿಯಿರಿ.

**ವ್ಯಕ್ತಿ :–** ಲೋಕದಲ್ಲಿ ಸಾಧಾರಣ ಮನುಷ್ಯರು ಅಲ್ಲದೇ ದೊಡ್ಡ ದೊಡ್ಡ ಸ್ವಾಮೀಜೀಗಳು ಮದುವೆಗಳು ಮಾಡಿಕೊಳ್ಳದೆ, ಕೆಲವು ನಿಯಮಗಳನ್ನು ಇಟ್ಟುಕೊಂಡು, ಆ ನಿಯಮಗಳ ಪ್ರಕಾರ ಎಲ್ಲಾ ಕೆಲಸಗಳು ಮಾಡದೇ ಸ್ವಲ್ಪ ಕೆಲಸಗಳಿಗೆ ಪರಿಮಿತವಾಗಿ, ಮೂರು ಆತ್ಮಗಳ ಜ್ಞಾನ ತಿಳಿಯದವರಾಗಿದ್ದು, ನಾವು ಸನ್ಯಾಸಿಗಳೆಂದು ಹೇಳಿಕೊಳ್ಳುತ್ತಿದ್ದಾರಲ್ಲವೆ! ಅಂತಹ ಸ್ವಾಮೀಜೀಗಳನ್ನು ಏನನ್ನಬೇಕು?

**ಗುರು :–** ದೇವರ ಜ್ಞಾನ ಶಾಸ್ತ್ರಬದ್ಧವಾದದ್ದು ಆದ್ದರಿಂದ ಯಾರಿಗಾದರೂ ಸಮಾನವಾಗಿ ಅನ್ವಯಿಸುತ್ತದೆ. ದೇವರ ಮಾತಿಗೆ ವಿರುದ್ಧವಾಗಿ ಪ್ರವರ್ತಿಸುವವರು ಸ್ವಾಮೀಜಿಗಳಾಗಿದ್ದರೂ, ಅವರು ಕರ್ಮಬದ್ಧರಾಗಿ ಶಿಕ್ಷಾರ್ಹರಾಗಿ ಹೋಗುವರು. ಸಾಮಾನ್ಯ ಮನುಷ್ಯರಿಗೆ ಕೆಲವರು ದೊಡ್ಡ ಸ್ವಾಮಿಗಳಾಗಿ ಇದ್ದರೂ, ದೇವರ ಪಾಲನೆಯಲ್ಲಿನ ಗ್ರಹಗಳಿಗೆ ಅವರು ಸಾಮಾನ್ಯರೇ ಆಗುತ್ತಾರೆ. ಅವರ ಶಿಕ್ಷೆಯಿಂದ ತಪ್ಪಿಸಿಕೊಳ್ಳಬೇಕೆಂದರೆ, ಕರ್ಮವನ್ನು ಅಂಟಿಕೊಳ್ಳದೇ ದೇವರ ಪಾಲನೆಯಲ್ಲಿನ ಭೂತಗಳ ಗ್ರಹಗಳ ಲೆಕ್ಕದಲ್ಲಿ ನಿಜವಾದ ಸನ್ಯಾಸಿ ಆಗಬೇಕೆಂದರೇ, ಎಷ್ಟು ದೊಡ್ಡ ಸ್ವಾಮೀಜೀ ಆದರೂ ತ್ರೈತ ಸಿದ್ಧಾಂತದಲ್ಲಿನ ಮೂರು ಆತ್ಮಗಳ ಜ್ಞಾನವನ್ನು ತಿಳಿಯಬೇಕಾದ್ದೇ, ಹಾಗೆ ತಿಳಿಯದವನು ಸನ್ಯಾಸಿ ಅಲ್ಲ, ಯೋಗಿಯೂ ಅಲ್ಲವೆಂದು ತಿಳಿಯಬೇಕು.

**ವ್ಯಕ್ತಿ :–** ಯಾರು ಒಪ್ಪಿಕೊಂಡರೂ ಗ್ರಹಗಳು, ಭೂತಗಳು ಒಪ್ಪಿಕೊಳ್ಳುವುದಿಲ್ಲ ಎನ್ನುತ್ತಿದ್ದೀರಾ. ಸನ್ಯಾಸಿಗಳು ಅಲ್ಲದವರು ತಮ್ಮನ್ನು ಸನ್ಯಾಸಿಗಳೆಂದು ಹೇಳಿ ಕೊಳ್ಳುವುದರಿಂದ ಅವರನ್ನು ಗ್ರಹಗಳು, ಭೂತಗಳು ತಪ್ಪದೇ ಶಿಕ್ಷಿಸುವರು ಅಂದಿದ್ದೀರಾ. ಗ್ರಹಗಳು, ಭೂತಗಳು ದೇವತೆಗಳನ್ನು ಸಹ ಬಿಡದೇ ಅಜ್ಞಾನವಾಗಿ ಪ್ರವರ್ತಿಸಿದರೆ, ಅವರನ್ನು ಸಹ ಶಿಕ್ಷಿಸುವರು ಎಂದು ಹೇಳಿದ್ದೀರಾ. ನೀವು ಹೇಳುತ್ತಿರುವ ಗ್ರಹಗಳು, ಭೂತಗಳನ್ನು ಕುರಿತು ಯಾರೂ ಇಲ್ಲಿಯವರೆಗು ಹೇಳಲಿಲ್ಲ. ನನಗೆ ತಿಳಿದಷ್ಟು ಮಟ್ಟಿಗೆ ಮರಣಿಸಿದವರು ದೆವ್ವಗಳಾದರೆ ಅವರನ್ನೇ ಗ್ರಹಗಳಾಗಿ, ಭೂತಗಳಾಗಿ ಹೇಳುತ್ತಿರುವುದನ್ನು ಕೇಳಿದ್ದೇನೆ. ಅಷ್ಟು ಬಿಟ್ಟರೇ ನೀವು ಹೇಳುವಂತಹ ಗ್ರಹಗಳನ್ನು, ಭೂತಗಳನ್ನು ಕುರಿತು ಎಂದೂ ಕೇಳಲಿಲ್ಲ. ಈಗ ತ್ರೈತ ಸಿದ್ಧಾಂತ ಹೊಸದೇ, ಭೂತಗಳು ಗ್ರಹಗಳು ಹೊಸವೇ. ತ್ರೈತ ಸಿದ್ಧಾಂತವನ್ನು ಕುರಿತು ಚೆನ್ನಾಗಿ ಅರ್ಥವಾಗಿದೆ. ಆದರೆ ಗ್ರಹಗಳು, ಭೂತಗಳನ್ನು ಕುರಿತು ಪೂರ್ತಿಯಾಗಿ ಅರ್ಥವಾಗಲಿಲ್ಲ. ಅವುಗಳನ್ನು ಕುರಿತು ತಿಳಿಸಬೇಕೆಂದು ಕೋರುತ್ತಿದ್ದೇನೆ.

**ಗುರು :–** ಗ್ರಹಗಳು, ಭೂತಗಳು ಅಂದರೆ ದೆವ್ವಗಳು ಎಂದು ಬಹಳ ಜನ ಅಂದುಕೊಳ್ಳಬಹುದು. ಅದು ಅವರ ತಿಳಿಯದತನವೇ. ಭೂತಗಳು ಗ್ರಹಗಳನ್ನು

ಕುರಿತು ಸ್ವಲ್ಪ ಮಟ್ಟಿಗೆ ನಮ್ಮ ರಚನೆಗಳಲ್ಲಿನ **"ದೆವ್ವಗಳ-ಭೂತಗಳ ಯಾಥಾರ್ಥ ಸಂಘಟನೆಗಳು"** ಎನ್ನುವ ಗ್ರಂಥದಲ್ಲಿ ಬರೆಯುವುದು ನಡೆದಿದೆ. ಎಲ್ಲರೂ ಅಂದುಕೊಂಡಹಾಗೆ ದೆವ್ವಗಳೇ ಭೂತಗಳಾದರೇ ನಾವು ಬರೆದ ಗ್ರಂಥಗಳಲ್ಲಿ ದೆವ್ವಗಳ ಭೂತಗಳ ಎಂದು ಬೇರೆಬೇರೆ ಪದಗಳಾಗಿ ಏಕೆ ಬರೆಯುತ್ತೇವೆ? ದೆವ್ವಗಳಿಗೂ ಭೂತಗಳಿಗೂ ನರಿಗೂ ನಾಗಲೋಕಕ್ಕೂ ಇರುವಷ್ಟು ವ್ಯತ್ಯಾಸವಿದೆ. ಮನುಷ್ಯರು, ದೆವ್ವಗಳು ದೇವರ ಅಧೀನದಲ್ಲಿ ಇದ್ದು ಪಾಲಿಸಲ್ಪಡುವವರು. ಗ್ರಹಗಳು, ಭೂತಗಳು ಸಹ ದೇವರ ಅಧೀನದಲ್ಲಿದ್ದು ಪಾಲಿಸುವವರು. ದೆವ್ವಗಳು ಮನುಷ್ಯರು ಪಾಲಿಸಲ್ಪಡುವವರಾದಾಗ ಭೂತಗಳು, ಗ್ರಹಗಳು ಪಾಲಿಸುವವರು. ನಿನಗೆ ಚೆನ್ನಾಗಿ ಅರ್ಥವಾಗಬೇಕೆಂದರೆ, ಪ್ರಜೆಗಳು ಪ್ರಭುತ್ವವೊಂದರ ಹೋಲಿಕೆಯನ್ನು ಉದಾಹರಣೆಯಾಗಿ ನೋಡೋಣ. ಒಂದು ರಾಜ್ಯಕ್ಕೆ ಅಧಿಪತಿಯಾಗಿ ರಾಜ ಇರುತ್ತಾನೆ. ರಾಜನ ರಾಜ್ಯದಲ್ಲಿ ಪಾಲಿಸಲ್ಪಡುವ ಪ್ರಜೆಗಳಿರುತ್ತಾರೆ. ಪ್ರಜೆಗಳನ್ನು ಪಾಲಿಸುವ ಪರಿಪಾಲನೆ ಇರುತ್ತದೆ. ಒಂದು ರಾಜ್ಯದಲ್ಲಿರುವವರೆಲ್ಲರನ್ನು ಮೂರು ಭಾಗಗಳಾಗಿ ವಿಭಜಿಸಬಹುದು. ಒಬ್ಬರು ರಾಜ, ಎರಡು ಪ್ರಜೆಗಳು, ಮೂರು ಪಾಲಕರು. ರಾಜ ಅಂತಃಪುರದಲ್ಲಿ ಇರುತ್ತಾನೆ. ಹೊರಗಿನ ರಾಜ್ಯದಲ್ಲಿ ಎರಡನೆ ಭಾಗವಾದ ಪ್ರಜೆಗಳೂ, ಮೂರನೆ ಭಾಗವಾದ ಪಾಲಕರು ಇರುತ್ತಾರೆ. ಪಾಲಕರಲ್ಲಿ ಅನೇಕ ತರಗತಿಗಳವರಿರುತ್ತಾರೆ. ಮಂತ್ರಿಗಳಿಂದ ಸಿಪಾಯಿಗಳವರೆಗು ಪಾಲಕರೊಳಗಿನವರಂತೆ ಲೆಕ್ಕಿಸಬಹುದು. ಪಾಲಿಸಲ್ಪಡುರುವವರೂ ಕೂಡಾ ಅನೇಕ ವಿಧದವರಿರುತ್ತಾರೆ. ಆದರೂ ಎಲ್ಲರನ್ನೂ ಪ್ರಜೆಗಳೆಂದು ಅನ್ನುತ್ತಿದ್ದೇವೆ. ಹಾಗೇ ಪಾಲಕರು ಅನೇಕ ಹುದ್ದೆಗಳಾಗಿ, ತರಗತಿಗಳಾಗಿ ಇದ್ದರೂ ಎಲ್ಲರನ್ನೂ ಸೇರಿಸಿ ಪ್ರಭುತ್ವ ಎಂದು ಅನ್ನುತ್ತೇವೆ. ಇತ್ತ ಪ್ರಜೆಗಳಿಗೂ, ಅತ್ತ ಪ್ರಭುತ್ವಕ್ಕೂ ದೊಡ್ಡದಾಗಿ ಪ್ರಭು ಎನ್ನುವ ರಾಜ ಇರುತ್ತಾನೆ. ದೇವರ ರಾಜ್ಯ ಕೂಡ ಮೂರನ್ನು ಆಧಾರ ಮಾಡಿಕೊಂಡು, ಮೂರು ಭಾಗಗಳಾಗಿ ಪ್ರಜೆಗಳು, ಪ್ರಭುತ್ವ, ಪ್ರಭುವಾಗಿ ಇದೆ.

ಪ್ರಜೆಗಳು ತಾಮಸ, ರಾಜಸ, ಸಾತ್ತ್ವಿಕ ಎನ್ನುವ ಮೂರು ಗುಣಗಳ ಹೆಸರುಗಳಿಂದ ವಿಭಜಿಸಲ್ಪಟ್ಟಿದ್ದಾರೆ. ಹಾಗೇ ಪ್ರಭುವು ಆದ ದೇವರು ಸಹ

ಕ್ಷರ, ಅಕ್ಷರ, ಪುರುಷೋತ್ತಮ ಎನ್ನುವ ಮೂರು ಪುರುಷರಾಗಿ ವಿಭಜಿಸಲ್ಪಟ್ಟಿದ್ದಾನೆ. ಹಾಗೇ ಪ್ರಜೆಗಳಿಗು ಪ್ರಭುವಿಗೂ ಮಧ್ಯದಲ್ಲಿರುವ ಪ್ರಭುತ್ವ (ಪಾಲಕರು) ಸಹ ಮಹಾ, ಮಧ್ಯ, ಸ್ವಲ್ಪ ಎನ್ನುವ ಮೂರು ವಿಧಗಳಾಗಿ ವಿಭಜಿಸಲ್ಪಟ್ಟಿದೆ. ಮಹಾ ಭೂತಗಳು, ಭೂತಗಳು, ಸ್ವಲ್ಪ ಭೂತಗಳು ಹೊರಗೆ ಪ್ರಪಂಚದಲ್ಲಿನ ಪಾಲನೆಯನ್ನು ಸಾಗಿಸುತ್ತಿವೆ. ಪ್ರಭುತ್ವದಲ್ಲಿನ ಪಾಲಕರನ್ನು ಭೂತಗಳೆಂದು, ಗ್ರಹಗಳೆಂದು ಎರಡು ವಿಧಗಳಾಗಿ ವಿಭಜಿಸಬಹುದು. ಪ್ರಜೆಗಳನ್ನು ಪಾಲಿಸುವುದರಲ್ಲಿ ಗ್ರಹಗಳು, ಭೂತಗಳು ಎರಡೂ ಕೆಲಸ ಮಾಡುತ್ತಿದ್ದರೂ, ಅವುಗಳ ಪೂರ್ತಿ ಕೆಲಸ ನನಗೆ ಸ್ವಲ್ಪ ತಿಳಿದಿದೆಯಾಗಲಿ, ಪೂರ್ತಿಯಾಗಿ ತಿಳಿಯದೆಂದೇ ಹೇಳಬಹುದು. ದೇವರ ಸೃಷ್ಠಿಯಲ್ಲಿ ಜೀವವಿರುವ ಯಾವುದನ್ನಾದರೂ ಭೂತ ಎನ್ನಬಹುದು. ಅವುಗಳನ್ನೇ ಬಿಡಿಯಾಗಿ ಹೇಳಿಕೊಂಡರೇ ಮನುಷ್ಯರು ಬೇರೆ, ಗ್ರಹಗಳು ಬೇರೆ, ಭೂತಗಳು ಬೇರೆಂದು ಹೇಳಬಹುದು. ಎಲ್ಲಾ ಸೃಷ್ಠಿಯಲ್ಲಿನ ಭಾಗಗಳೇ ಆದರೂ, ಒಂದೊಂದು ಒಂದೊಂದು ಸಾಮರ್ಥ್ಯವನ್ನು ಹೊಂದಿವೆ. ಭೂತಗಳು, ಗ್ರಹಗಳು, ಖಗೋಳದಲ್ಲಿ ನಿವಾಸಿಸುತ್ತಿರುವವು. ಗ್ರಹಿಸಿಕೊಳ್ಳುವ ವಿಧಾನವನ್ನು ಹೊಂದಿರುವುದನ್ನು ಗ್ರಹ ಎನ್ನಬಹುದು. ಭೂತಗಳು ಆಗಾಗ ಗ್ರಹಗಳಿಗೆ ಸೂಚನೆಗಳನ್ನು ಕೊಟ್ಟಾಗ, ಅದನ್ನು ಗ್ರಹಗಳು ಗ್ರಹಿಸಿಕೊಂಡು ಕೆಲಸ ಮಾಡುತ್ತವೆ. ಖಗೋಳದಲ್ಲಿನ ಸೂರ್ಯ, ಚಂದ್ರ, ಅಂಗಾರಕ, ಗುರು, ಶುಕ್ರ ಮೊದಲಾದ ಗ್ರಹಗಳೆಲ್ಲವೂ ಆಗಾಗ ಭೂತಗಳ ಸೂಚನೆಗಳನ್ನು ಸ್ವೀಕರಿಸಿ ನಡೆದು ಕೊಳ್ಳುತ್ತಿರುತ್ತವೆ. ಗ್ರಹಗಳು ಸ್ಥೂಲ ಆಕಾರವನ್ನು ಹೊಂದಿರುವಾಗ, ಭೂತಗಳು ಕೆಲವು ಬಾರಿ ಕಾಣಿಸಬಹುದು, ಕೆಲವು ಬಾರಿ ಕಾಣಿಸದೇ ಇರಬಹುದು. ಭೂತಗಳಿಗೆ ಎಂದಿಗೂ ಒಂದೇ ರೂಪವಿರುವುದಿಲ್ಲ. ಎಂದಾದರೂ ಕಾಣಿಸಿದರೇ ಬೇರೆ ಬೇರೆ ರೂಪಗಳಲ್ಲಿ ಕಾಣಿಸಬಹುದು. ಉದಾಹರಣೆಗೆ ಮೇಘವೂ ಸಹ ಒಂದು ಭೂತವೇ. ಮೇಘ ಎಂದಿಗೂ ಒಂದೇ ರೂಪದಲ್ಲಿ ಇರುವುದಿಲ್ಲ. ಆಗಿಂದಾಗ್ಗೆ ರೂಪವನ್ನು ಬದಲಾಯಿಸಿಕೊಳ್ಳುತ್ತಿರುತ್ತದೆ. ಗ್ರಹ ಎಂದಿಗೂ ರೂಪ ವನ್ನು ಬದಲಾಯಿಸಿಕೊಳ್ಳುವುದಿಲ್ಲ. ಭೂತವಾದ ಮೇಘವು ಗ್ರಹರೂಪವಾಗಿ ಸಹ ಬದಲಾಗಬಹುದು. ಹಾಗೆ ಬದಲಾಗಿರುವುದು ಸ್ವಲ್ಪ ಹೊತ್ತಿಗೆ ಕಾಣಿಸದೇ

ಹೋಗಬಹುದು. ಭೂತಗಳು ಮೇಘಗಳ ರೂಪದಲ್ಲಿ ಹೇಗೆ ಕೆಲಸ ಮಾಡುತ್ತಿರುವುದು, ಪಾಲನಾ ವಿಧಾನವನ್ನು ಹೇಗೆ ಸಾಗಿಸುತ್ತಿರುವುದು ಪ್ರಬೋಧಾನಂದ ಯೋಗೀಶ್ವರರ ರಚನೆಗಳಲ್ಲಿನ **"ದೆವ್ವಗಳ ಭೂತಗಳ ಯಾಥಾರ್ಥ ಸಂಘಟನೆಗಳು"** ಎಂಬ ಗ್ರಂಥದಲ್ಲಿ ಸ್ವಲ್ಪ ಮಟ್ಟಿಗೆ ವಿವರಿಸಿದ್ದಾರೆ. ಭೂತಗಳು, ಗ್ರಹಗಳು ಮನುಷ್ಯರನ್ನು ಹೇಗೆ ಪಾಲಿಸುತ್ತಿವೆಯೋ, ಮನುಷ್ಯರು ಮಾಡಿದ ತಪ್ಪುಗಳಿಗೆ ಶಿಕ್ಷೆಗಳನ್ನು ಹೇಗೆ ಜಾರಿ ಮಾಡುತ್ತಿವೆಯೊ ಒಂದು ಯಥಾರ್ಥ ಸಂಘಟನೆಯಿಂದ ತಿಳಿದುಕೊಳ್ಳೋಣ.

ಮೊಟ್ಟ ಮೊದಲು ಭಾರತೀಯ ಅಂತರಿಕ್ಷ ಯಾತ್ರಿಕಳು ಕಲ್ಪನಾಚಾವ್ಲಾ ಹೆಸರು ಕೇಳದವರಿರುವುದಿಲ್ಲ. ಭಾರತೀಯ ಮಹಿಳಾ ಸಾಹಸಕ್ಕೂ, ಮೇಧಸ್ಸಿಗೂ ಚಿಹ್ನೆಯಾಗಿ ನಿಂತುಹೋದ ಪಂಜಾಬ್ ರಾಷ್ಟ್ರಕ್ಕೆ ಸೇರಿದ ಕಲ್ಪನಾಚಾವ್ಲಾ, ಅಮೆರಿಕಾ ದೇಶಕ್ಕೆ ಸೇರಿದ ಅಂತರಿಕ್ಷ ಪರಿಶೋಧನಾ ಸಂಸ್ಥೆ NASA (ನಾಸಾ) ದಲ್ಲಿ ಕೆಲಸ ಮಾಡುತ್ತಿದ್ದಳು. ಅಂತರಿಕ್ಷದೊಳಗೆ ಪ್ರಯೋಗಿಸಿದ ಕೊಲಂಬಿಯಾ ಸ್ಪೇಸ್‌ಷಿಪ್‌ನಲ್ಲಿ ಇತರ ಪಾಶ್ಚಾತ್ಯ ಅಂತರಿಕ್ಷ ಯಾತ್ರಿಕರೊಂದಿಗೆ ಅಂತರಿಕ್ಷ ಯಾತ್ರೆಯಲ್ಲಿ ಪರಿಶೋಧಕಳಾಗಿ ಪಾಲ್ಗೊಂಡು ಅಂತರಿಕ್ಷದೊಳಗೆ ಪ್ರಯಾಣಿಸಿದ್ದಾಳೆ. ಆಕಾಶದಲ್ಲೇ ಸ್ವಲ್ಪ ಕಾಲ ಕಳೆದು ಪರಿಶೋಧನೆ ಸಾಗಿಸಿದ ನಂತರ ಕೊಲಂಬಿಯಾ ಸ್ಪೇಸ್‌ಷಿಪ್ ಭೂಮಿಗೆ ತಿರುಗು ಪ್ರಯಾಣ ಪ್ರಾರಂಭಿಸಿದೆ. 2003ನೇ ವರ್ಷ ಫೆಬ್ರವರೀ 1ನೇ ತಾರೀಖು ಇನ್ನು ಹದಿನಾರು (16) ನಿಮಿಷಗಳಲ್ಲಿ ಭೂಮಿ ಮೇಲೆ ಇಳಿಯುತ್ತಿರುವ ಕೊಲಂಬಿಯಾ ಸ್ಪೇಸ್‌ಷಿಪ್ ದುರದೃಷ್ಟವಶಾತ್ತು ಊಹಿಸದ ಪರಿಣಾಮಗಳಿಂದ, ಆಕಾಶದಲ್ಲಿಯೇ ಭೂಮಿ ವಾತಾವರಣದೊಳಗೆ ಪ್ರವೇಶಿಸುತ್ತಿದ್ದಂತೆ ಸ್ಫೋಟಗೊಂಡಿದೆ. ಅದರೊಂದಿಗೆ ಅದರಲ್ಲಿ ಪ್ರಯಾಣಿಸುತ್ತಿರುವ ಅಂತರಿಕ್ಷ ಯಾತ್ರಿಕರೆಲ್ಲರೂ ಸಣ್ಣ ಸಣ್ಣ ಚೂರುಗಳಾಗಿ ಸತ್ತುಹೋಗಿದ್ದಾರೆ. ಭಾರತೀಯ ವ್ಯೋಮಗಾಮಿ ಕಲ್ಪನಾಚಾವ್ಲಾ ಸಹ ಆ ಘೋರ ಅಪಘಾತದಲ್ಲಿ ಪ್ರಾಣಗಳನ್ನು ಕಳೆದುಕೊಳ್ಳುವುದು ನಡೆದಿದೆ. ಆದರೇ ಆಕೆ ಮತ್ತೆ ಕೆಲವು ದಿನಗಳಿಗೇ ಭೂಮಿ ಮೇಲೆ ಹುಟ್ಟುವುದು ನಡೆದಿದೆ.

ಕಲ್ಪನಾಚಾವ್ಲಾ ಪುನಃ ಹುಟ್ಟಿದ ಸಮಾಚಾರವನ್ನು (ಎಸ್. ಬಿ.ಯನ್ 7) ಛಾನಲ್ ಮತ್ತು ಇಂಡಿಯಾಟುಡೇ ಪತ್ರಿಕೆ, ಕಲ್ಪನಾಚಾವ್ಲಾ ಮತ್ತೆ ಜನ್ಮಿಸಿದ ಕಥೆಯನ್ನು ಪ್ರಸಾರ ಮಾಡಿ ಪ್ರಪಂಚಕ್ಕೆ ತಿಳಿಸುವುದು ನಡೆದಿದೆ. ಆ ವಿವರಗಳನ್ನು ನೋಡಿದರೆ, ಉತ್ತರ ಭಾರತದೇಶದಲ್ಲಿ ಉತ್ತರಪ್ರದೇಶ್ ರಾಷ್ಟ್ರದಲ್ಲಿರುವ ಬುಲ್ಲಂದ್ ಷಹರ್ ಎನ್ನುವ ಗ್ರಾಮದಲ್ಲಿ ರಾಜ್‌ಕುಮಾರ್ ಎನ್ನುವ ಸಾಧಾರಣ ವ್ಯವಸಾಯ ಕೂಲಿಯಾಗಿ ಕೆಲಸ ಮಾಡುತ್ತಿರುವ ವ್ಯಕ್ತಿ ಕುಟುಂಬದಲ್ಲಿ ಆತನಿಗೆ ಮಗಳಾಗಿ ಜನ್ಮಿಸಿದ್ದಾಳೆ. 2003ನೇ ವರ್ಷ ಮಾರ್ಚಿ 23ನೇ ತಾರೀಖು ಉಪಾಸನ ಎನ್ನುವ ಹೆಸರಿಂದ ಆ ಕುಟುಂಬದಲ್ಲಿ ಕಲ್ಪನಾಚಾವ್ಲಾ ಜನ್ಮಿಸುವುದು ನಡೆದಿದೆ. ಉಪಾಸನ (ಕಲ್ಪನಾಚಾವ್ಲಾ)ಗೆ ನಾಲ್ಕು ವರ್ಷಗಳ ವಯಸ್ಸಿನಲ್ಲಿ ಮಾತುಗಳು ಬಂದಿವೆ. ಮಾತನಾಡುವುದು ಪ್ರಾರಂಭಿಸಿದ ಉಪಾಸನ, ತಾನು ಗತಜನ್ಮದಲ್ಲಿ ಕಲ್ಪನಾಚಾವ್ಲಾ ಎನ್ನುವ ಹೆಸರಿರುವ ಅಂತರಿಕ್ಷ ಪರಿಶೋಧಕಳೆಂದು, ತನ್ನ ತಂದೆ ಹೆಸರು ಬನಾರ್ಸಿದಾಸ್ ಎಂದೂ, ನಾಲ್ಕು ವರ್ಷಗಳ ಕೆಳಗೆ ತಾನು ತನ್ನ ಜೊತೆ ಅಂತರಿಕ್ಷ ಪರಿಶೋಧಕರೊಂದಿಗೆ ಸೇರಿ ಒಂದು ವಿಮಾನದಲ್ಲಿ ಆಕಾಶದಿಂದ ಇಳಿದು ಬರುತ್ತಿರುವಾಗ, ತಮ್ಮ ವಿಮಾನಕ್ಕೆ ಅಪಘಾತ ನಡೆದು ತಾವೆಲ್ಲರೂ ಸತ್ತುಹೋಗಿದ್ದೇವೆಂದು ಹೇಳುವುದು ನಡೆದಿದೆ.

ಗತ ಜನ್ಮದ ವಿವರಗಳನ್ನು ಮಣಿಪೋಣಿಸಿದಹಾಗೆ ಹೇಳುತ್ತಿರುವ ಉಪಾಸನ (ಕಲ್ಪನಾಚಾವ್ಲಾ)ವೊಂದರ ಹೆಸರು ಉತ್ತರ ಪ್ರದೇಶ್ ರಾಷ್ಟ್ರವೆಲ್ಲಾ ಕ್ರಮವಾಗಿ ತಿಳಿದು ಹೋಗಿದೆ. ಪ್ರಸ್ತುತ ಉತ್ತರ ಪ್ರದೇಶದಲ್ಲಿನ ಎತ್ವಾ ಜಿಲ್ಲೆಯಲ್ಲಿ "ಪತಾ" ಎಂಬ ಗ್ರಾಮದಲ್ಲಿ ಕೂಲಿ ಕೆಲಸ ಮಾಡಿಕೊಳ್ಳುತ್ತಿರುವ ತಂದೆ ರಾಜ್‌ಕುಮಾರ್‌ರೊಂದಿಗೆ ಜೀವಿಸುತ್ತಿರುವ ಉಪಾಸನ ತನ್ನನ್ನು ಇಂಟರ್ವ್ಯೂ ಮಾಡುವುದಕ್ಕೆ ಬಂದಿರುವ ಪ್ರಪಂಚ ಸ್ಥಾಯಿ ಮೀಡಿಯಾ ಪ್ರತಿ ನಿಧಿಗಳೊಂದಿಗೆ ಮಾತನಾಡುತ್ತಾ, ನಾವು ಭೂಮಿ ಮೇಲೆಗೆ ತಿರುಗಿ ಬರುತ್ತಿರುವ ಅಂತರಿಕ್ಷ ನೌಕೆಗೆ ಆಕಾಶದಲ್ಲಿ ಸಂಚರಿಸುತ್ತಿರುವ ಒಂದು ದೊಡ್ಡ ಮಂಜು ಗೋಳ ಗುದ್ದಿಕೊಂಡಿದೆಯೆಂದು, ಅದರಿಂದ ತಮ್ಮ ಅಂತರಿಕ್ಷ ನೌಕೆ ಸ್ಫೋಟಗೊಂಡು

ಅದರಲ್ಲಿ ತಾವೆಲ್ಲರೂ ಮರಣಿಸಿದ್ದೇವೆಂದು ಹೇಳಿದಳು. 2003ನೆ ವರ್ಷ ಫೆಬ್ರವರಿ 1ನೇ ತಾರೀಖು ನಾಸಾಕೇಂದ್ರದವರು ಅಂತರಿಕ್ಷ ನೌಕೆಗೆ ಹೊರಗೆ ಪಕ್ಕದಲ್ಲಿ ಸುತ್ತಲೂ ಅಳವಡಿಸಿದ ಪ್ಲೇಟುಗಳು ಬಿಚ್ಚಿಹೋಗಿರುವುದರಿಂದ ಆ ನೌಕೆ ಭೂಮಿ ವಾತಾವರಣದೊಳಗೆ ಬರುತ್ತಲೇ ವಾತಾವರಣದ ಹವಮಾನ ಶಾಕಕ್ಕೆ ಸ್ಫೋಟಗೊಂಡಿದೆ ಎಂದು ಹೇಳಿದ್ದಾರೆ. ನಾಸಾದವರು ಅಂದುಕೊಂಡಹಾಗೆ ಅಲ್ಲಿ ನಡೆದಿಲ್ಲವೆಂದು, ಆಕಾಶದಲ್ಲಿ ಭೂಮಿಗೆ 70 ಕಿಲೋಮೀಟರುಗಳ ದೂರದಲ್ಲೇ ಮಂಜುಗೋಳಕ್ಕೆ ಅಂತರಿಕ್ಷ ನೌಕೆ ಗುದ್ದಿಕೊಂಡಿರುವುದರಿಂದ ಅಪಘಾತ ನಡೆದಿದೆಯೆಂದು ಪ್ರತ್ಯಕ್ಷ ಸಾಕ್ಷಿ ಆದ ಕಲ್ಪನಾಚಾವ್ಲಾ ಹೇಳುವುದರಿಂದ ತಿಳಿದುಹೋಗಿದೆ.

ಮಂಜು ಗೋಳ ರೂಪದಲ್ಲಿ ರಾಕೆಟ್‌ನ್ನು ಢಿಕ್ಕಿ ಹೊಡೆದಿರುವುದು ಒಂದು ಭೂತವೆಂದು ನಮ್ಮ ಪರಿಶೋಧನೆಯಲ್ಲಿ ಅರ್ಥವಾಗಿದೆ. ಈದಿನ ಭೂಮಿ ಮೇಲೆ ಅನೇಕ ಕಡೆ ನಡೆಯುತ್ತಿರುವ ಪ್ರಯಾಣಗಳಲ್ಲಿ ಅಪಘಾತಗಳಿಗೆ ಕಾರಣ ಕೆಲವು ಭೂತಗಳು, ಕೆಲವು ಗ್ರಹಗಳೆಂದು ತಿಳಿಯುತ್ತಿದೆ. ನಮ್ಮ ಸರ್ವೇಯಲ್ಲಿ ದೇವಾಲಯಗಳಿಗೆ ಬರುವ ಹೋಗುವ ಪ್ರಯಾಣಗಳಲ್ಲಾಗಲಿ, ವಿವಾಹಗಳಿಗೆ ಬರುವಾಗಾಗಲಿ, ತಿರುಗಿ ಹೋಗುವಾಗ ಆಗಲಿ, ಹೆಚ್ಚಿನ ಪ್ರಮಾದಗಳು (ಅಪಘಾತಗಳು) ನಡೆಯುತ್ತಿವೆ. ಎಲ್ಲಾದರೂ ರಸ್ತೆ ಅಪಘಾತ ನಡೆದಿದೆ ಎಂದರೆ ಅದು ಮದುವೆ ವಾಹನವಾದರೂ ಆಗಿರುತ್ತದೆ, ಅಥವಾ ದೇವತೆಗಳಿಗೆ ಹೋಗುವ ವಾಹನವಾದರೂ ಆಗಿರುತ್ತದೆ. ದೇವಾಲಯಗಳ ಪ್ರಯಾಣಗಳು, ಮದುವೆಗಳ ಪ್ರಯಾಣಗಳು ಸರಿಹೋಗದ ಭೂತಗಳು, ಗ್ರಹಗಳು ಕೆಲವು ಇವೆ. ಆದ್ದರಿಂದ ಅವರು ಪ್ರಯಾಣದಲ್ಲೇ ಶಿಕ್ಷಿಸುವರು. ಕಲ್ಪನಾಚಾವ್ಲಾದು ಅಂತಹ ಪ್ರಯಾಣ ಅಲ್ಲದೇ ಹೋದರೂ, ಇತರ ಕಾರಣಗಳಿಂದ ಭೂತಗಳೇ ಹಾಗೆ ಮಾಡಿವೆ. ಭೂತಗಳು, ಗ್ರಹಗಳು ಆದಿಯಲ್ಲಿ ಸೂರ್ಯನು ಹೇಳಿದಾಗ ತ್ರೈತ ಸಿದ್ಧಾಂತವನ್ನು ಕೇಳಿ ತಿಳಿದುಕೊಂಡಿರುವುದರಿಂದ, ಅವು ಸಂಪೂರ್ಣವಾದ ಜ್ಞಾನವನ್ನು ಹೊಂದಿವೆ. ಆದ್ದರಿಂದ ಯಾವಮಾತ್ರ ದೈವಜ್ಞಾನವಿಲ್ಲದ

ವಿವಾಹಗಳು, ತೀರ್ಥಯಾತ್ರೆಗಳು ಭೂತಗಳಿಗೆ ಸರಿಹೋಗುವುದಿಲ್ಲ. ಆ ಕಾರ್ಯಗಳು ಎರಡೂ ಪೂರ್ತಿ ಅಜ್ಞಾನ ಕಾರ್ಯಗಳಾಗಿ ತಿಳಿಯುವುದರಿಂದ, ಅವರು ಪ್ರಯಾಣಗಳಲ್ಲಿ ಬಹಳ ಜನರನ್ನು ಪ್ರಮಾದಗಳ ರೂಪದಲ್ಲಿ ಸಾಯಿಸುತ್ತಿದ್ದಾರೆ. ಹೊರಗೆ ನಡೆಯುವ ಘೋರಾತಿ ಘೋರವಾದ ಅಪಘಾತ ಗಳೆಲ್ಲವೂ ಗ್ರಹಗಳಿಂದ ಭೂತಗಳಿಂದಲೇ ನಡೆಯುತ್ತಿವೆಯೆಂದು ತಿಳಿಯಬೇಕು.

ಭೂಮಿ ಮೇಲೆ ಮನುಷ್ಯ ಮುಖ್ಯವಾಗಿ ಮೂರು ಬಲಗಳೊಂದಿಗೆ ಬದುಕುತ್ತಿದ್ದಾನೆ. ಒಂದು ಬುದ್ಧಿ ಬಲ, ಎರಡನೆಯದು ಶರೀರ ಬಲ, ಮೂರನೆಯದು ಧನ ಬಲ. ಈ ಮೂರು ಬಲಗಳು ಮಾನವನ ಗತ ಜನ್ಮದ ಕರ್ಮವನ್ನು ಅನುಸರಿಸಿ ಉಂಟಾಗುತ್ತಿರುತ್ತವೆ. ಈ ಮೂರು ಬಲಗಳು ಇಲ್ಲದವರು ಆಗಾಗ ದೇವರನ್ನು ಕುರಿತು ಚಿಂತಿಸುತ್ತಿರುವರು. ಆದರೇ ಈ ಮೂರು ಬಲಗಳಿರುವವರು ದೇವರನ್ನು ಕುರಿತು ಸ್ವಲ್ಪವೂ ಆಲೋಚಿಸುವುದಿಲ್ಲ. ಅಂತಹವನು ದೈವವನ್ನು, ದೈವಜ್ಞಾನ ತಿಳಿದವರನ್ನು ಲೆಕ್ಕ ಇಟ್ಟುಕೊಳ್ಳದೇ ಅವಮಾನಿಸುವ ಸ್ವಭಾವ ಹೊಂದಿರುವರು. ಒಂದು ವೇಳೆ ಭಕ್ತಿ ಇದ್ದರೂ ಅದು ದೈವದ ಮೇಲೆ ಅಲ್ಲದೇ ಚಿಲ್ಲರೆ ದೇವತೆಗಳ ಮೇಲೆ ಇರುತ್ತದೆ. ಅಂತಹವರು ಜ್ಞಾನಿಗಳ ಹತ್ತಿರ ಕ್ರೂರವಾಗಿ ಪ್ರವರ್ತಿಸುತ್ತಿರುವರು. ಅಂತಹವರನ್ನು ನಂತರ ಜನ್ಮದಲ್ಲಿ ಭೂತಗಳು ಗ್ರಹಗಳು ದಯೆ ಎನ್ನುವುದು ಯಾವ ಮಾತ್ರವೂ ಇಲ್ಲದೇ ಹಿಂಸಿಸುವರು. ರೋಗ ಒಂದು ಭೂತವೇ, ಆದ್ದರಿಂದ ರೋಗಗಳ ರೂಪದಲ್ಲಿ ಬಾಧಿಸುವರು. ಭೂತಗಳು, ಗ್ರಹಗಳು ತಮ್ಮ ಪಾಲನೆಯಲ್ಲಿ ಅಜ್ಞಾನಿಗಳನ್ನೂ, ದೇವರ ಬೋಧನೆ ವಿರುದ್ಧವಾಗಿ ಹೇಳಿದವರನ್ನು, ದೇವರು ಹೇಳಿದ ಸನ್ಯಾಸ ಅಲ್ಲದ್ದನ್ನು ಸನ್ಯಾಸವೆಂದು ಹೇಳುತ್ತಾ ಸನ್ಯಾಸಿಗಳಾಗಿ ಬದಲಾಗಿರುವವರನ್ನು ತಪ್ಪದೆ ಶಿಕ್ಷಿಸುವರು. ಅಂತಹವರ ಬಗ್ಗೆ ತಮ್ಮ ಪಾಲನೆ ಯನ್ನು ಕಠಿಣವಾಗಿ ಮಾಡುವರು. ಭೂಮಿ ಮೇಲೆ ನಡೆಯುವ ಭೂಕಂಪಗಳು, ಸುನಾಮಿಗಳು, ಅಗ್ನಿ ಪರ್ವತಗಳ ಸ್ಫೋಟ ಮೊದಲಾದ ದೊಡ್ಡ ದೊಡ್ಡ ಹಿಂಸಾರೂಪಗಳೆಲ್ಲವೂ ಖಗೋಳದಲ್ಲಿರುವ ಭೂತಗಳ, ಗ್ರಹಗಳ ಕೆಲಸಗಳೇ ಎಂದು ಯಾರಿಗೂ

ತಿಳಿಯದು. ಟೋರ್ನಡೋಲು ಅಂತಹ ಸುಳಿಮೇಘಗಳ ವಿಧ್ವಂಸ, ಕ್ಯುಮುಲೋ ನಿಂಬಸ್ ಎನ್ನುವ ಹೊಗೆ ಮೇಘಗಳ ಭಾರೀ ಮಳೆ, ಪ್ರವಾಹ ಬೀಭತ್ಸಗಳಂತಹ ಚರ್ಯಗಳೆಲ್ಲವೂ ಭೂತಗಳ, ಗ್ರಹಗಳ ಕಾರ್ಯಗಳೆಂದು ಯಾರಿಗೂ ತಿಳಿಯದು. ತ್ರೈತ ಸಿದ್ಧಾಂತ ಜ್ಞಾನವನ್ನು ತಿಳಿಯುದೇ ಅದಕ್ಕೆ ವಿರುದ್ಧವಾಗಿ ಮಾತನಾಡುವವರೆಲ್ಲರನ್ನು ಹಿಡಿದು ಸಾಯಿಸುತ್ತಿವೆ. ಭೂಮಿ ಮೇಲೆ ಎಷ್ಟೋ ಶಾಸ್ತ್ರಜ್ಞರು ಭೂಕಂಪಗಳನ್ನು ಕುರಿತು, ಸುನಾಮೀಗಳನ್ನು ಕುರಿತು, ಟೋರ್ನಡೋಲು ಅನ್ನುವ ಸುಳಿಮೇಘಗಳನ್ನು ಕುರಿತು, ಕ್ಯುಮುಲೋ ನಿಂಬಸ್ ಮೇಘಗಳನ್ನು ಕುರಿತು ಎಷ್ಟೋ ಪರಿಶೋಧನೆಗಳು ಮಾಡುತ್ತಿದ್ದಾರೆ. ಆದರೂ ಇವೆಲ್ಲವೂ ಶಕ್ತಿವಂತವಾದ ಭೂತಗಳ, ಗ್ರಹಗಳಿಂದ ನಡೆಯುತ್ತಿವೆ ಯೆಂದು ಯಾರೂ ತಿಳಿಯದೇ ಹೋಗುತ್ತಿದ್ದಾರೆ.

ಭೂಮಿ ಮೇಲೆ ಬೆಳೆಗಳು ಬೆಳೆಯುವುದು, ಮಳೆಗಳು ಬರುವುದೂ, ಬರಗಾಲ ಭಾದೆಗಳು ಏರ್ಪಡುವುದು, ರೋಗಗಳು ವಿಜೃಂಭಿಸುವುದೂ ಮೊದಲಾದ ಚರ್ಯಗಳೆಲ್ಲವೂ ಭೂತಗಳ, ಗ್ರಹಗಳ ಕೆಲಸಗಳೇ ಎಂದು ಅವರ ಪರಿಪಾಲನೇಯೆಂದು ಯಾರಿಗೂ ತಿಳಿಯದು. ಪ್ರಪಂಚದಲ್ಲಿ ಎಷ್ಟೋ ಕಾರ್ಯಗಳಿಗೆ ಕಾರಣವಾಗಿ ಭೂಮಂಡಲವೆಲ್ಲವನ್ನೂ ಪಾಲಿಸುವ ಗ್ರಹಗಳು, ಭೂತಗಳು ತ್ರೈತ ಸಿದ್ಧಾಂತ ಜ್ಞಾನವನ್ನು ಸಂಪೂರ್ಣವಾಗಿ ತಿಳಿದವರೆಂದು ಯಾರಿಗೂ ತಿಳಿಯದು.

**ವ್ಯಕ್ತಿ :–** ತ್ರೈತ ಸಿದ್ಧಾಂತ ಜ್ಞಾನ ಯಾವ ಮನುಷ್ಯನಿಗೂ ತಿಳಿಯದೆ ಇರುವಾಗ, ಯಾವ ಮನುಷ್ಯ ಅದನ್ನು ಇತರರಿಗೆ ಹೇಳಲಾರನು. ಆಗಿರುವಾಗ ತ್ರೈತ ಸಿದ್ಧಾಂತವೆಂದರೆ ಏನೋ ಯಾರಿಗೂ ತಿಳಿಯದಲ್ಲವೆ! ಎಂದಿಗೋ ಕೆಲವು ನೂರು, ಸಾವಿರ ವರ್ಷಗಳ ಕೆಳಗೆ ದೇವರು ಭಗವಂತನಾಗಿ ಬಂದು ಹೇಳಿದಾಗ, ಆ ಕಾಲದಲ್ಲಿ ಇರುವವರಿಗೇ ಅದು ಏನೋ ಅರ್ಥವಾಗದೇ ಇರುವಾಗ ಈಗಿನ ಕಾಲದಲ್ಲಿರುವ ಮನುಷ್ಯರಿಗೆ ಅದು ಹೇಗೆ ತಿಳಿಯುತ್ತದೆ. ಈದಿನ ಮನುಷ್ಯರಿಗೆ ತ್ರೈತ ಸಿದ್ಧಾಂತದ ಜ್ಞಾನವನ್ನು ಹೇಳುವವನೇ ಇಲ್ಲದಿರುವಾಗ

ಈಗಿನ ಪ್ರಜೆಗಳನ್ನು ಅಜ್ಞಾನಿಗಳೆಂದು ಗ್ರಹಗಳು, ಭೂತಗಳು ಹಿಂಸಿಸುವುದು ನ್ಯಾಯವೇನಾ? ನನಗೆ ಹೇಳಿದಾಗ ಕೇಳದೇ ಇರುವುದು ನನ್ನದು ತಪ್ಪಾಗುತ್ತದೆ. ತ್ರೈತ ಸಿದ್ಧಾಂತವನ್ನು ಮೊದಲಿಗೇ ಯಾರೂ ಹೇಳದೇ ನನಗೆ ತಿಳಿಯದಲ್ಲವೆ! ಅಂತಹದರಲ್ಲಿ ತ್ರೈತ ಜ್ಞಾನ ತಿಳಿಯದೇ ಇರುವುದು ನನ್ನ ತಪ್ಪಾಗುತ್ತದಾ? ಹೇಳಿ.

**ಗುರುವು :–** ನೀನು ಕೇಳಿದ ಪ್ರಶ್ನೆ ಚೆನ್ನಾಗೇ ಇದೆ, ಆದರೇ ನಿನ್ನ ಪ್ರಶ್ನೆಯಲ್ಲಿ ಸತ್ಯವಿಲ್ಲ. ಅದು ತಿಳಿಯದೇನೆ ನೀನು ಕೇಳುತ್ತಿದ್ದೀಯ. ಈಗ ನಿನಗೆ ತಿಳಿಯದಿರುವುದು, ನೀನು ಮರೆತುಹೋಗಿರುವ ಸತ್ಯ ಏನೆಂದರೆ! ದೇವರು ದ್ವಾಪರಯುಗದ ಕೊನೆಯಲ್ಲಿ, ಸುಮಾರು ಕಲಿಯುಗದ ಪ್ರಾರಂಭದಲ್ಲಿ ಭಗವಂತನಾಗಿ ಬಂದು ಪ್ರಕೃತಿಯನ್ನು ಕುರಿತು, ಮೂರು ಆತ್ಮಗಳ ಜ್ಞಾನವನ್ನು ಕುರಿತು ಹೇಳಿದಾಗ ಭೂಮಿ ಮೇಲೆ ನೀನು ಮನುಷ್ಯನಾಗೇ ಇದ್ದೀಯ. ಆ ದಿನ ಭಗವಂತನು ಹೇಳಿದ ಜ್ಞಾನವನ್ನು ಅಶ್ರದ್ಧೆಯಿಂದ ಬಿಟ್ಟಿದ್ದೀಯ. ನಂತರ ಅಲ್ಲಿ ಸತ್ತು ಮತ್ತೊಂದು ಕಡೆ ಹುಟ್ಟುತ್ತಾ ಬರುವುದರಿಂದ ಹಿಂದಿನ ಜನ್ಮಗಳ ಜ್ಞಾಪಕಗಳು ತಿಳಿಯದೇ ಹೋಗಿವೆ. ಆದ್ದರಿಂದ ನನಗೆ ಯಾರೂ ಜ್ಞಾನವನ್ನು ಹೇಳಲಿಲ್ಲ ಅನ್ನುತ್ತಿದ್ದೀಯ. ನಂತರ ಭಗವಂತನಾಗಿ ಬಂದಿರುವ ದೇವರು ಎರಡನೆ ಭಾರಿಯೂ ಸಹ ತನ್ನ ಜ್ಞಾನವನ್ನು ಹೇಳಿದ್ದಾನೆ. ಆ ದಿನವಾಗಲಿ, ಅದಕ್ಕೂ ಮುಂಚೆಯಾಗಲಿ ಮಾನವರಿಗೆಲ್ಲರಿಗೂ ಅವಶ್ಯವಾದ ಜ್ಞಾನವನ್ನು ಹೇಳಿ ಅದನ್ನೇ ಗ್ರಂಥರೂಪ ಮಾಡಿ ಎಲ್ಲರಿಗೂ ತಿಳಿಯುವಹಾಗೆ ಮಾಡಿದ್ದಾನೆ. ಶ್ರದ್ಧೆ ಇರುವವನು ಯಾರಾದರೂ ಅಪರೂಪವಾಗಿ ದೇವರ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದಾನೆ. ಶ್ರದ್ಧೆ ಇಲ್ಲದವನು ತಿಳಿದುಕೊಳ್ಳುತ್ತಿಲ್ಲ. ಮನುಷ್ಯರಿಗೋಸ್ಕರ ದೇವರೇ ಮನುಷ್ಯನಾಗಿ ಅವತರಿಸಿ ಜ್ಞಾನವನ್ನು ಹೇಳಿದರೆ, ಅಂತಹ ದೊಡ್ಡವನು ಹೇಳಿದ ಜ್ಞಾನದ ಮೇಲೆ ಶ್ರದ್ಧೆ ತೋರಿಸದೆ, ಈಗ ನನಗೆ ಹೇಳಿಲ್ಲವೇ ಎನ್ನುವುದು ನಿನಗೆ ನ್ಯಾಯವೇ ಎಂದು ನಾನು ಕೇಳುತ್ತಿದ್ದೇನೆ. ದೇವರು ಮೂರನೆಬಾರಿ ತನ್ನ ಪರಿಪಾಲನೆಯಲ್ಲಿ ಕೆಲಸ ಮಾಡುತ್ತಿರುವ ಜಿಬ್ರಯೇಲ್ ಎನ್ನುವ ದೂತನಿಂದ

ಜ್ಞಾನವನ್ನು ಹೇಳಿಸಿದ್ದಾನೆ. ಅದನ್ನೇ ಗ್ರಂಥರೂಪ ಮಾಡಿ ಕೊಟ್ಟಿದ್ದಾನೆ. ಆ ವಿಧವಾಗಿ ಹೇಳಿರುವುದು ಪ್ರಜೆಗಳೆಲ್ಲರಿಗೂ ಹೇಳಿರುವುದಲ್ಲವೇ! ಗ್ರಂಥಗಳಾಗಿ ಕಾಣಿಸುತ್ತಿರುವ ಜ್ಞಾನ ಪ್ರಜೆಗಳೆಲ್ಲರಿಗೂ ತಿಳಿಸಿರುವುದೆ ಅಲ್ಲವೆ! ಪ್ರಜೆಗಳಲ್ಲಿ ನೀನು ಒಬ್ಬ ವ್ಯಕ್ತಿ ಆದಾಗ ಗ್ರಂಥಗಳಲ್ಲಿ ಹೇಳಿದ್ದನ್ನು ತಿಳಿದುಕೊಂಡು ಜ್ಞಾನಿ ಏಕೆ ಆಗಬಾರದು? ಜ್ಞಾನದ ಪ್ರಕಾರ ಏಕೆ ನಡೆದುಕೊಳ್ಳಬಾರದು? ನಿನಗೆ ಶ್ರದ್ಧೆ ಇಲ್ಲದೇ ಮೇಲಾಗಿ ನನಗೆ ಹೇಳಲಿಲ್ಲವೆನ್ನುವುದೇನು?

ಇಂದಿಗೂ ದೇವರು ಹೇಳಿದ ಜ್ಞಾನ ಆಯಾ ಮತದವರಿಗೆ, ಆಯಾ ಮತ ಗ್ರಂಥಗಳಲ್ಲಿ ಸಂಪೂರ್ಣವಾಗಿ ಇದೆ. ಆದರೆ ಆ ಗ್ರಂಥಗಳನ್ನು ಅಡ್ಡ ಇಟ್ಟುಕೊಂಡು ನಾವು ಜ್ಞಾನಿಗಳೆಂದು ಅಂದುಕೊಳ್ಳುವವರು ಪ್ರಜೆಗಳನ್ನು ತಪ್ಪುದಾರಿ ಹಿಡಿಸುತ್ತಿದ್ದಾರೆ. ವಾಸ್ತವಕ್ಕೆ ಮೂರು ಗ್ರಂಥಗಳಲ್ಲಿರುವ ತ್ರೈತ ಸಿದ್ಧಾಂತ ಮೂರು ಆತ್ಮಗಳನ್ನು ಕುರಿತು ಹೇಳಿರುವುದೇ ಎಂದು ತಿಳಿಯದೆ, ಆಯಾ ಮತದವರು ಮೂರು ಭಾಗಗಳಾಗಿ ಮೂರು ಆತ್ಮಗಳಾಗಿರುವ ದೈವವನ್ನು ಬಿಟ್ಟು, ಅವರವರ ಮತಗಳನ್ನೂ, ಮತ ನಿಯಮಗಳನ್ನು ಬೋಧಿಸುತ್ತಾ, ಮತಗಳಲ್ಲಿ ಮನುಷ್ಯರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಬೇಕೆಂದು ನೋಡುತ್ತಿದ್ದಾರೆ. ಈ ರೋಗ ಜಾಢ್ಯದಂತೆ ಎಲ್ಲಾ ಮತಗಳಲ್ಲಿ ಸ್ಥಳ ಮಾಡಿಕೊಂಡು ಇದೆ. ಆದ್ದರಿಂದ ಮನುಷ್ಯರಲ್ಲಿ ಮತ ಜ್ಞಾನ ಬೆಳೆದುಹೋಗಿದೆ ಆದರೆ, ಮೂರು ಆತ್ಮಗಳ ಜ್ಞಾನ ತಿಳಿಯದೆ ಹೋಗಿದೆ. ಈ ಕಾಲದಲ್ಲಿ ಲೋಕವೆಲ್ಲದಕ್ಕೂ ವಿರುದ್ಧ ಬೋಧನೆಯಾಗಿರುವ, ಎಲ್ಲ ಮತಗಳಲ್ಲಿನ ಮತ ಹಿರಿಯರಿಗು ಸರಿಹೋಗದ ವಿಧವಾಗಿರುವ ತ್ರೈತಸಿದ್ಧಾಂತ ಜ್ಞಾನವನ್ನು ದೇವರು ನನ್ನಿಂದ ಎಲ್ಲರಿಗೂ ಜ್ಞಾಪಕ ಮಾಡಿಸುತ್ತಿದ್ದಾನೆ. ಆದರೇ ಸಂಸ್ಕಾರ ಬಲವಿರುವ ಕೆಲವರಿಗೆ ಅವರ ಗ್ರಂಥದಲ್ಲಿರುವ ತ್ರೈತ ಸಿದ್ಧಾಂತಕ್ಕೆ ಸಂಬಂಧಿಸಿದ ವಾಕ್ಯಗಳು ಸ್ವಲ್ಪ ಸ್ವಲ್ಪವಾಗಿ ಗೋಚರಿಸುತ್ತಿವೆ. ಸಂಸ್ಕಾರವಾಗಲೀ, ಶ್ರದ್ಧೆಯಾಗಲಿ ಇಲ್ಲದ ಬಹಳ ಜನರಿಗೆ, ಅವರ ಮೂಲ ಗ್ರಂಥಗಳಲ್ಲಿರುವ ದೈವ ವಾಕ್ಯವಾದ ತ್ರೈತ ಸಿದ್ಧಾಂತ ಜ್ಞಾನ ಯಾವ ಮಾತ್ರವೂ ಕಾಣಿಸುತ್ತಿಲ್ಲ.

ನಾನು ಒಬ್ಬ ಗುರುವಾಗಿ ನಿನ್ನಂತಹವರಿಗೆ ತ್ರೈತ ಸಿದ್ಧಾಂತವನ್ನು ಜ್ಞಾಪಕ ಮಾಡಿಸುತ್ತಿದ್ದೇನೆ. ಆದರೇ ಗುರುವು ಸಹ ಅಲ್ಲವೆಂದು ಹೇಳಿಕೊಳ್ಳುವ ಪ್ರಬೋಧಾನಂದ ಯೋಗೀಶ್ವರರು ತನ್ನ ಜ್ಞಾನವೆಲ್ಲವನ್ನು ತ್ರೈತ ಸಿದ್ಧಾಂತದ ಮೇಲೆಯೇ ಆಧಾರ ಮಾಡಿ ಅನೇಕ ಗ್ರಂಥ ರೂಪದಲ್ಲಿ ಬರೆದಿದ್ದಾನೆ. ಹಿಂದೂ ಮತದಲ್ಲಿರುವ ಆತನು ತ್ರೈತ ಸಿದ್ಧಾಂತ ಭಗವದ್ಗೀತೆ ಎನ್ನುವ ಹೆಸರೊಂದಿಗೆ ಭಗವದ್ಗೀತೆಯನ್ನು ಬರೆದು ಅದರಲ್ಲಿ ಮೂರು ಆತ್ಮಗಳನ್ನು ವಿವರವಾಗಿ ತೋರಿಸಿದ್ದಾನೆ. ದೇವರ ಸೇವೆ ಅಂದರೆ ದೇವರ ಜ್ಞಾನವನ್ನು ಪ್ರಚಾರ ಮಾಡುವುದೇ ನಿಜವಾದ ದೈವ ಸೇವೆ ಎಂದು ಹೇಳುವ ಆತನು, ಕಳೆದ ನಲವತ್ತು ಸಂವತ್ಸರಗಳಿಂದ ತ್ರೈತ ಸಿದ್ಧಾಂತವನ್ನೇ ಬೋಧಿಸುತ್ತಿರುವಾಗ, ಈಗ ನೀನು ನನಗೆ ಜ್ಞಾನವನ್ನು ಹೇಳುವವರೇ ಇಲ್ಲ ಎನ್ನುವುದು ನಿನಗೆ ನ್ಯಾಯವೇ ಎಂದು ಕೇಳುತ್ತಿದ್ದೇನೆ. ಈದಿನ ಎಷ್ಟೋ ಸ್ವಾಮೀಜಿಯರು ಸನ್ಯಾಸಿಗಳಾಗಿ ಇದ್ದು ಸನ್ಯಾಸತ್ವಕ್ಕೆ ಒಂದು ವೇಷವನ್ನು, ಕೆಲವು ನಿಯಮಗಳನ್ನು ಕಲ್ಪಿಸಿಕೊಂಡು ಇದ್ದಾರೆ. ಹಾಗೆ ಇರುವುದು ಭಗವದ್ಗೀತೆಯಲ್ಲಿ ದೇವರು ಹೇಳಿದ ಜ್ಞಾನಕ್ಕೆ ಪೂರ್ತಿ ವಿರುದ್ಧವೆಂದು ಒಂದು ಕಡೆ ನಾವು ಗುರುಗಳಾಗಿ ಇದ್ದು ಹೇಳಿದರೂ, ಮತ್ತೊಂದು ಕಡೆ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು ಹೇಳುತ್ತಿದ್ದರೂ ಯಾವ ಮಾತ್ರ ಲೆಕ್ಕ ಮಾಡದವರಿದ್ದಾರೆ. ಅಷ್ಟೇ ಅಲ್ಲದೆ ತಮ್ಮ ಬೋಧನೆಗಳಾಗಲಿ, ಆಚರಣೆಗಳಾಗಲಿ, ಭಗವದ್ಗೀತಾ ಜ್ಞಾನಕ್ಕೆ ವಿರುದ್ಧವಾಗಿ ಇವೆಯೆಂದು ಅಂದುಕೊಳ್ಳುತ್ತಿಲ್ಲ. ಒಂದು ಕಡೆ ನಾವು ಸಹ ಗೀತಾ ಬೋಧಕರೆ ಎಂದು ಹೇಳುತ್ತಾ ಭಗವದ್ಗೀತೆಯನ್ನು ಅಶಾಸ್ತ್ರೀಯವಾಗಿ ಬೊಧಿಸುತ್ತಿದ್ದಾರೆ. ಅವರು ಹೇಳುವ ಗೀತೆಯಲ್ಲಿ ಶ್ಲೋಕ ಸತ್ಯವಾಗಿ ಇರುತ್ತದೆ, ಆದರೆ ಶ್ಲೋಕ ಭಾವ ಪೂರ್ತಿಯಾಗಿ ಶಾಸ್ತ್ರಬದ್ಧತೆ ಇಲ್ಲದೇ ಇರುತ್ತದೆ.

ಉದಾಹರಣೆಗೆ ಭಗವದ್ಗೀತೆ ಆತ್ಮ ಸಂಯಮ ಯೋಗದಲ್ಲಿ ಮೊದಲ ನೆಯ ಶ್ಲೋಕದಲ್ಲಿ ನಿರಗ್ನಿ, ಯೋಗಿನ ಎಂದು ಹೇಳಿರುವಾಗ ಅದರ ಭಾವವನ್ನು ಸ್ಥೂಲವಾಗಿ ಹೇಳಿದರೆ ಅಗ್ನಿ ಇಲ್ಲದವನು ಯೋಗಿ ಅಲ್ಲವೆಂದು ಇದೆ. ಆದರೇ

ಇಲ್ಲಿ ಅಗ್ನಿ ಎಂದರೆ ಯಾವ ಅಗ್ನಿ ಎಂದು ತಿಳಿಯದವರು, ಶಾಸ್ತ್ರಬದ್ಧತೆ ಇಲ್ಲದೇ ಅಗ್ನಿ ಹೋತ್ರವನ್ನು ಮಾಡದವನು, ಯಜ್ಞ ಮಾಡದವನು ಎಂದು ಹೇಳಿದ್ದಾರೆ. ಶ್ಲೋಕದಲ್ಲಿ ಹೇಳಿರುವ ಅಗ್ನಿಯನ್ನು ಸೂಕ್ಷ್ಮ ಭಾವದೊಂದಿಗೆ ತೆಗೆದುಕೊಳ್ಳದೆ, ಸ್ಥೂಲ ಭಾವದೊಂದಿಗೆ ಹೇಳುವುದರಿಂದ ಕಾಣಿಸುವ ಅಗ್ನಿಯನ್ನು ಕುರಿತು ಯಜ್ಞಗಳು ಎಂದಿದ್ದಾರೆ. ಆ ಲೆಕ್ಕ ಪ್ರಕಾರ ಕಾಣಿಸುವ ಅಗ್ನಿಯನ್ನು ಕುರಿತು ಹೇಳಿದರೆ ವಾರಕ್ಕೆ ಒಂದುಬಾರಿಯೋ, ತಿಂಗಳಿಗೊಂದುಬಾರಿಯೋ ಯಜ್ಞಗಳನ್ನು ಮಾಡುವವರಿಗಿಂತ, ನಿತ್ಯವೂ ದಿನಕ್ಕೆ ಮೂರು ಬಾರಿ ಸ್ಟೌ ಮೇಲೆ ಅಗ್ನಿಯನ್ನು ಉರಿಸುವಂತವನು ದೊಡ್ಡವನಾಗುತ್ತಾನೆ. ಅವನಿಗಿಂತ ಹತ್ತು ನಿಮಿಷಗಳಿಗೊಮ್ಮೆ ಸಿಗರೆಟ್‌ನ್ನು ಹಚ್ಚಿ ಅಗ್ನಿಯನ್ನು ನಿಮಿಷ ನಿಮಿಷಕ್ಕೂ ಉರಿಸುವವರು ದೊಡ್ಡವರಾಗುತ್ತಾರೆ. ಇಂತಹ ಅರ್ಥಗಳು ಮನುಷ್ಯರು ಹೇಳಿಕೊಳ್ಳುತ್ತಾರೆನ್ನುವ ಉದ್ದೇಶ್ಯದಿಂದ ದೇವರು ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿ, 53ನೇ ಶ್ಲೋಕದ್ಲಲಿ ಯಜ್ಞಗಳಿಗೆ ನಾನು ತಿಳಿಯುವುದಿಲ್ಲ ಎಂದು ಹೇಳಿದ್ದಾನೆ. ದೇವರು ಆ ಮಾತನ್ನು ಹೇಳಿದರೂ ಅದನ್ನು ಕೇಳದೆ ಇರುವವರು ಇದ್ದಾರೆ. ಅಂತಹವರು ಯಜ್ಞಗಳನ್ನು ಮಾಡದವರು ಸನ್ಯಾಸಿಗಳು, ಯೋಗಿಗಳು ಆಗಲಾರರೆಂದು 'ಸಸನ್ಯಾಸೀಚ, ಯೋಗೀಚ ನ ನಿರಗ್ನಿ ರ್ನಚಾಕ್ರಿಯಃ' ಎನ್ನುವ ವಾಕ್ಯಕ್ಕೆ ಅಶಾಸ್ತ್ರೀಯ ಭಾವವನ್ನು ಹೇಳುತ್ತಿರುವರು.

ದೇವರ ಜ್ಞಾನ ತ್ರೈತ ಸಿದ್ಧಾಂತದ ಪ್ರಕಾರ ಸ್ಥೂಲ ಸೂಕ್ಷ್ಮಗಳಾಗಿ ಇದೆಯೆಂದು, ಅದರಲ್ಲಿ ಸ್ಥೂಲವಾಗಿ ಒಂದು ಭಾಗವಿರುವಾಗ, ಸೂಕ್ಷ್ಮವಾಗಿ ಮೂರು ಭಾಗಗಳಿದೆಯೆಂದು ದೇವರು ಹೇಳಿದ ಗ್ರಂಥ ಪ್ರಮಾಣಗಳಲ್ಲಿ ತಿಳಿಯುತ್ತಿದೆ. ಹಾಗೆ ದೇವರು ಹೇಳಿದರೂ, ನಿರಗ್ನಿ ಎಂದರೆ ಕಾಣಿಸದ ಜ್ಞಾನಾಗ್ನಿ ಎಂದು ತಿಳಿಯದವರು, ಪೂರ್ತಿಯಾಗಿ ಶಾಸ್ತ್ರೀಯತೆ ಇಲ್ಲದವರಾಗುತ್ತಾರೆ. ಅಷ್ಟೇ ಅಲ್ಲದೆ ದೇವರ ಮಾತಿಗೆ ವಿರುದ್ಧವಾಗಿರುವವರಾಗುತ್ತಾರೆ. ಜ್ಞಾನಾಗ್ನಿಯಿಂದ ಕರ್ಮಗಳು ಸುಟ್ಟುಹೋಗುವವೆಂದು ದೇವರು ಹೇಳಿದ ಮಾತನ್ನು ಮರೆತಿರುವ ವರಾಗುವರು. ಈ ದಿನ ಸೂಕ್ಷ್ಮವಾಗಿ ದೇವರ ಜ್ಞಾನವನ್ನು ಹೇಳುವವರಿಗಿಂತ,

ಸ್ಥೂಲವಾಗಿ ಹೇಳುವವರೇ ಹೆಚ್ಚಾಗಿ ಇದ್ದಾರೆ. ಒಂದು ವೇಳೆ ಪ್ರಬೋಧಾನಂದ ಯೋಗೀಶ್ವರರಂತವರು ಸತ್ಯವನ್ನು ಗ್ರಂಥಗಳಲ್ಲಿ ಬರೆದರೂ, ನನ್ನಂತಹವರು ಬೋಧನೆಯಾಗಿ ಹೇಳಿದರೂ, ಯಾವ ಮಾತ್ರವೂ ಕೇಳದೇ ಮೇಲಾಗಿ ನಮ್ಮನ್ನೇ ಹೇಳನವಾಗಿ ಮಾತನಾಡುವವರೂ ಇದ್ದಾರೆ. ಅಂತಹವರನ್ನು ಭೂತಗಳು ಗ್ರಹಗಳು ಚೆನ್ನಾಗಿ ನೆನಪಿಟ್ಟುಕೊಳ್ಳುತ್ತವೆ. ಸಮಯ ಬಂದಾಗ ಅವರು ಎಂತಹವರನ್ನಾದರೂ ಶಿಕ್ಷಿಸದೇ ಬಿಡುವುದಿಲ್ಲ. ಆದ್ದರಿಂದ ಆಯಾ ಮತಗಳಲ್ಲಿ ತಮ್ಮ ತಮ್ಮ ಗ್ರಂಥಗಳನ್ನು ಬೋಧಿಸುವವರು ಭಯದಿಂದ ಬೋಧಿಸಬೇಕು. ಸೂಕ್ಷ್ಮ ಜ್ಞಾನವನ್ನು ಸ್ಥೂಲವಾಗಿ ಬೋಧಿಸಿದರೇ, ಸಂಪೂರ್ಣ ಜ್ಞಾನ ತಿಳಿದ ಭೂತಗಳು, ಗ್ರಹಗಳು ಸುಮ್ಮನೆ ಬಿಡುವುದಿಲ್ಲ. ಆದ್ದರಿಂದ ಪ್ರತಿ ಬೋಧಕನೂ, ಪ್ರತಿ ಸ್ವಾಮೀ ಭೂತಗಳ ಭಯವಿದ್ದು ಅಥವಾ ದೇವದೂತಗಳ ಭಯವಿದ್ದು ಜ್ಞಾನವನ್ನು ಸಕ್ರಮವಾಗಿ ಭೋಧಿಸಬೇಕೆಂದು ತಿಳಿಸುತ್ತಿದ್ದೇನೆ. ಕೇಳುವ ನಿನ್ನಂಥವರು ಸಹ ಸ್ಥೂಲ ಸೂಕ್ಷ್ಮ ತಾರತಮ್ಯಗಳನ್ನು ದೃಷ್ಠಿಯಲ್ಲಿಟ್ಟುಕೊಂಡು ಕೇಳಬೇಕು.

**ವ್ಯಕ್ತಿ :–** ಗುರುಗಳೇ! ನೀವು ಇಲ್ಲಿಯವರೆಗು ಬೋಧಿಸಿದ ಬೋಧನೆಯಿಂದ ನನ್ನಲ್ಲಿರುವ ಸಂಶಯಗಳೆಲ್ಲವೂ ತೀರಿಹೋದವು. ತ್ರೈತ ಸಿದ್ಧಾಂತವೆಂದರೇ ಏನೋ ಚೆನ್ನಾಗಿ ಅರ್ಥವಾಗಿದೆ. ಇಂದಿನಿಂದ ಪ್ರಕೃತಿ ಸ್ಥೂಲವಾದದ್ದೆಂದು, ಪರಮಾತ್ಮ ಸೂಕ್ಷ್ಮವಾದವನೆಂದು ದೃಷ್ಠಿ ಹೊಂದಿ, ಸೂಕ್ಷ್ಮವಾಗಿರುವ ಜೀವಾತ್ಮ, ಆತ್ಮ, ಪರಮಾತ್ಮಗಳನ್ನು ಕುರಿತು ಅಥವಾ ಕ್ಷರ, ಅಕ್ಷರ, ಪುರುಷೋತ್ತಮ ಎನ್ನುವ ಮೂವರನ್ನು ಕುರಿತು ತಿಳಿದುಕೊಳ್ಳುತ್ತೇನೆ, ಇತರರಿಗೂ ಸಹ ತಿಳಿಸುತ್ತೇನೆ.

**ಸಮಾಪ್ತಿ**



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದಿ ಅಸತ್ಯವಲ್ಲ.**

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ- ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

- ▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.
- ▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.
- ▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.
- ▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.
- ▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)
- ▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
   ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ





**ಸುವಾರ್ತ ಕ್ರೈಸ್ತವ ಸಂಘ (S.K.S)**

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

మూల కర్త

త్రిమత ఏకైక గురువు, త్రైత సిద్ధాంత ఆదికర్త

శ్రీశ్రీశ్రీ ఆచార్య ప్రబోధానంద యోగీశ్వరరు

# రావణబ్రహ్మ ద్రావిడ బ్రాహ్మణ సంఘ




రావణబ్రహ్మ ద్రావిడ బ్రాహ్మణ సంఘ (R.B.D.B.S)
(Regd.No.: 309/2015)
తార్నాక, హైదరాబాద్, తెలంగాణ–500007.
e-mail id : info@ravanabrahmadravidabrahmanasangham.org

www.ravanabrahmadravidabrahmanasangham.org

